# ಧರ್ಮಚಕ್ರ

ಸಾಧಾರಣ ಮನುಷ್ಯನೊಂದರ ಧರ್ಮಚಕ್ರ



ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org







# ಧರ್ಮಚಕ್ರ


ಗ್ರಂಥಕರ್ತ : **ತ್ರಿಮತ ಏಕ್ಯೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಏಪ್ರಿಲ್–2017

ಪ್ರತಿಗಳು : 1000 **ಬೆಲೆ. 125/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

**ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)**
ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ), ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ), ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ) Cell :9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ,ತೊಣಚಿಕೊಪ್ಪಲ್,ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ), ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಧರ್ಮಚಕ್ರ

'ಧರ್ಮ' ಎನ್ನುವ ಪದ ಎಲ್ಲರಿಗೂ ಸುಪರಿಚಯವೇ. ಆದರೇ ಅದು ಕೆಲವರಿಗೆ ಕೇಳುವುದರವರೆಗೇ ಪರಿಮಿತಿಯಾಗಿದೆ. ಧರ್ಮ ಪ್ರತಿ ವಸ್ತುವಿಗು ಇದೆ. ವಸ್ತುಗಳು ಬೇರೆಬೇರೆಯಾಗಿವೆ, ಅವುಗಳ ಧರ್ಮಗಳು ಕೂಡಾ ಬೇರೆಬೇರೆಯಾಗಿವೆ. ಯಾವುದಕ್ಕಾದರೂ ಶಾಶ್ವತವಾಗಿರುವುದು ಧರ್ಮ. ಉದಾಹರಣೆಗೆ ನೀರನ್ನು ತೆಗೆದುಕೊಳ್ಳೋಣ. ನೀರನ್ನು ಒಂದುಕಡೆ ಇರುವುದನ್ನು ಎಷ್ಟು ಭಾಗಗಳಾಗಿ ಆದರೂ ಬೇರ್ಪಡಿಸಬಹುದು. ಹಾಗೆಯೇ ಎಷ್ಟು ಭಾಗಗಳಾಗಿರುವ ನೀರನ್ನಾದರೂ ಪುನಃ ಒಂದಾಗಿ ಬೆರೆಸಬಹುದು. ನೀರನ್ನು ಸೇರಿಸಿದಾಗ ಬೆರೆಯುವುದು. ಸೇರಿಸಿದಾಗ ಬೆರೆಯುತ್ತದಾದ್ದರಿಂದ ಎಷ್ಟು ನೀರನ್ನು ಸೇರಿಸಿರುವುದು ತಿಳಿಯುವುದಿಲ್ಲ. ನೀರನ್ನು ಚಾಕುವಿನಿಂದ ಕತ್ತರಿಸಿದರೂ ಅದು ಬೆರೆತುಹೋಗುತ್ತಿರುತ್ತದೆ. ನೀರು ತಗ್ಗು ಪ್ರದೇಶಕ್ಕೆ ಪ್ರವಹಿಸುತ್ತದೆ. ನೀರನ್ನು ಬಿಸಿಮಾಡಿದರೆ ಆವಿಯಾಗಿ ಬದಲಾಗುತ್ತದೆ. ಆವಿಯನ್ನು ತಂಪುಮಾಡಿದರೆ ಪುನಃ ನೀರಾಗಿ ಬದಲಾಗುತ್ತದೆ. ಇವೆಲ್ಲವೂ ನೀರಿಗಿರುವ ಶಾಶ್ವತ ಲಕ್ಷಣಗಳು. ಎಂದಿಗೂ ಬದಲಾಗದ ಶಾಶ್ವತ ಲಕ್ಷಣಗಳನ್ನು 'ಧರ್ಮಗಳು' ಎನ್ನುತ್ತೇವೆ. ಅವುಗಳಿಗಿರುವ ಶಾಶ್ವತ ಧರ್ಮಗಳನ್ನನುಸರಿಸಿ ಅವುಗಳನ್ನು ಗುರುತಿಸಬಹುದು. ಹಾಗೆ ವಸ್ತುವನ್ನು ಅನುಸರಿಸಿ ಅದಕ್ಕಿರುವ ಧರ್ಮವನ್ನು ಹೇಳಬಹುದು.

ದೇವರಿಂದ ಸೃಷ್ಟಿಸಲ್ಪಟ್ಟಿರುವುದು ಪ್ರಕೃತಿ. ಪ್ರಕೃತಿಯಲ್ಲಿನ ಪ್ರತಿ ವಸ್ತುವಿಗು, ಪ್ರತಿ ದ್ರವಕ್ಕು, ಪ್ರತಿ ವಾಯುವಿಗು, ಪ್ರತಿ ಲೋಹಕ್ಕು ಧರ್ಮಗಳು ಇವೆ. **ಸೃಷ್ಟಿಸಲ್ಪಟ್ಟಿರುವುದು ಯಾವುದಾದರೂ ಯಾವುದೊ ಒಂದು ಧರ್ಮವನ್ನಾಗಲಿ, ಧರ್ಮಗಳನ್ನಾಗಲಿ ಹೊಂದಿರುತ್ತದೆ. ಸೃಷ್ಟಿಸಲ್ಪಡದಿರುವುದು ಏನಾದರೆ ಇದೆಯೋ ಅದಕ್ಕೆ ಧರ್ಮ ಎನ್ನುವುದೂ ಯಾವುದು ಇರುವುದಿಲ್ಲ**. ಆ ಲೆಕ್ಕ ಪ್ರಕಾರ ಪ್ರಕೃತಿ ದೇವರಿಂದ ಸೃಷ್ಟಿಸಲ್ಪಡುವುದರಿಂದ ಪ್ರಕೃತಿಯಲ್ಲಿನ ಸಮಸ್ತ ವಸ್ತು, ದ್ರವ, ವಾಯುಗಳಿಗು ಧರ್ಮಗಳು ಇವೆಯೆಂದು ಹೇಳಬಹುದು. ಪ್ರಪಂಚದಲ್ಲಿ ಧರ್ಮ ಇಲ್ಲದಿರುವುದು ಏನು ಇಲ್ಲ. ಪ್ರಕೃತಿ ಸಂಬಂಧವಾದವುಗಳಿಗೇ ಅಲ್ಲದೆ ಆತ್ಮಸಂಬಂಧವಾದ ಮನುಷ್ಯನಿಗೆ (ಜೀವಿಗೆ) ಧರ್ಮ ಇದೆ.

**ಪ್ರಶ್ನೆ :– ನೀವು ಇಲ್ಲಿಯವರೆಗು ಹೇಳಿದ ಧರ್ಮಗಳು ವಾಸ್ತವವೇ ಆದರೂ ನಾವು ಅವುಗಳಿಗಿಂತ ಹೆಚ್ಚಾಗಿ ತಿಳಿದಿರುವುದು ದೇವರ ಧರ್ಮಗಳನ್ನು ಕುರಿತು. ದೇವರು ತನ್ನ ಧರ್ಮಗಳಿಗೆ ಹಾನಿ ಏರ್ಪಟ್ಟಾಗ ದೇವರು ಸ್ವತಃವಾಗಿ ಉದ್ಭವಿಸಿ, ಪುನಃ ತನ್ನ ಧರ್ಮಗಳನ್ನು ಪ್ರತಿಷ್ಠಿಸುತ್ತಾನೆಂದು, ಅಧರ್ಮಗಳನ್ನು ಇಲ್ಲದಂತೆ ಮಾಡುತ್ತಾನೆಂದು ಭಗವದ್ಗೀಗೆ ಜ್ಞಾನಯೋಗದಲ್ಲಿ 6, 7, 8 ಶ್ಲೋಕಗಳಲ್ಲಿ ಹೇಳಿದ್ದಾನೆ. ಇದಕ್ಕು ಮೊದಲು ನೀವು ಒಂದು ಸೂತ್ರವನ್ನು ಹೇಳಿದ್ದೀರ. ಅದೇನೆಂದರೆ! ಸೃಷ್ಠಿಸಲ್ಪಟ್ಟ ಪ್ರತಿಯೊಂದಕ್ಕು ಧರ್ಮಗಳು ಇರುತ್ತವೆಯೆಂದು ಹೇಳಿದ್ದೀರ. ಈಗ ದೇವರಿಗು ಕೂಡಾ ಧರ್ಮಗಳಿರುವಂತೆ ನೀವು ಭಗವದ್ಗೀತೆ ಯಲ್ಲಿಯೇ ಶ್ಲೋಕಗಳನ್ನು ತೋರಿಸಿದ್ದೀರ. ನಿಮ್ಮ ಸೂತ್ರದ ಪ್ರಕಾರ ಧರ್ಮಗಳಿವೆ ಎಂದರೆ ದೇವರು ಕೂಡಾ ಸೃಷ್ಠಿಸಲ್ಪಟ್ಟಿದ್ದಾನೆಂದಲ್ಲವೆ ಅರ್ಥ. ದೇವರ ಧರ್ಮಗಳನ್ನು ಕುರಿತು ಭಗವದ್ಗೀತೆಯಲ್ಲಿ ಬಹಳಕಡೆ ಹೇಳಲ್ಪಟ್ಟಿದೆ. ಉಳಿದ ಎರಡು ದೈವಗ್ರಂಥ ಗಳಾದ ಖುರ್‌ಆನ್, ಬೈಬಲ್‌ನಲ್ಲಿ ಕೂಡಾ ದೇವರ ಧರ್ಮಗಳನ್ನು ಕುರಿತು ಹೇಳಿದ್ದಾರೆ. ದೇವರು ಧರ್ಮಗಳಿಂದ ಕೂಡಿಕೊಂಡಿರುವ ವನೆಂದು ಕೆಲವರು ಜ್ಞಾನಸಂಪನ್ನರಾದವರು ಕೂಡಾ ಹೇಳಿದಾಗ ಕೇಳಿದ್ದೇವೆ. ತನ್ನ ಧರ್ಮಗಳನ್ನು ಆಚರಿಸುವವರನ್ನು ದೇವರು ಇಷ್ಟಪಡುತ್ತಾನೆಂದು, ಅವರಿಗೆ ಮೋಕ್ಷವನ್ನು ಉಂಟುಮಾಡುತ್ತಾನೆಂದು, ಎಂದಿಗೂ ದುಃಖವನ್ನು ಹೊಂದದ ಮುಕ್ತಿಯನ್ನು ಮನುಷ್ಯನಿಗೆ ಪ್ರಸಾದಿಸುತ್ತಾನೆಂದು ಹೇಳಿದಾಗ ಕೇಳಿದ್ದೇವೆ. ಇದೆಲ್ಲ ನೋಡಿದ ನಂತರ ನಿಮ್ಮ ಸೂತ್ರದ ಪ್ರಕಾರ ದೇವರು ಕೂಡಾ ಇನ್ನೊಬ್ಬರಿಂದ ಸೃಷ್ಠಿಸಲ್ಪಟ್ಟವನೇ ಯೆಂದು ಹೇಳಬಹುದು. ನಿಮ್ಮ ಸೂತ್ರ ಸತ್ಯವಾದರೆ 'ದೇವರು ಸೃಷ್ಠಿಸಲ್ಪಟ್ಟಿದ್ದಾನೆ' ಎನ್ನುವುದು ಸತ್ಯ. ಒಂದುವೇಳೆ ದೇವರು ಇತರರಿಂದ ಸೃಷ್ಠಿಸಲ್ಪಡಲಿಲ್ಲ ಎಂದರೆ ನಿಮ್ಮ ಸೂತ್ರ ತಪ್ಪಾಗುತ್ತದೆ. ಈಗ ನೇರವಾಗಿ ಕೇಳುತ್ತಿದ್ದೇವೆ. ನಿಮ್ಮ ಸೂತ್ರ ತಪ್ಪಾ? ಸರಿಯಾ?**

**ಉತ್ತರ :–** ನನ್ನ ಸೂತ್ರ ತಪ್ಪು ಎಂದು ಹೇಳುವುದಕ್ಕೆ ಅವಕಾಶವೇ ಇಲ್ಲ. ನಿಮ್ಮ ಪ್ರಶ್ನೆಗೆ ಉತ್ತರ ಬೇಕೆಂದರೆ **"ಧರ್ಮಚಕ್ರ"** ಎಂದರೆ ಏನೋ

ತಿಳಿಯಬೇಕಾಗಿರುತ್ತದೆ. ಧರ್ಮಚಕ್ರವನ್ನು ಕುರಿತು ತಿಳಿಯುವುದಾದರೆ ದೇವರ ಧರ್ಮಗಳನ್ನು ಕುರಿತು ತಿಳಿಯಬಹುದು. ದೇವರ ಧರ್ಮಗಳು ತಿಳಿಯಲ್ಪಟ್ಟಾಗ ದೇವರ ಸಮಾಚಾರ ಎಲ್ಲಾ ಪೂರ್ತಿಯಾಗಿ ತಿಳಿಯಬಲ್ಲದು. ದೇವರ ಸಮಾಚಾರವನ್ನು ಸಂಪೂರ್ಣವಾಗಿ ತಿಳಿದಾಗ ದೇವರ ಧರ್ಮಗಳಲ್ಲಿನ ಮರ್ಮ ತಿಳಿಯುತ್ತದೆ.

**ಪ್ರಶ್ನೆ :– ನೀವು ನಾವು ಕೇಳಿದ ಪ್ರಶ್ನೆಗೆ ನೇರವಾಗಿ ಉತ್ತರ ಹೇಳುತ್ತಿಲ್ಲ. ಪ್ರಶ್ನೆಯನ್ನು ದಾಟಿಹಾಕುತ್ತಿದ್ದೀರ. ನಿಮ್ಮ ಸೂತ್ರ ನಿಜವಾ, ಸುಳ್ಳಾ ಒಂದೇ ಮಾತಿನಲ್ಲಿ ಹೇಳಿರಿ.?**

**ಉತ್ತರ :–** ನನ್ನ ಸೂತ್ರ ಸತ್ಯವೆಂದೇ ಹೇಳುತ್ತಿದ್ದೇನೆ. ನಾನು ಹೇಳಿರುವುದು ನಿಜಕ್ಕೂ ಸತ್ಯ.

**ಪ್ರಶ್ನೆ :– ಆದರೆ ದೇವರು ಯಾರಿಂದ ಸೃಷ್ಠಿಸಲ್ಪಟ್ಟಿದ್ದಾನೆ.? ಒಂದೇ ಮಾತಿನಲ್ಲಿ ಉತ್ತರ ಹೇಳಿರಿ?**

**ಉತ್ತರ :–** ದೇವರಿಂದ ಸೃಷ್ಠಿಸಲ್ಪಟ್ಟಿದ್ದಾನೆ.

**ಪ್ರಶ್ನೆ :– ನಾನು ಕೇಳುತ್ತಿರುವುದು ದೇವರನ್ನು ಕುರಿತು?**

**ಉತ್ತರ :–** ನಾನು ಹೇಳುತ್ತಿರುವುದು ದೇವರನ್ನು ಕುರಿತೇ. ದೇವರು ಸೃಷ್ಠಿಸಲ್ಪಟ್ಟಿದ್ದಾನೆಂದು ಹೇಳುತ್ತಿದ್ದೇನೆ. ವಾಸ್ತವವಾಗಿ ದೇವರು ಸೃಷ್ಠಿಸಲ್ಪಡುವವನು ಅಲ್ಲವೆಂದು, ದೇವರ ಸೃಷ್ಠಿ ಯಾರಿಗೂ ತಿಳಿದಿಲ್ಲವೆಂದು ಹೇಳುತ್ತಿದ್ದೇವೆ. ಇದೆಲ್ಲವೂ ಅರ್ಥ ಆಗಬೇಕೆಂದರೆ ಧರ್ಮಚಕ್ರವನ್ನು ವಿವರವಾಗಿ ತಿಳಿಯುವುದಕ್ಕೆ ಪ್ರಯತ್ನಿಸೋಣ. ನಾನು ಒಂದು ಸಲ ದೇವರು ಧರ್ಮಗಳಿಗೆ ತಿಳಿಯುತ್ತಾನೆ ಎಂದು, ಹಾಗೆ ದೇವರು ಧರ್ಮಗಳಿಗೆ ಅತೀತನೆಂದು, ಧರ್ಮಾತೀತನಾದ ದೇವರು ಧರ್ಮಗಳಿಗೆ ತಿಳಿಯುವುದಿಲ್ಲವೆಂದು ಹೇಳುತ್ತಿರುತ್ತೇನೆ. ನನ್ನ ಮಾತುಗಳು ದ್ವಂದ್ವ ಧೋರಣಿಯಲ್ಲಿ ಇರುವುದರಿಂದ ಬರೆಯುವವನಿಗಾ ಹುಚ್ಚು ಅಥವಾ ಓದುವವನಿಗಾ ಎಂದು ಅನುಮಾನ ಬರುತ್ತದೆ. ಆದ್ದರಿಂದ ಅಲ್ಲಿಯವರೆಗು

ಹೋಗದಂತೆ ನನ್ನ ಮಾತುಗಳು ನಿಮಗೆ ಅರ್ಥವಾಗುವುದಕ್ಕೆ ಮೊದಲು ಧರ್ಮಚಕ್ರವನ್ನು ಕುರಿತು ತಿಳಿದುಕೊಳ್ಳೋಣ.

ಧರ್ಮ ಎಂದರೇ ಬದಲಾವಣೆಯಾಗದ ಲಕ್ಷಣವೆಂದು ಹೇಳಬಹುದು. ಹುಣಿಸೆಕಾಯಿಗೆ ಹುಳಿ ಬದಲಾವಣೆಯಾಗದ ಶಾಶ್ವತ ಲಕ್ಷಣ. ಆದ್ದರಿಂದ ಹುಣಿಸೆಕಾಯಿಯ ಧರ್ಮ ಹುಳಿಯೆಂದು ಹೇಳಬಹುದು. ಮಾವಿನಕಾಯಿ ಎಳೆಯದಾಗಿ ಹಸಿಕಾಯಿಯಾಗಿ ಇರುವಾಗ ವಗರಾಗಿ, ಪೂರ್ತಿ ಕಾಯಾಗಿ ಬದಲಾದಾಗ ಹುಳಿಯಾಗಿ, ಪೂರ್ತಿ ಹಣ್ಣಾಗಿ ಬದಲಾದಾಗ ಸಿಹಿಯಾಗಿರುತ್ತದೆ. ಆದ್ದರಿಂದ ಮಾವಿನಕಾಯಿಯ ಧರ್ಮ ಹುಳಿಯೆಂದಾಗಲಿ, ವಗರು ಎಂದಾಗಲಿ, ಸಿಹಿ ಎಂದಾಗಲಿ ಹೇಳಲಾರೆವು. ಶಾಶ್ವತವಾಗಿ ಇರುವುದೇ ಧರ್ಮವಾಗುತ್ತದೆ. ಶಾಶ್ವತವಾಗಿರುವ ಲಕ್ಷಣಗಳನ್ನು ಅನುಸರಿಸಿ ಇದು ಇಂತಹ ವಸ್ತು ಎಂದು ಹೇಳಿದಂತೆ ಹಾಗೇ ಶಾಶ್ವತವಾಗಿ ಇರುವ ಲಕ್ಷಣಗಳು ಅಥವಾ ಧರ್ಮಗಳನ್ನು ಅನುಸರಿಸಿ ಈತನು ಇಂತಹ ದೇವರು ಎಂದು ಹೇಳಬಹುದು. ದೇವರನ್ನು ದೇವರ ಧರ್ಮಗಳನ್ನು ಅನುಸರಿಸಿ ತಿಳಿಯಬಹುದು. ಆದ್ದರಿಂದ ದೇವರ ಧರ್ಮಗಳನ್ನು ತಿಳಿಯುವುದಕ್ಕೆ ದೇವರ ಸಮಾಚಾರ ಅಥವಾ ದೇವರ ಜ್ಞಾನವನ್ನು ಮೊದಲು ತಿಳಿಯಬೇಕಾಗಿದೆ. ದೇವರ ಜ್ಞಾನದ ಮುಖಾಂತರ ದೇವರ ಧರ್ಮಗಳನ್ನು ತಿಳಿದು, ದೇವರ ಧರ್ಮಗಳ ಮುಖಾಂತರ ದೇವರನ್ನು ತಿಳಿಯಬಹುದು.

ಯಾವ ಧರ್ಮವಾದರೂ ಸೃಷ್ಠಿಸಲ್ಪಟ್ಟವರೆಗೇ ಇದೆ ಅದೇ ಸೂತ್ರವಾದಾಗ ದೇವರು ಸೃಷ್ಠಿಸಲ್ಪಟ್ಟವನಾ ಅಥವಾ ಸೃಷ್ಠಿಸಿದವನಾ? ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಇರುವ ಸತ್ಯವನ್ನು ಹೇಳಿದರೇ ದೇವರು ಸಮಸ್ತವನ್ನು ಸೃಷ್ಠಿಸಿದವನು, ದೇವರು ಯಾರಿಂದಲೂ ಸೃಷ್ಠಿಸಲ್ಪಡಲಿಲ್ಲ. ಈ ವಿಷಯ ನನಗೆ ಚೆನ್ನಾಗಿ ತಿಳಿದಿದೆ. ಆದರೆ ನಾನು ದೇವರಿಗೆ ಧರ್ಮಗಳು ಇವೆಯೆಂದು ಹೇಳುತ್ತಿದ್ದೇನೆ. ನಾನು ಹೇಳುವುದೇ ಅಲ್ಲ ದೈವ ಗ್ರಂಥಗಳು ಸಹಿತವು ದೇವರ ಧರ್ಮಗಳನ್ನು ಕುರಿತು ಹೇಳುತ್ತಿವೆ. ದೇವರು ಸೃಷ್ಠಿಸಲ್ಪಡದವನು ಅದಾಗ ಆತನಿಗೆ ಧರ್ಮಗಳಿವೆಯೆಂದು

ಹೇಳುವುದು ಅಜ್ಞಾನವಾಗುತ್ತದೆ ಅಲ್ಲವೆ! ಎಂದು ಇತರರು ಕೇಳಬಹುದು. ಅಜ್ಞಾನವಾಗುತ್ತದೆ ಎಂದು ತಿಳಿದು ದೇವರಿಗೆ ಧರ್ಮಗಳಿವೆಯೆಂದು ನಾನು ನನ್ನೊಂದಿಗೆ ಮೂರು ದೈವಗ್ರಂಥಗಳು ಹೇಳುತ್ತಿವೆ. ಹಾಗೆ ಹೇಳುವುದಕ್ಕೆ ಬಲವಾದ ಕಾರಣ ಇದೆ. ಅದೇನೆಂದರೆ! ಒಬ್ಬರೈತ ತನ್ನ ಹೊಲದಲ್ಲಿ ಬೀಜವನ್ನು ಬಿತ್ತುವುದಕ್ಕೆ ಶುಭ್ರವಾದ ಕಾಳುಗಳನ್ನು ಆರಿಸಿಕೊಂಡು ಅವುಗಳಲ್ಲಿ, ಮಣ್ಣು, ಕಲ್ಲು ಇಲ್ಲದಿರುವವು ತೆಗೆದುಕೊಂಡು ಹೊಲದಲ್ಲಿ ಬಿತ್ತುತ್ತಾನೆ. ಆದರೇ ಎಳ್ಳು ಎನ್ನುವ ಕಾಳನ್ನು ಹೊಲದಲ್ಲಿ ಬಿತ್ತಬೇಕೆಂದರೆ ಆ ಕಾಳಿನೊಂದಿಗೆ ಸ್ವಲ್ಪ ಮಣ್ಣು ಅಥವಾ ಸ್ವಲ್ಪ ಮರಳನ್ನು ಬೆರೆಸಿಕೊಂಡು ಬಿತ್ತಬೇಕಾಗಿರುತ್ತದೆ. ಹಾಗೆ ಬೆರೆಸಿಕೊಳ್ಳದೆ ಹೋದರೆ ಎಳ್ಳು ಕೈಯಿಂದ ಜಾರಿ ಹೊಲದಲ್ಲಿ ಬೀಳುವುದಿಲ್ಲ. ಅವು ಒಂದಕ್ಕೊಂದು ಅಂಟಿಕೊಂಡಂತಿರುತ್ತವೆ. ಸ್ವಲ್ಪ ಕೈಯನ್ನು ಲೂಜು ಮಾಡಿದರೆ ಕಾಳುಗಳು ಕುಪ್ಪೆಯಾಗಿ ಬಿದ್ದುಹೋಗುತ್ತವೆ. ಸ್ವಲ್ಪ ಗಟ್ಟಿಯಾಗಿ ಹಿಡಿದುಕೊಂಡರೆ ಕಾಳುಗಳು ಜಾರಿ ಹೊಲದಲ್ಲಿ ಬೀಳದೆ ಹಾಗೆ ಕೈಯಲ್ಲಿಯೇ ಇರುತ್ತವೆ.

ಎಲ್ಲರೂ ಎಲ್ಲಾ ಬೀಜಗಳನ್ನು ಶುಭ್ರಮಾಡಿ ಮಣ್ಣು, ಮರಳು ಇಲ್ಲದಿರುವವು ಹೊಲದಲ್ಲಿ ಬಿತ್ತಿದರೆ, ಎಳ್ಳನ್ನು ಬಿತ್ತುವವನು ಮಾತ್ರ ಮಣ್ಣು, ಮರಳು ಬೆರೆಸಿ ಬಿತ್ತುತ್ತಿದ್ದಾನೆ. ಹಾಗೆಯೇ ಧರ್ಮಗಳು ಇಲ್ಲದ ದೇವರನ್ನು ತಿಳಿಯುವುದಕ್ಕೆ, ಸೃಷ್ಠಿಸಲ್ಪಡದ ದೇವರನ್ನು ತಿಳಿಯುವುದಕ್ಕೆ ದೇವರಿಗೆ ಧರ್ಮಗಳನ್ನು ಅದೇ ಕೆಲಸವಾಗಿ ಸೇರಿಸಬೇಕಾಗಿ ಬಂದಿದೆ. ಮನುಷ್ಯರಿಗೆ ಧರ್ಮಗಳಿರುವವೇ ತಿಳಿಯುತ್ತವೆ. ಆದ್ದರಿಂದ ದೇವರನ್ನು ತಿಳಿಯುವುದಕ್ಕೆ ಇಲ್ಲದ ಧರ್ಮಗಳನ್ನು ದೇವರಿಗೆ ಕಲ್ಪಿಸಿ, ಧರ್ಮಗಳ ಪ್ರಕಾರ ದೇವರನ್ನು ಅರ್ಥ ಮಾಡಿಕೊಂಡಾಗ ನಂತರ ಧರ್ಮಗಳನ್ನು ತೆಗೆದುಹಾಕಿ ದೇವರನ್ನು ನೋಡಬೇಕು. ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಂದು ಸಮಾಚಾರವನ್ನು ಕಾಗದದಲ್ಲಿ ಬರೆದು ಇತರರಿಗೆ ಪೋಸ್ಟುಮೂಲಕ ಕಳಿಸುತ್ತೇವೆ. ಯಾವ ವಿಧವಾಗಿ ಕಳಿಸಿದರೂ ಬರೆಯಲ್ಪಟ್ಟ ಸಮಾಚಾರವಿರುವ ಕಾಗದವನ್ನು ಮಡಚಿ ಒಂದು ಕವರ್‌ನಲ್ಲಿಟ್ಟು ಕಳಿಸುತ್ತೇವೆ. ಕವರ್ ಮೇಲೆ ಯಾರಿಗೆ ಕಳಿಸಬೇಕೊ

ಅವರ ಅಡ್ರಸ್ ಬರೆದಿರುತ್ತದೆ. ಸೇರಬೇಕಾದವರಿಗೆ ಸೇರಿದಾಗ ಕವರ್ ತೆಗೆದು ಪಕ್ಕದಲ್ಲಿ ಹಾಕಿ ಕಾಗದದಲ್ಲಿ ಬರೆದ ಸಮಾಚಾರವನ್ನು ನೋಡೋಣ. ಅಲ್ಲಿಗೆ ಸೇರುವರೆಗು ಕವರ್‌ಗೆ ಪ್ರಾಧಾನ್ಯತೆ ಇದೆ. ಉತ್ತರ ಸೇರಿದ ನಂತರ ಕವರ್‌ಗೆ ಸ್ವಲ್ಪವೂ ಬೆಲೆಯಿಲ್ಲ. ಕವರ್‌ನನ್ನು ಅಡ್ಡವಾಗಿ ಹರಿದು ಒಳಗಿನ ಕಾಗದವನ್ನು ಮಾತ್ರ ಓದುತ್ತೇವೆ. ಅಲ್ಲಿಯವರೆಗು ಬೆಲೆಯುಳ್ಳ ಕವರ್ ಉತ್ತರ ಸೇರಿಹೋದ ನಂತರ ಹೇಗೆ ಬೆಲೆಯಿಲ್ಲದೆ ಹೋಗಿದೆಯೋ ದೇವರ ವಿಷಯದಲ್ಲಿ ದೇವರ ಸಮಾಚಾರ ತಿಳಿಯುವವರೆಗು ಧರ್ಮದೊಂದಿಗೆ ಅಗತ್ಯವಿದೆ. ದೇವರ ವಿಷಯ ತಿಳಿದ ನಂತರ ಧರ್ಮದೊಂದಿಗೆ ಅಗತ್ಯವಿಲ್ಲ.

ತಿಳಿಯಲ್ಪಡದ ದೇವರನ್ನು ತಿಳಿಯುವುದಕ್ಕೆ ಧರ್ಮಗಳಿರುವ ದೇವರನ್ನು ಮೊದಲು ತಿಳಿದರೆ ನಂತರ ಧರ್ಮಗಳಿಲ್ಲದ ದೇವರು ತಿಳಿಯುತ್ತಾನೆ. ಆದ್ದರಿಂದ ದೇವರು ತನ್ನನ್ನು ಧರ್ಮಗಳಿರುವ ದೇವರಾಗಿ ತಯಾರುಮಾಡಿ, ಆತನು ಹೊರತು ನೀವು ತಿಳಿಯಲ್ಪಟ್ಟ ದೇವರು ಇಲ್ಲವೆಂದು ಹೇಳಿದ್ದಾರೆ. ಆತನೇ ನಿಮಗೆ ಆರಾಧ್ಯದೈವ ಎಂದು ಹೇಳಿದ್ದಾನೆ. ಆ ವಿಧಾನ ಎಲ್ಲವೂ ಮೂರು ಗ್ರಂಥಗಳಲ್ಲಿ ಸಂಪೂರ್ಣವಾಗಿ ಹೇಳುವುದಾಗಿದೆ. ದೈವಗ್ರಂಥಗಳಲ್ಲಿ ಎಂಭತ್ತರಷ್ಟು ಹೇಳಿದ ಧರ್ಮಗಳಿರುವ ದೇವರೇ ಸರಿಯಾಗಿ ಮನುಷ್ಯರಿಗೆ ಅರ್ಥ ವಾಗದಿರುವಾಗ ಸ್ವಲ್ಪಮಟ್ಟಿನ ಸಮಾಚಾರವಿರುವ ಧರ್ಮಗಳಿಲ್ಲದ ದೇವರನ್ನು ಕುರಿತು ಏನು ಅರ್ಥವಾಗಲಿಲ್ಲವೆಂದೇ ಹೇಳಬಹುದು. ಧರ್ಮಗಳು ಇಲ್ಲದ ದೇವರು, ಸರ್ವವನ್ನು ಸೃಷ್ಠಿಸಿದ ದೇವರು ಧರ್ಮಗಳಿರುವ ದೇವರನ್ನು ಸೃಷ್ಠಿಸಿ ಆ ದೇವರನ್ನೇ ಎಲ್ಲರೂ ಆರಾಧಿಸಬೇಕೆಂದು ಆತನೇ ನಿಮಗೆ ಆರಾಧ್ಯ ದೈವವೆಂದು ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಹೇಳಿದ ಆಯತ್‌ನ್ನು ನೋಡಿರಿ. ಸೂರಾ ಮೂರು, ಆಯತ್ ಹದಿನೆಂಟರಲ್ಲಿ ಹೀಗೆ ಹೇಳಿದ್ದಾರೆ.

**(3–18) "ಅಲ್ಲಾಹ್ ಹೊರತು ಮತ್ತೊಬ್ಬ ಆರಾಧ್ಯ ದೈವ ಇಲ್ಲವೆಂದು ಸ್ವತಃವಾಗಿ ಅಲ್ಲಾಹ್, ಆತನ ದೂತರು, ಜ್ಞಾನಸಂಪನ್ನರು ಸಾಕ್ಷ್ಯ ಕೊಡುತ್ತಿದ್ದಾರೆ. ಆತನು ಸಮತ್ವ, ಸಮತೂಕದಿಂದ ಈ ವಿಶ್ವವನ್ನು**

**ನಿಲ್ಲಿಸಿಟ್ಟಿದ್ದಾನೆ. ಸರ್ವಾಧಿಕ್ಯನು, ವಿವೇಚನಾಶೀಲಿಯಾದ ಆತನು ಹೊರತು ಮತ್ತೊಬ್ಬರ್ಯಾರೂ ಆರಾಧನೆಗೆ ಅರ್ಹರು ಅಲ್ಲ."**

ಈ ವಾಕ್ಯವನ್ನು ಅನುಸರಿಸಿ ಮನುಷ್ಯರು ಆರಾಧಿಸುವುದಕ್ಕೆ ತಕ್ಕ ದೇವರನ್ನು ಅಸಲಾದ ದೇವರು ತಯಾರು ಮಾಡಿದ್ದಾನೆಂದು ತಿಳಿಯುತ್ತಿದೆ. ಧರ್ಮಗಳು ಇಲ್ಲದ ದೇವರು, ಪ್ರಜೆಗಳು ತನ್ನನ್ನು ತಿಳಿಯುವ ಸಲುವಾಗಿ, ತಾನು ಸೃಷ್ಠಿಸಿದ ಆತ್ಮವನ್ನು ದೇವರಾಗಿ ಪ್ರಕಟಿಸಿ, ತಾನು ಯಾರಿಗೂ ತಿಳಿಯದವನಾಗಿ ಹೋಗಿದ್ದಾನೆ. ಧರ್ಮಗಳು ಇಲ್ಲದ ದೇವರನ್ನು ಮನುಷ್ಯರು ಆರಾಧಿಸಲಾರರು. ಮನುಷ್ಯರು ಧರ್ಮಗಳಿರುವವನನ್ನು, ಸೃಷ್ಠಿಸಲ್ಪಟ್ಟವನನ್ನು ಮಾತ್ರವೇ ತಿಳಿಯಲ್ಪಡುವ ಬುದ್ಧಿ ಇರುವವರಾಗಿದ್ದಾರೆ. ಧರ್ಮಗಳು ಇಲ್ಲದ ದೇವರನ್ನು ತಿಳಿಯುವ ವಿಧಾನ ಸ್ವಲ್ಪವೂ ತಿಳಿಯದವರಾಗಿರುವುದರಿಂದ, ಪ್ರಪಂಚದಲ್ಲಿರುವ ಧರ್ಮಗಳು ಇರುವವನನ್ನು ಮಾತ್ರವೇ ಧರ್ಮಗಳ ಆಧಾರವಾಗಿ ತಿಳಿಯುವುದಕ್ಕೆ ತಿಳಿದ ಮನುಷ್ಯರಿಗೆ ದೇವರೇ ಮೊದಲು ಧರ್ಮವಿರುವ ದೇವರನ್ನು ತಿಳಿಯುವಂತೆ ಮಾಡಿದ್ದಾನೆ. ಮೊದಲು ಧರ್ಮಗಳಿರುವ ದೇವರನ್ನು ತಿಳಿದ ನಂತರ ಧರ್ಮಗಳು ಇಲ್ಲದ ದೇವರನ್ನು ತಿಳಿಯಬಲ್ಲರೆಂದು ದೇವರ ನಂಬಿಕೆ. ಆದ್ದರಿಂದ ಖುರ್ಆನ್ ಗ್ರಂಥದಲ್ಲಿ (3–18) ವಾಕ್ಯದಲ್ಲಿ ಸ್ವತಃ ದೇವರೇ 'ಮತ್ತೊಬ್ಬ ದೇವರನ್ನು ಆರಾಧಿಸಿರೆಂದು' ಹೇಳಿದ್ದಾನೆ.

ದೇವರು ತನ್ನ ಸೃಷ್ಠಿಯಲ್ಲಿ ಮೊದಲು ಪ್ರಕೃತಿಯನ್ನು ನಂತರ ಆತ್ಮವನ್ನು, ಜೀವಾತ್ಮವನ್ನು ಸೃಷ್ಠಿಸಿದ್ದಾನೆ. ತನ್ನೊಂದಿಗೆ ಕೂಡಾ ಒಟ್ಟು ಜೀವರೂಪವಿರುವ ಶರೀರಗಳೊಂದಿಗೆ ತುಂಬಿದ ವಿಶ್ವವನ್ನು ತಯಾರು ಮಾಡಿದ್ದಾನೆ. ಸೃಷ್ಠಿ ನಂತರ ತಾನು ಯಾರಿಗೂ ತಿಳಿಯದವನಾಗಿ ಇರಬೇಕೆಂದುಕೊಂಡು, ತಾನು ದೇವರಾಗಿ ಕೂಡಾ ಆರಾಧಿಸಲ್ಪಡದೆ ಇರುವುದಕ್ಕೆ, ತಾನು ನಿರ್ಣಯಿಸಿಕೊಂಡ ಪ್ರಣಾಳಿಕೆ ಪ್ರಕಾರ ಮಾನವರೆಲ್ಲರೂ ಆರಾಧಿಸುವುದಕ್ಕೆ ಆತ್ಮವನ್ನೇ ದೇವರಾಗಿ ನಿರ್ಣಯಿಸಿ, ಈತನೇ ನಿಮಗೆ ಆರಾಧ್ಯ ದೈವ, ಈತನು ಹೊರತು ಬೇರೆ ಆರಾಧ್ಯ ದೈವ

ಇಲ್ಲವೆಂದು ಹೇಳಿದ್ದಾನೆ. ದೇವರಾದ ಆತ್ಮವನ್ನು ಕುರಿತು ದೈವಗ್ರಂಥಗಳಲ್ಲಿ ಅಧಿಕಭಾಗ ಹೇಳಿರುವಾಗ ಸರ್ವವನ್ನು ಸೃಷ್ಠಿಸಿದ ದೇವರನ್ನು ಕುರಿತು ಸ್ವಲ್ಪವೇ ಹೇಳಿದ್ದಾರೆ. ಈ ಸಮಾಚಾರವೆಲ್ಲವೂ ಆಧಾರಪೂರ್ವಕವಾಗಿದೆ. ಶಾಸ್ತ್ರಬದ್ಧವಾಗಿ ಆತ್ಮವೇ ದೇವರಾಗಿ ಹೇಳಲ್ಪಟ್ಟಿದೆ. ಸೃಷ್ಠಿಸಲ್ಪಟ್ಟ ಆತ್ಮವೇ ದೇವರಾದರೆ ಸರ್ವವನ್ನು ಸೃಷ್ಠಿಸಿದವನು ಕೇವಲ ಸೃಷ್ಠಿಕರ್ತನಾಗಿ ಮಾತ್ರ ಇದ್ದಾನೆ, ದೇವರಾಗಿ ಇಲ್ಲ. ಸೃಷ್ಠಿಕರ್ತನಾದ ದೇವರು ತನ್ನ ಅಧಿಕಾರಗಳೆಲ್ಲವೂ ಆತ್ಮಗೆ ಕೊಟ್ಟು ದೇವರಾಗಿ ಪ್ರಕಟಿಸಿ, ತಾನು ಸ್ಥಬ್ದತೆಯಾಗಿ ಯಾವ ಕಾರ್ಯ ಮಾಡದಂತೆ ಎಲ್ಲವನ್ನು ನೋಡುತ್ತಿರುವ ಸಾಕ್ಷಿಯಾಗಿ ನಿಂತುಹೋಗಿದೆ.

ವಿಶ್ವ ಚರ, ಅಚರ ಪ್ರಕೃತಿಯಾಗಿ ವಿಭಜನೆಯಾಗಿ, ಚರಪ್ರಕೃತಿ ಮೂಲಕ ಶರೀರಗಳು ತಯಾರಾಗಿ, ಶರೀರದಲ್ಲಿ ಜೀವಾತ್ಮ ದೇವರಾದ ಆತ್ಮದಿಂದ ನಡೆಸಲ್ಪಡುತ್ತಿದೆ. ಜೀವಿಯು ಕರ್ಮಪ್ರಕಾರ ಕಷ್ಟಸುಖಗಳನ್ನು ಅನುಭವಿಸುವಂತೆ ಶರೀರದಲ್ಲಿ ದೇವರಾದ ಆತ್ಮ ಕೆಲಸ ಮಾಡುತ್ತಾ ಕಾರ್ಯಕರ್ತನಾಗಿ ಇರುತ್ತಿದೆ. ಜೀವಿಯು ನಡೆಸಲ್ಪಡುವವನು ಆಗಿದ್ದು, ಆತ್ಮದೇವರು ನಡೆಸುವವನಾಗಿ ಇರುವಾಗ, ಪರಮಾತ್ಮ ಸಾಕ್ಷಿಯಾಗಿದೆ. ಶರೀರದಲ್ಲಿ ಮೂರು ಆತ್ಮಗಳಿದ್ದರೂ, ಪರಮಾತ್ಮ ನೋಡುವವನಾಗಿ ಇರುವಾಗ, ಆತ್ಮ ಕಾರ್ಯಗಳನ್ನು ಮಾಡುತ್ತಾ ಕಷ್ಟಸುಖಗಳಲ್ಲಿ ಜೀವಿಯನ್ನು ನಡೆಸುತ್ತಿರುವಾಗ, ಜೀವಾತ್ಮ ಕಷ್ಟಸುಖಗಳನ್ನು ಅನುಭವಿಸುತ್ತಿದೆ. ಈ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ **(50–21) "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷ್ಯಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ". ಮತ್ತೊಂದು ಗ್ರಂಥದಲ್ಲಿ (50–21) "ಪ್ರತಿ ಪ್ರಾಣಿ ಒಬ್ಬ ನಡೆಸುವವ ನೊಂದಿಗೆ ಮತ್ತೊಬ್ಬ ಸಾಕ್ಷ್ಯಕೊಡುವವನೊಂದಿಗೆ ಸಹ ಬರುತ್ತಿದೆ"** ಎಂದು ಇದೆ.

ಹೀಗೆ ವಾಕ್ಯದಲ್ಲಿ ಹೇಳಿದಂತೆ ಪ್ರಕೃತಿ ಶರೀರವಾಗಿರುವಾಗ ದೇವರು ಮೂರು ಭಾಗಗಳಾಗಿ ಶರೀರದಲ್ಲಿದ್ದಾನೆ. ಶರೀರದಲ್ಲಿ ಆತ್ಮವೇ ನಿರ್ಣಯಿಸಲ್ಪಟ್ಟ

ದೇವರಾಗಿರುವಾಗ, ಸೃಷ್ಠಿಕರ್ತನಾದ ದೇವರು ಸಾಕ್ಷಿಯಾಗಿರುವಾಗ ದೇವರಾಗಿರುವ ಆತ್ಮ ಶರೀರದಲ್ಲಿ ಕಾರ್ಯಕರ್ತನಾಗಿ ಇರುವಾಗ, ಜೀವಾತ್ಮ ಕರ್ಮದ ಪ್ರಕಾರ ಆತ್ಮ ಮಾಡಿದ ಕಾರ್ಯಗಳಲ್ಲಿನ ಕಷ್ಟಸುಖಗಳನ್ನು ಅನುಭವಿಸುತ್ತಿದೆ. ಶರೀರದಲ್ಲಿ ಮೂರು ಆತ್ಮಗಳಿವೆಯೆಂದು, ಅವು ಈ ವಿಧವಾಗಿ ಇವೆಯೆಂದು ಖುರ್‌ಆನ್ ಗ್ರಂಥದಲ್ಲಿ (50–21) ವಾಕ್ಯದಲ್ಲಿ ಹೇಳಲ್ಪಟ್ಟಿದೆ. ಈ ಮೂರು ಆತ್ಮಗಳೇ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16,17 ಶ್ಲೋಕಗಳಲ್ಲಿ **ಕ್ಷರನು, ಅಕ್ಷರನು, ಪುರುಷೋತ್ತಮನು** ಎಂದು ಹೇಳಿದ್ದಾರೆ. ಹಾಗೆ ದ್ವಿತೀಯ ದೈವಗ್ರಂಥವಾದ ಇಂಜೀಲು (ಬೈಬಲ್) ನಲ್ಲಿ ಮತ್ತಾಯ ಸುವಾರ್ತೆಯಲ್ಲಿ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ **ತಂದೆ, ಕುಮಾರನು, ಪರಿಶುದ್ಧಾತ್ಮ** ಎಂದು ಹೇಳುವುದಾಗಿದೆ. ಅಂತಿಮ ದೈವಗ್ರಂಥ **(50–21) "ನಡೆಸಲ್ಪಡುವವನು, ನಡೆಸುವವನು, ನೋಡುವವನು"** ಎಂದು ಹೇಳಲ್ಪಟ್ಟಿದೆ. ಸರ್ವಪ್ರಪಂಚವನ್ನು ಪರಮಾತ್ಮ ಸೃಷ್ಠಿಸಿ, ಆತ್ಮವನ್ನು ದೇವರಾಗಿ ನಿರ್ಣಯಿಸಿದಾಗ, ಜೀವಾತ್ಮ ಶರೀರದಲ್ಲಿ ಕಾಲ ಕಳೆಯುತ್ತಿದೆ. ಸುಮಾರು ಈ ವಿಷಯವೆಲ್ಲವೂ **"ದೇವರ ಮುದ್ರೆ"** ಎನ್ನುವ ಗ್ರಂಥದಲ್ಲಿಯೇ ಹೇಳಿದ್ದೇವೆ. ಅಲ್ಲಿ ಹೇಳಿರುವುದೇ ಇಲ್ಲಿ ಜ್ಞಾಪಕ ಮಾಡಿದ್ದೇವೆ.

ಈಗ ನಾವು ಸ್ವಲ್ಪ ಮುಂದಕ್ಕೆ ಹೋಗಿ ಜ್ಞಾನವನ್ನು ಹೇಳಿಕೊಂಡರೆ ಈ ಗ್ರಂಥದಲ್ಲಿ ಸ್ವಲ್ಪ ಹೊಸ ಜ್ಞಾನ ತಿಳಿದಂತಾಗುತ್ತದೆ. ಆ ಪ್ರಯತ್ನದಲ್ಲಿಯೇ ಧರ್ಮಗಳ ವಿಷಯ ತೆರೆಮೇಲಕ್ಕೆ ತಂದಿದ್ದೇವೆ. ದೇವರ ಧರ್ಮಗಳನ್ನು ತಿಳಿದರೇ ದೇವರ ಧರ್ಮಗಳ ಮೂಲಕ ದೇವರನ್ನು ತಿಳಿದಂತಾಗುತ್ತದೆ. ಧರ್ಮ ಎಂದರೇ ಲಕ್ಷಣ ಎಂದು ಹೇಳಿಕೊಂಡಿದ್ದೇವೆ. ನಿಂಬೆಹಣ್ಣಿಗೆ ಹುಳಿ ಧರ್ಮವಾಗುತ್ತದೆ. ಏಕೆಂದರೆ! ಅದು ನಿಂಬೆಹಣ್ಣಿಗೆ ಶಾಶ್ವತ ಲಕ್ಷಣ. ಹುಳಿಯನ್ನು ಅನುಸರಿಸಿ ನಿಂಬೆಹಣ್ಣನ್ನು ತಿಳಿಯಬಹುದು. ಹಾಗೆಯೇ ಧರ್ಮವನ್ನು ಅನುಸರಿಸಿ ದೇವರನ್ನು ತಿಳಿಯಬಹುದು. ಹಾಗಿರುವಾಗ ಪ್ರಕೃತಿ ವಸ್ತುಗಳೊಂದಿಗೆ ಸಮಾನವಾಗಿ ದೇವರು ಗುರುತಿಸಲ್ಪಡುತ್ತಿದ್ದಾನೆ ಅಲ್ಲವೆ! ಎಂದು ಯಾರಾದರೂ ಕೇಳಬಹುದು. ಆಗ

ನಿಜವೇಯೆಂದು ಒಪ್ಪಿಕೊಳ್ಳದೆ ತಪ್ಪವುದಿಲ್ಲ. ಆದರೇ ಧರ್ಮಗಳಿರುವವನು, ಧರ್ಮದಿಂದ ಗುರುತಿಸಲ್ಪಡುವವನು ನಿಜವಾದ ದೇವರಲ್ಲ, ನಿಜವಾದ ದೇವರಿಗೆ ಧರ್ಮಗಳು ಇಲ್ಲವೆಂದು ಹೇಳಬಹುದು. ಧರ್ಮಗಳಿಂದ ತಿಳಿಯಲ್ಪಡುವ ದೇವರು ದೇವರಿಂದ ಸೃಷ್ಟಿಸಲ್ಪಟ್ಟ ದೇವರೆಂದು ಹೇಳಬಹುದು.

ಏಕೇಶ್ವರೋಪಾಸನಯೆಂದು ಒಬ್ಬ ದೇವರನ್ನು ವಿಶ್ವಾಸಿಸಬೇಕು, ಒಬ್ಬ ದೇವರನ್ನೇ ಆರಾಧಿಸಬೇಕೆಂದು ಹೇಳುವವರಿದ್ದಾರೆ. ಹಾಗೆ ಹೇಳುವುದು ಒಂದು ಮತಕ್ಕೆ ಪರಿಮಿತಿಯಿಲ್ಲ. ದೈವ ಗ್ರಂಥಗಳಲ್ಲಿ ಸಹಿತ ಒಬ್ಬ ದೇವರನ್ನು ಆರಾಧಿಸಬೇಕೆಂದು ಹೇಳಿದ್ದಾರೆ. ಆದ್ದರಿಂದ ಎಲ್ಲರೂ ಆರಾಧಿಸಬೇಕಾಗಿರುವುದು ಒಬ್ಬ ದೇವರನ್ನೇ ಆದರೇ ಭಗವದ್ಗೀತೆಯಲ್ಲಿ ಈ ವಿಷಯವನ್ನು ಹೇಳಿದ್ದರೂ ಹಿಂದೂಗಳು ಅನ್ಯದೇವತಾರಾಧನೆ ಮುಖ್ಯವಾಗಿ ಮಾಡುತ್ತಿದ್ದಾರೆ. ಮುಸ್ಲಿಮ್‌ರು, ಕ್ರೈಸ್ಥರು ಏಕೇಶ್ವರೊಪಾಸನೆಯೆಂದು ಹೇಳಿದರೂ ಅವರು ಅವರ ದೇವರನ್ನು, ಇವರು ಇವರ ದೇವರನ್ನು ಆರಾಧಿಸುತ್ತಿದ್ದಾರೆ. ಎಲ್ಲಾ ಮತದವರು ಒಬ್ಬ ದೇವರನ್ನು ಎಲ್ಲಿಯೂ ಆರಾಧಿಸಲಿಲ್ಲ. ಮುಸ್ಲಿಮ್‌ರು ಮಾತ್ರ ನಾವು ಖಚಿತವಾದ ಪದ್ಧತಿಯಲ್ಲಿ ಒಂದೇ ದೇವರನ್ನು ಆರಾಧಿಸುತ್ತಿದ್ದೇವೆ ಎಂದು ಹೇಳಿದರೂ ಅವರು ಆರಾಧಿಸುವ ದೇವರು ಯಾರು? ಎಂದು ಪ್ರಶ್ನಿಸಿದರೇ "ಅಲ್ಲಾಹ್" ಎನ್ನುತ್ತಿದ್ದಾರೆ. ಆಗ ಅವರು ನಮ್ಮ ಗ್ರಂಥ ಎಂದು ಹೇಳುತ್ತಿರುವ ಖುರ್‌ಆನ್ ಗ್ರಂಥದಲ್ಲಿ (3–18) ಆಯತ್‌ನಲ್ಲಿ ಹೇಳಿರುವ ಅದರಪ್ರಕಾರ ಈತನೇ ನೀವು ಆರಾಧಿಸಬೇಕಾದ ಅಲ್ಲಾಹ್ (ದೇವರು) ಎಂದು ಸ್ವತಃ ಅಲ್ಲಾಹ್‌ಯೇ ಹೇಳಿದ್ದಾನೆ ಅಲ್ಲವೆ! ನೀವು ಯಾವ ಅಲ್ಲಾಹ್‌ನನ್ನು ಆರಾಧಿಸುತ್ತಿದ್ದೀರೆಂದು ಕೇಳಿದರೇ ಆ ಪ್ರಶ್ನೆಯನ್ನು ಅವರು ಹೊಸದಾಗಿ ಕೇಳುವುದರಿಂದ ಏನು ಉತ್ತರ ಹೇಳಬೇಕು? ಯಾವ ಅಲ್ಲಾಹ್ ಎಂದು ಹೇಳಬೇಕು? ಎಂದು ಸಂದಿಗ್ಧದಲ್ಲಿ ಇದ್ದಾರೆ. ಅವರು ಇಲ್ಲಿಯವರೆಗು ಒಬ್ಬ ಅಲ್ಲಾಹ್ ಎಂದೇ ಕೇಳಿದ್ದಾರೆ ಹೊರತು ಎರಡನೆ ಅಲ್ಲಾಹ್ ಕುರಿತು ತಿಳಿದಿಲ್ಲ.

ಮುಸ್ಲಿಮ್‌ರು ಹೆಚ್ಚಾಗಿ ತಮ್ಮ ಹಿರಿಯರು ಹೇಳಿರುವುದೇ ಕೇಳುತ್ತಿರುತ್ತಾರೆ. ಖುರ್‌ಆನ್ ಗ್ರಂಥವನ್ನು ಓದುವ ಅಭ್ಯಾಸ ಇಲ್ಲ. ಎಲ್ಲಿಯಾದರೂ ಯಾರಾದರೂ ಖುರ್‌ಆನ್ ಗ್ರಂಥವನ್ನು ಓದಬೇಕೆಂದು ಅಂದುಕೊಂಡರೂ ಅದನ್ನು ಅವರಿಗೆ ಅರ್ಥವಾಗುವ ಭಾಷೆಯಲ್ಲಿ ಓದಬಾರದು, ಅದು ಬರೆಯಲ್ಪಟ್ಟ ಅರಬ್ಬಿ ಭಾಷೆಯಲ್ಲಿಯೇ ಓದಬೇಕು. ಹಾಗೆ ಅರಬ್ಬಿ ಭಾಷೆಯಲ್ಲಿ ಓದುವುದರಿಂದ ಖುರ್‌ಆನ್‌ನಲ್ಲಿ ಏನಿದೆಯೊ ಅವರಿಗೆ ತಿಳಿದಿಲ್ಲ. ಬಂದಿರುವ ಭಾಷೆಯಲ್ಲಿ ಓದಿದರೂ ಅದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಬಹಳ ಕಷ್ಟವಾಗುತ್ತದೆ. ಬೈಬಲ್ ಗ್ರಂಥ ಯಾವ ಭಾಷೆಯಲ್ಲಿ ಆದರೂ ಓದಬಹುದು. ಬೈಬಲ್ ಎಲ್ಲಾ ಭಾಷೆಗಳಲ್ಲಿಯೂ ಮುದ್ರಿಸಲಾಗಿದೆ. ಬರುವ ಭಾಷೆಯಲ್ಲಿ ಓದಿದರೂ ಅಲ್ಲಿ ವಾಕ್ಯದಲ್ಲಿನ ವಿವರವು ತಿಳಿಲಾರದೆ ಗ್ರಂಥದಲ್ಲಿನ ಭಾವನೆಯನ್ನು ಗ್ರಹಿಸಲಾರದೆ ಹೋಗುತ್ತಿದ್ದಾರೆ. ಅರಬ್ಬಿ ಭಾಷೆಯಲ್ಲಿ ಖುರ್‌ಆನ್ ಓದುವುದರಿಂದ ಅದರಲ್ಲಿನ ಭಾವನೆಯನ್ನು ಸ್ವಲ್ಪವೂ ತಿಳಿಯಲಾರರು. ಅವರು ಪ್ರಾರ್ಥನೆ ಮತ್ತು ಆಚರಣೆಗೆ ಎಷ್ಟೋ ಮುಂದಿರುವವರೆಂದು ಹೇಳಿದರೂ ಅವರಿಗೆ ದೇವರ ಜ್ಞಾನ ತಿಳಿದಿಲ್ಲ. ಅವರ ಇಮಾಮ್ ಸಾಬ್ ಮಸ್ಜಿದ್‌ಗಳಲ್ಲಿ ಜ್ಞಾನ ಹೇಳಿದರೂ ಅವರು ಸಂಪೂರ್ಣ ವಿವರ ತಿಳಿದು ಹೇಳುತ್ತಿಲ್ಲ. ಅದರಿಂದ ಅವರನ್ನು ನೀವು ಯಾವ ಅಲ್ಲಾಹ್‌ನನ್ನು ಆರಾಧಿಸುತ್ತಿದ್ದೀರೆಂದು ಕೇಳಿದರೆ ಏನು ಹೇಳಲಾರದಂತಿದ್ದಾರೆ.

ಯಾವ ಮತಸ್ಥರಿಗಾದರೂ ದೇವರು ಎಂದರೇ ಒಬ್ಬನೇ ಎನ್ನುವ ನಂಬಿಕೆ ಇದೆ. ಮುಸ್ಲಿಮ್‌ರಿಗಾದರೆ ಎರಡನೆ ಅನುಮಾನ ಇಲ್ಲದೆ ಒಬ್ಬ ದೇವರನ್ನೇ ವಿಶ್ವಾಸಿಸಿದ್ದಾರೆ. ಒಬ್ಬ ದೇವರ ಮೇಲೆ ವಿಶ್ವಾಸವಿರುವುದು ನಿಜವಾದ ಭಕ್ತಿ ಮಾರ್ಗ. ಏಕೆಂದರೆ! ದೈವಗ್ರಂಥಗಳಲ್ಲಿ ಅಲ್ಲಾಹ್ ಒಬ್ಬನೇ ನಿಮ್ಮ ಆರಾಧ್ಯ ದೈವವೆಂದು ಹೇಳಲ್ಪಟ್ಟಿದೆ. ಆದರೇ ಅಲ್ಲಾಹ್‌ನೇ ನೀವು ಒಬ್ಬ ಅಲ್ಲಾಹ್‌ನನ್ನೇ ಆರಾಧಿಸಿರೆಂದು ಇನ್ನೊಬ್ಬ ಅಲ್ಲಾಹ್‌ನನ್ನು ತೋರಿಸಿದ್ದಾನೆಂದು ಒಟ್ಟಾರೆ ಮಾನವರೆಲ್ಲರಿಗೂ ತಿಳಿದಿಲ್ಲ. ಅಲ್ಲಾನೇ ಸ್ವತಃವಾಗಿ ತನ್ನನ್ನು ಕುರಿತು ಮನುಷ್ಯರಿಗೆ ತಿಳಿಯಬಾರದೆಂದುಕೊಂಡು, ತನ್ನ ಪಾತ್ರ ಏನು ಇಲ್ಲವೆಂದು ತಿಳಿದವನಾಗಿ,

ಮನುಷ್ಯರನ್ನು ಪಾಲಿಸುವುದಕ್ಕೆ ಇನ್ನೊಬ್ಬ ದೇವರನ್ನು ಏರ್ಪಾಟು ಮಾಡಿ **"ಎಲ್ಲರಿಗೂ ಆತನೊಬ್ಬನೇ ದೇವರು, ಎಲ್ಲರೂ ಆತನನ್ನೇ ಆರಾಧಿಸಬೇಕೆಂದು"** ಹೇಳಿದ್ದಾನೆ. ಹಾಗೇ ದೇವರ ಪಾಲಕರಾದ ದೇವದೂತರು ದೇವರು ಸೃಷ್ಠಿಸಿದ ಸೃಷ್ಠಿಕರ್ತನೆಂದು ಆತನು ವಿಶ್ರಾಂತಿಗಾಗಿ ತನ್ನ ಕೆಲಸವನ್ನು ಇನ್ನೊಬ್ಬ ದೇವರಿಗೆ ಒಪ್ಪಿಸಿದ್ದಾನೆಂದು ತಿಳಿದವರಾಗಿ ಅವರು ಕೂಡಾ ದೇವರು ಸೃಷ್ಠಿಸಿದ ದೇವರನ್ನೇ ಆರಾಧಿಸಿರೆಂದು ಹೇಳಿದ್ದಾರೆ. ಇನ್ನು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದು ಜ್ಞಾನದಲ್ಲಿ ಸಂಪನ್ನರಾದ (ಧನಿಕರಾದ) ಅವರು ಕೂಡಾ ಸೃಷ್ಠಿಕರ್ತನಾದ ಹೇವರು ಇನ್ನು ಕೆಲಸವನ್ನು ಮಾಡದವನೆಂದು, ಆತನು ಕೇವಲ ಸಾಕ್ಷಿಭೂತನೆಂದು ತಿಳಿದು, ತನ್ನ ಸ್ಥಾನದಲ್ಲಿ ದೇವರ ಅಧಿಕಾರವನ್ನು ಕೊಟ್ಟು ನೇಮಿಸಿದ ದೇವರನ್ನೇ ಎಲ್ಲರೂ ಆರಾಧಿಸಿರೆಂದು ಹೇಳಿದ್ದಾರೆ.

ದೇವರು (ಅಲ್ಲಾಹ್) ತನ್ನನ್ನು ಗೌರವಿಸಿದಂತೇ ತಾನು ನಿರ್ಣಯಿಸಿದ ತನ್ನ ವಾರಸುದಾರನಾದ ತನ್ನ ಕುಮಾರನನ್ನು ಕೂಡಾ ದೇವರಂತೆ ಗೌರವಿಸಬೇಕೆಂದು, ತನ್ನನ್ನು ದೊಡ್ಡದಾಗಿ ತಿಳಿದು ಆರಾಧಿಸಿದಂತೇ ತನ್ನ ಸ್ಥಾನದಲ್ಲಿ ತನ್ನ ಆತ್ಮವನ್ನು ಆರಾಧಿಸಬೇಕೆಂದು ತನ್ನ ಆತ್ಮವನ್ನೇ ತನ್ನ ಕುಮಾರನನ್ನಾಗಿ, ತನ್ನ ವಾರಸುದಾರನನ್ನಾಗಿ ಪ್ರಕಟಿಸಿದ್ದಾನೆ. "ಒಂದುವೇಳೆ ಯಾರಾದರೂ ತನ್ನ ಕುಮಾರನನ್ನು ಗೌರವಿಸದೆಹೋದರೆ, ಗೌರವ ಭಾವನೆಯಿಂದ ಆರಾಧಿಸದೆಹೋದರೆ ತನ್ನನ್ನು ಗೌರವಿಸದಂತೇ ಎಂದು, ತನ್ನನ್ನು ಆರಾಧಿಸದಂತೆ ಲೆಕ್ಕಿಸುತ್ತೇನೆಂದು" ಸ್ವತಃವಾಗಿ ಸೃಷ್ಠಿಕರ್ತನಾದ ಅಲ್ಲಾಹ್‌ಗೆ ದ್ವಿತೀಯ ದೈವಗ್ರಂಥದಲ್ಲಿ ಎಚ್ಚರಿಕೆ ಮಾಡಿ ಹೇಳಿದಂತೆ ತಿಳಿಯುತ್ತಿದೆ. ದ್ವಿತೀಯ ದೈವ ಗ್ರಂಥದಲ್ಲಿ ಏನು ಹೇಳಿರುವುದು ತಿಳಿಯಬೇಕೆಂದರೆ ಇಂಜೀಲು ಗ್ರಂಥದಲ್ಲಿ ಯೋಹಾನ್ ಸುವಾರ್ತೆ ಐದನೇ ಅಧ್ಯಾಯದಲ್ಲಿ 21ನೇ ವಾಕ್ಯದಿಂದ 26ನೇ ವಾಕ್ಯದವರೆಗು ನೋಡಿರಿ.

**(ಯೋಹಾನ್ 5-21) "ತಂದೆ ಮೃತರನ್ನು ಹೇಗೆ ಎಬ್ಬಿಸಿ**

ಬದುಕಿಸುತ್ತಾನೊ ಹಾಗೆಯೇ ಕುಮಾರನೂ ತನ್ನ ಇಷ್ಟಬಂದರವರನ್ನು ಬದುಕಿಸುತ್ತಾನೆ".

(ಯೋಹಾನ್ 5–22) "ತಂದೆ ಯಾರಿಗೂ ತೀರ್ಪು ಕೊಡುವುದಿಲ್ಲ ಆದರೆ".

(ಯೋಹಾನ್ 5–23) "ತಂದೆಯನ್ನು ಘನಪಡಿಸಿದಂತೆ ಎಲ್ಲರೂ ಕುಮಾರನನ್ನು ಘನಪಡಿಸಬೇಕೆಂದು ತೀರ್ಪು ಕೊಡುವುದಕ್ಕೆ ಸರ್ವಾಧಿಕಾರವು ಕುಮಾರನಿಗೆ ಒಪ್ಪಿಸಿದ್ದಾನೆ. ಕುಮಾರನನ್ನು ಘನಪಡಿಸದವನು ಆತನನ್ನು ಕಳಿಸಿದ ತಂದೆಯನ್ನು ಘನಪಡಿಸುವುದಿಲ್ಲ".

(ಯೋಹಾನ್ 5–24) "ನನ್ನ ಮಾತು ಕೇಳಿ ನನ್ನನ್ನು ಕಳುಹಿಸಿದವನಲ್ಲಿ ವಿಶ್ವಾಸ ಇಟ್ಟವನು ನಿತ್ಯ ಜೀವವಿರುವವನು. ಅವನು ತೀರ್ಪಿನೊಳಗೆ ಬಾರದೆ ಮರಣದಿಂದ ಜೀವದೊಳಗೆ ದಾಟಿ ಇದ್ದಾನೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ."

(ಯೋಹಾನ್ 5–25) "ಮೃತರು ದೇವರ ಕುಮಾರನ ಶಬ್ದವನ್ನು ಕೇಳುವ ಸಮಯ ಬರುತ್ತಿದೆ, ಈಗಲೇ ಬಂದಿದೆ, ಅದನ್ನು ಕೇಳುವವರು ಜೀವಿಸುತ್ತಾರೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ."

(ಯೋಹಾನ್ 5–26) "ತಂದೆ ಹೇಗೊ ತನ್ನಷ್ಟಕ್ಕೆತಾನೇ ಜೀವವಿರುವವನಾಗಿ ಇದ್ದಾನೊ, ಹಾಗೆಯೇ ಕುಮಾರನು ತನ್ನಷ್ಟಕ್ಕೆ ತಾನೇ ಜೀವವಿರುವವನಾಗಿ ಇರುವುದಕ್ಕೆ ಕುಮಾರನಿಗೆ ಅಧಿಕಾರ ಅನುಗ್ರಹಿಸಿದನು. ಮತ್ತು ಆತನು ಮನುಷ್ಯ ಕುಮಾರನಾದ್ದರಿಂದ ತೀರ್ಪು ಕೊಡುವುದಕ್ಕೆ ತಂದೆ ಅಧಿಕಾರವನ್ನು ಅನುಗ್ರಹಿಸಿದನು."

ಇದೇ ವಿಷಯವನ್ನು ಹೋಲಿದ ಸಮಾಚಾರವನ್ನು ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ (3–18) ರಲ್ಲಿ ಹೇಳುವುದಾಗಿದೆ. ಆದರೇ ಬಹಳಜನ ಈ ವಿಷಯದಲ್ಲಿ ಸೂಕ್ಷ್ಮ ಗ್ರಾಹಿತಶಕ್ತಿ ಇಲ್ಲದವರು ದೇವರು ತನ್ನನ್ನು ಕುರಿತು ಹೇಳಿಕೊಂಡಿದ್ದಾನೆಂದುಕೊಳ್ಳುವುದು ನಡೆಯುತ್ತಿದೆ. ಇಲ್ಲಿ ಚೆನ್ನಾಗಿ ಆಲೋಚಿಸಿದರೆ ಜ್ಞಾನಿಗಳು, ದೇವದೂತರು ಆ ವಿಷಯವನ್ನು ಹೇಳಿದ್ದರೆ ಎಲ್ಲರೂ ಅಂದುಕೊಂಡಂತೆ ಸರಿಹೋಗುತ್ತದೆ. ಸ್ವತಃವಾಗಿ ದೇವರು ಹೇಳಿದ ವಿಷಯವನ್ನು ದೇವದೂತರು ಮತ್ತು ಜ್ಞಾನ ಸಂಪನ್ನರು ಹೇಳಿದ್ದಾರೆ. ಏಕೇಶ್ವರೋಪಾಸನೆಯನ್ನು **'ತೌಹೀದ್'** ಎಂದು ಕರೆಯುತ್ತಾರೆ. ದೇವರು ಮನುಷ್ಯರು ಆರಾಧಿಸಬೇಕಾದ ದೇವರನ್ನು ಕುರಿತು ಹೇಳುವುದಕ್ಕೆ ಕಾರಣವಿದೆ. ಮನುಷ್ಯರು ಶರೀರವನ್ನು ಹೊಂದಿದ್ದಾರೆ. ಎಂದರೇ ಜೀವಾತ್ಮ ಎನ್ನುವವರು ಶರೀರಗಳಲ್ಲಿ ನಿವಾಸಮಾಡುತ್ತಿದ್ದಾರೆ. ಶರೀರದಲ್ಲಿ ಯಾವ ಕೆಲಸವನ್ನು ಮಾಡದವನು ಪರಮಾತ್ಮ. ಪ್ರಪಂಚನ್ನು ಸೃಷ್ಠಿಸಿದ ಸೃಷ್ಠಿಕರ್ತನಾದ ದೇವರು ಏಳು ಆಕಾಶಗಳನ್ನು, ಭೂಮಿಯನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಸೃಷ್ಟಿಸಿದ ಬಳಿಕ ತಾನು ವಿಶ್ರಾಂತಿ ತೆಗೆದುಕೊಳ್ಳುತ್ತಾ ಯಾವ ಕಾರ್ಯವನ್ನು ಮಾಡದವನಾಗಿ ಹೋಗಿದ್ದಾನೆ. ಶರೀರದಲ್ಲಿ ಜೀವಿಯನ್ನು ಕರ್ಮರೀತಿ ನಡೆಸುವುದಕ್ಕೆ ಸಂಪೂರ್ಣವಾದ ಅಧಿಕಾರವನ್ನು ಶರೀರದಲ್ಲಿನ ಆತ್ಮಕ್ಕೆ ಕೊಡಲಾಗಿದೆ. ಆತ್ಮವನ್ನು ಸೃಷ್ಠಿಕರ್ತನಾದ ದೇವರು ಸರ್ವವಿಧಗಳ ಮಾನವರ ಬಗ್ಗೆ ದೇವರಾಗಿ ನಿರ್ಣಯಿಸಲಾಗಿದೆ. ಅಂದಿನಿಂದ ಆತ್ಮ ಮಾನವರಿಗೆ ಮತ್ತು ಸಮಸ್ತ ಜೀವಿಗಳಿಗೂ ದೇವರಾಗಿದ್ದು ಮತ್ತು ಅವರ ಶರೀರದಲ್ಲಿ ಕಾರ್ಯಗಳು ಮಾಡುತ್ತಾ ಕಾರ್ಯಕರ್ತನಾಗಿ ಕೂಡಾ ಇದ್ದಾನೆ. ಈ ವಿಷಯವನ್ನು ಅಂತಿಮ ದೈವಗ್ರಂಥದಲ್ಲಿ ಸೂರಾ 6 ಆಯತ್ 102ರಲ್ಲಿ ಹೇಳಲಾಗಿದೆ ನೋಡಿರಿ.

**(6–102) "ಆತನೇ ಅಲ್ಲಾಹ್, ನಿಮ್ಮ ಪ್ರಭುವು. ಆತನು ಹೊರತುಪಡಿಸಿ ಇನ್ನೊಬ್ಬ ಆರಾಧ್ಯನು ಇಲ್ಲ. ಎಲ್ಲರಿಗೂ ಸೃಷ್ಠಿಕರ್ತ ಆತನೇ ಆದ್ದರಿಂದ ನೀವು ಎಲ್ಲರೂ ಆತನನ್ನೇ ಆರಾಧಿಸಿರಿ. ಅಲ್ಲಾಹ್‌ನಾದ ನಿಮಗೆ ದೇವರೇ ಅಲ್ಲದೆ ಪ್ರತಿ ಕೆಲಸಕ್ಕೆ ಕಾರ್ಯಕರ್ತನಾಗಿ ಇದ್ದಾನೆ."**

ಮನುಷ್ಯನ ಶರೀರದಲ್ಲಿ ಆತ್ಮವೇ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಶರೀರದಲ್ಲಿ ದೇವರು ಏನೂ ಮಾಡದೆ ಅಂದರೇ ಪರಮಾತ್ಮ ಮೌನವಾಗಿ ಸಾಕ್ಷಿಯಾಗಿ ನೋಡುತ್ತಿದ್ದಾನೆ. ಹಾಗೇ ಜೀವಿಯು ಕೂಡಾ ಯಾವ ಕಾರ್ಯ ಗಳನ್ನು ಮಾಡುವವನಲ್ಲ. ಜೀವಿಯು ದೇವರಂತೆ ಎಂದರೇ ಪರಮಾತ್ಮನಂತೆ ಸುಮ್ಮನೆ ಇರುವುದೇ ಅಲ್ಲದೆ ಆತ್ಮ ಆಡಿಸಿದಂತೆ ಗುಣಗಳಲ್ಲಿ ಅತ್ತಾ ಇತ್ತಾ ಓಡುತ್ತಾ ಆತ್ಮ ಮಾಡಿದರೆ ನಡೆದ ಕೆಲಸದಲ್ಲಿನ ಸುಖ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಜೀವಿಯು ಶರೀರದಲ್ಲಿ ಹುಟ್ಟಿರುವುದು ಕರ್ಮಗಳ ಫಲಿತಗಳನ್ನು ಅನುಭವಿಸುವುದಕ್ಕೆ. ಆದರೇ ಎಲ್ಲಾ ಕಾರ್ಯಗಳನ್ನು ಮಾಡುತ್ತಾ ಶರೀರದಲ್ಲಿ ದೇವರಾಗಿರುವ ಆತ್ಮವೇ ಕಾರ್ಯಕರ್ತನಾಗಿ ಕೂಡಾ ಇದೆ. ಆ ವಿಷಯವನ್ನು (6–102) ವಾಕ್ಯದಲ್ಲಿ ಹೇಳುವುದಾಗಿದೆ.

ಸೃಷ್ಟಿಕರ್ತನಾದ ದೇವರು ತನ್ನ ಪಾಲನೆ ಸೃಷ್ಟಿಯಲ್ಲಿ ಸಾಗುವುದಕ್ಕೆ ತನ್ನಂತೆ ಇರುವ ಆತ್ಮವನ್ನೇ ದೇವರಾಗಿ ಪ್ರಕಟಿಸಿ ಸರ್ವ ಅಧಿಕಾರಗಳು ಆತನಿಗೆ ಒಪ್ಪಿಸಿ ತನ್ನಂತೆ ತನ್ನ ಆತ್ಮವನ್ನು ದೇವರಾಗಿ ಪ್ರಕಟಿಸಿದಂತೆ ದ್ವಿತೀಯ ದೈವಗ್ರಂಥದಲ್ಲಿ ಯೋಹಾನ್ ಸುವಾರ್ತೆ ಐದನೆ ಅಧ್ಯಾಯದಲ್ಲಿ 21 ರಿಂದ 26ರವರೆಗಿರುವ ವಾಕ್ಯಗಳಲ್ಲಿ ಇದೆ. ಅದೇ ವಿಷಯವನ್ನೇ ಧೃಢೀಕರಿಸುತ್ತಾ ಅಂತಿಮ ದೈವಗ್ರಂಥದಲ್ಲಿ ಸೂರಾ ಮೂರು ಆಯತ್ ಹದಿನೆಂಟರಲ್ಲಿ ಹೇಳುವುದಾಗಿದೆ. ಅಲ್ಲಿ ಕೆಲವರು ಮುಸ್ಲಿಮ್‌ರು ಸರಿಯಾಗಿ ಗ್ರಹಿಸಿಕೊಳ್ಳದೆ ಇಲ್ಲ ಅಲ್ಲಾಹ್‌ನೇ ತನ್ನನ್ನೇ ಆರಾಧಿಸಿರೆಂದು ಹೇಳಿದ್ದಾನೆಂದು ವಾಕ್ಯದಲ್ಲಿರುವಂತೆ ತಮಗೆ ಅರ್ಥವಾಗಿದೆಯೆಂದು ಸೃಷ್ಟಿಕರ್ತನಾದ ಅಲ್ಲಾಹ್ ಹೊರತು ಇನ್ನೊಬ್ಬ ಅಲ್ಲಾಹ್ ಇಲ್ಲವೆಂದು ಹೇಳಬಹುದು. ಶರೀರದಲ್ಲಿ ದೇವರಾಗಿ ನೇಮಿಸಲ್ಪಟ್ಟ ದೇವರನ್ನು ಲೆಕ್ಕಮಾಡದೆ ಅಂತಹ ದೇವರು ಇಲ್ಲವೆಂದು ಹೇಳುತ್ತಿರುತ್ತಾರೆ. ಅಂತಹವರೆಲ್ಲರೂ ಸತ್ಯವನ್ನು ಗ್ರಹಿಸುವಂತೆ (6–102) ವಾಕ್ಯವನ್ನು ಹೇಳುವುದಾಗಿದೆ. ಶರೀರದಲ್ಲಿ ಎಲ್ಲಾ ಕಾರ್ಯಗಳು ಮಾಡುವವನು ಜೀವಿಗೆ ಕಾರ್ಯಕರ್ತನಾಗಿರುವವನು ನಿಮಗೆ ದೇವರಾಗಿದ್ದಾನೆ ಎಂದು ಹೇಳುವುದಾಗಿದೆ.

ಇದರಿಂದ ದೇವರು ಕಾರ್ಯಗಳನ್ನು ಮಾಡುವವನು ಅಲ್ಲ ಸಾಕ್ಷಿಯಾಗಿ ಇದ್ದಾನೆಂದು (50–21) ರಲ್ಲಿ ಹೇಳಿದ ವಾಕ್ಯದ ಪ್ರಕಾರ ಸರ್ವ ಸೃಷ್ಠಿಕರ್ತನಾದ ದೇವರು ಯಾವ ಕಾರ್ಯವು ಮಾಡದವನಾಗಿ ಸಾಕ್ಷಿಯಾಗಿ ನೋಡುವ ವನಾಗಿದ್ದಾನೆ. ಸೃಷ್ಠಿಕರ್ತನಾದ ದೇವರು ಸೃಷ್ಠಿ ನಂತರ ದೇವರಾಗಿ ಆತ್ಮವನ್ನು ನೇಮಿಸಿ ಈತನೇ ನಿಮಗೆ ಆರಾಧ್ಯದೈವವೆಂದು (3–18) ರಲ್ಲಿ ಹೇಳುವುದಾಗಿದೆ. ಆತ್ಮ ಸೃಷ್ಠಿಸಲ್ಪಟ್ಟಿರುವ ದೇವರು. ಹಾಗಲ್ಲದೆ ಸರ್ವವನ್ನು ಎಂದರೇ ಪ್ರಪಂಚವನ್ನು ಸೃಷ್ಠಿಸಿದ ದೇವರು ಪರಮಾತ್ಮಯೆಂದು ಆತನು ಸೃಷ್ಠಿ ನಂತರ ತನ್ನ ಸ್ಥಾನದಲ್ಲಿ ಆತ್ಮವನ್ನು ದೇವರಾಗಿ ನೇಮಿಸಿ ನಂತರ ಯಾವುದಕ್ಕು ಸಂಬಂಧವಿಲ್ಲದೆ, ಯಾವ ಕಾರ್ಯವನ್ನು ಮಾಡದೆ ಸುಮ್ಮನೆಯಿದ್ದು ಹೋಗಿ, ದೇವರ ಸ್ಥಾನದಲ್ಲಿ ಆತ್ಮ ದೇವರಾಗಿದ್ದು ಜೀವಿಯು ಅನುಭವಿಸಬೇಕಾದ ಅನುಭವಗಳಿಗಾಗಿ ದೇವರಾದ ಆತ್ಮ ಕಾರ್ಯಕರ್ತನಾಗಿ ಕೆಲಸ ಮಾಡುತ್ತಿದೆ. ಈ ವಿಷಯವೆಲ್ಲವೂ ದೈವಗ್ರಂಥಗಳಲ್ಲಿ ಇದ್ದರೂ ಮನುಷ್ಯರು ತಿಳಿಯದಂತಿದ್ದಾರೆ.

ದೇವರು ತನ್ನ ಗ್ರಂಥಗಳಲ್ಲಿ ಮೂರು ದೈವ ಗ್ರಂಥಗಳನ್ನು ಓದದಿರುವಾಗ, ಅವನು ಯಾವ ಧರ್ಮದ ಮೇಲೆಯೂ ಇಲ್ಲದಂತೆಯೇ ಎಂದು ಹೇಳಿದ್ದಾನೆ. ಆದರೇ "ನಾವು ಮುಸ್ಲಿಮ್ ಧರ್ಮದಲ್ಲಿ ಇದ್ದೇವೆ, ನಾವು ಖುರ್ಆನ್‌ನನ್ನು ಹೊರತು ಉಳಿದ ಭಗವದ್ಗೀತೆಯನ್ನಾಗಲಿ, ಬೈಬಲ್‌ನನ್ನಾಗಲಿ ಒಪ್ಪಿಕೊಳ್ಳುವುದಿಲ್ಲ" ಎಂದು ಹೇಳುತ್ತಿದ್ದಾರೆ. ಹಾಗೆಯೇ ಉಳಿದ ಮತದವರು ಕೂಡಾ ನಾವೇನು ಕಡಿಮೆ ಎನ್ನುವಂತೆ "ನಮ್ಮ ಗ್ರಂಥಗಳನ್ನು ಹೊರತು ಇತರ ಗ್ರಂಥಗಳನ್ನು ಓದುವುದಿಲ್ಲ" ಎಂದು ಹೇಳುತ್ತಿದ್ದಾರೆ. ಅಷ್ಟೇ ಅಲ್ಲದೆ ನಮ್ಮ ಮತವೇ ದೊಡ್ಡದು, ನಮ್ಮ ಮತಜ್ಞಾನವೇ ಶ್ರೇಷ್ಠವೆನ್ನುವ ಭಾವನೆ ಎಲ್ಲರಲ್ಲಿದೆ. ಅವರೆಲ್ಲರಿಗೂ ಕಣ್ತೆರೆಸುವಂತೆ ದೇವರು ತನ್ನ ಗ್ರಂಥದಲ್ಲಿ ಮೂರು ಗ್ರಂಥಗಳನ್ನು ಓದದವನು ಮೂರು ಗ್ರಂಥಗಳಲ್ಲಿ ದೇವರು ಹೇಳಿದ ಜ್ಞಾನವನ್ನು ಆಚರಿಸದವನು, ತನ್ನ ಗ್ರಂಥವನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರೂ ಅಂತಹವನು ಯಾವ ಮತಧರ್ಮದಲ್ಲಿ ಇಲ್ಲದಂತೇ, ಅವನು ಯಾವ ಗುಂಪಿಗೆ ಸೇರಿದವನಲ್ಲ

ಎನ್ನುವಂತೆ ಅಂತಿಮದೈವಗ್ರಂಥದಲ್ಲಿ ಸೂರಾ 5, ಆಯತ್ 68ರಲ್ಲಿ ಹೇಳಿದ್ದಾರೆ ನೋಡಿರಿ.

**(5–68) "ಓ ಗ್ರಂಥವಾಹಕರೇ! ನೀವು ತೌರಾತ್‌ನ್ನು, ಇಂಜೀಲನ್ನು. (ಭಗವದ್ಗೀತೆ, ಬೈಬಲ್) ಮತ್ತು ನಿಮ್ಮ ಪ್ರಭು ಕಡೆಯಿಂದ ನಿಮ್ಮ ಹತ್ತಿರಕ್ಕೆ ಕಳಿಸಲ್ಪಟ್ಟಿರುವುದನ್ನು (ಖುರ್‌ಆನ್ ಗ್ರಂಥವನ್ನು) ಓದಿ ನಿಮ್ಮ ಜೀವನದಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೆ ಇಲ್ಲದಂತೆ".**

ಈ ವಾಕ್ಯವನ್ನು ನೋಡಿದ ನಂತರವಾದರೂ ಇತರ ಗ್ರಂಥಗಳನ್ನು ಸಹಿತ ಗೌರವಿಸುತ್ತಾ ಮೂರು ಗ್ರಂಥಗಳಲ್ಲಿನ ವಾಕ್ಯಗಳನ್ನು ಸಹಿತ ದೇವರ ವಾಕ್ಯಗಳಾಗಿಯೇ ಲೆಕ್ಕಿಸಿ ನೋಡಿದವನು ಯಾವಮತದಲ್ಲಿದ್ದರೂ ಅವನು ದೇವರ ಧರ್ಮದಲ್ಲಿ ಇದ್ದಂತೆ. ಹಾಗೆ ಇತರ ಗ್ರಂಥಗಳಲ್ಲಿನ ದೈವವಾಕ್ಕನ್ನು ಲೆಕ್ಕಿಸದವನು ಯಾವ ಮತದಲ್ಲಿದ್ದರೂ ಅವನು ದೇವರ ಧರ್ಮದಲ್ಲಿ ಇಲ್ಲದಂತೇ ಆಗುತ್ತದೆ. ಇದರ ಪ್ರಕಾರ ಬೈಬಲ್ ಗ್ರಂಥದಲ್ಲಿ (ಯೋಹಾನ್ 5–21 ರಿಂದ 26 ರವರೆಗು) ಇರುವ ಸಂದೇಶವನ್ನು ಗ್ರಹಿಸಿದವನು, ಅದಕ್ಕೆ ಅನುಗುಣವಾಗಿರುವ ಅಂತಿಮದೈವಗ್ರಂಥ ಖುರ್‌ಆನ್‌ನಲ್ಲಿ (3–18) ವಾಕ್ಯವನ್ನು ಸಮಾನವಾಗಿ ನೋಡಬಹುದು. ಹಾಗೇ (6–102) ವಾಕ್ಯವನ್ನು ಕೂಡಾ ಅದರೊಂದಿಗೆ ಹೋಲಿಸಿ ನೋಡಿಕೊಳ್ಳಬಹುದು. ಈ ವಿಧವಾಗಿ ಬೇರೆಬೇರೆ ಗ್ರಂಥಗಳಲ್ಲಿರುವ ವಿಷಯಗಳನ್ನು ಒಂದುಕಡೆ ಸೇರಿಸಿ ನೋಡಿಕೊಳ್ಳುವುದರಿಂದ ದೇವರ ಮಾತಿನಲ್ಲಿನ ಸತ್ಯವು ತಿಳಿಯುತ್ತದೆ. ಈಗ ಮೂರು ವಾಕ್ಯಗಳಿಂದ ಸೃಷ್ಠಿಕರ್ತನಾದ ಅಲ್ಲಾಹ್ ಮತ್ತೊಬ್ಬ ಸೃಷ್ಠಿಕರ್ತನಾದ ಅಲ್ಲಾಹ್‌ನನ್ನು ಸ್ವತಃವಾಗಿ ತನ್ನ ಅಧಿಕಾರಕೊಟ್ಟು ನೇಮಿಸಿದ್ದಾನೆಂದು ಹೇಳುವುದಕ್ಕೆ ಪೂರ್ತಿ ಸಾಕ್ಷ್ಯವು ದೊರೆಯುತ್ತದೆ. ಸರ್ವಲೋಕಗಳನ್ನು ಎಂದರೇ ಒಟ್ಟಾರೆ ಪ್ರಪಂಚವನ್ನು ಸೃಷ್ಠಿಸಿದವನು ಅಲ್ಲಾಹ್ ಆತನೇ ಮೊದಲ ದೇವರು. ನಂತರ ದೇವರಾಗಿ ನಿಯಮಿಸಲ್ಪಟ್ಟ ಆತ್ಮ, ದೇವರಿಂದ ಸೃಷ್ಠಿಸಲ್ಪಟ್ಟವನು, ಆದ್ದರಿಂದಲೇ ಆತ್ಮ

ದೇವರಿಗೆ ಧರ್ಮಗಳಿವೆ. ಮೊದಲ ದೇವರಿಗೆ ಧರ್ಮಗಳಿಲ್ಲ. ಆತನು ಧರ್ಮಗಳಿಗೆ ಅತೀತನು, ಧರ್ಮಗಳಿಂದ ತಿಳಿಯಲ್ಪಡುತ್ತಾನೆಂದು ಹೇಳಲಾರೆವು. ಏಕೆಂದರೆ! ಆತನಿಗೆ ಧರ್ಮಗಳಿಲ್ಲ. ಸೃಷ್ಟಿಸಲ್ಪಟ್ಟ ದೇವರಿಗೆ ಧರ್ಮಗಳಿವೆ. ಆತನು ಧರ್ಮಗಳಿಂದ ತಿಳಿಯುತ್ತಾನೆ.

ನಾವು ಗ್ರಂಥ ಪ್ರಾರಂಭದಲ್ಲಿಯೇ ಧರ್ಮಗಳಿರುವ ದೇವರು, ಧರ್ಮಗಳಿಲ್ಲದ ದೇವರು ಎಂದು ಎರಡು ವಿಧಗಳು ಹೇಳಿಕೊಂಡಿದ್ದೇವೆ. ಮೂರು ದೈವಗ್ರಂಥಗಳಲ್ಲಿ ಹೇಳಿದ ಪ್ರಕಾರ ಮನುಷ್ಯರಿಗೆ ಆರಾಧ್ಯದೈವ ದೇವರೊಬ್ಬನೆ. ಆದರೇ ಧರ್ಮಗಳಿರುವ ದೇವರೇ ಮಾನವರೆಲ್ಲರಿಗೂ ದೇವರೆಂದು ಮೂರು ದೈವಗ್ರಂಥಗಳು ಹೇಳಿವೆ. ಭಗವದ್ಗೀತೆಯಲ್ಲಿ ದೇವರ ಧರ್ಮಗಳು ಸಂಪೂರ್ಣವಾಗಿವೆ. ಒಂದು ಭಗವದ್ಗೀತೆಯಲ್ಲಿಯೇ ಅಲ್ಲದೆ ಉಳಿದ ಎರಡು ದೈವಗ್ರಂಥಗಳಾದ ಬೈಬಲ್‌ನಲ್ಲಿ, ಖುರ್‌ಆನ್‌ನಲ್ಲಿ, ಧರ್ಮಗಳಿರುವ ದೇವರನ್ನು ಕುರಿತು ಹೇಳಿದ್ದಾರೆ. ಧರ್ಮಗಳ ಪ್ರಕಾರವೇ ದೇವರು ತಿಳಿಯುತ್ತಾನೆಂದು, ಧರ್ಮಗಳ ಪ್ರಕಾರ ಆಚರಿಸಿದಾಗ ಕರ್ಮ ನಶಿಸಿ ಕರ್ಮರಹಿತನಾಗುತ್ತಾನೆಂದು, ಕರ್ಮರಹಿತವಾದ ನಂತರ ದೇವರು ತಿಳಿಯಲ್ಪಡುತ್ತಾನೆಂದು ಹೇಳಿದ್ದಾರೆ. ಮನುಷ್ಯ ಧರ್ಮಗಳನ್ನು ತಿಳಿದು ಆಚರಿಸಿದಾಗ ಕರ್ಮ ಅಂಟದಂತೆಹೋಗಿ ಕರ್ಮಯೋಗವಾಗುತ್ತದೆಂದು, ಧರ್ಮಗಳ ಮೂಲಕ ಯೋಗ ಲಭ್ಯವಾಗಿ ಕರ್ಮನಾಶವಾಗುತ್ತಾ ಹೋಗಿ ಕೊನೆಯದಾಗಿ ಜೀವಿಗೆ ಮೋಕ್ಷವು ಲಭಿಸುತ್ತದೆಂದು ಹೇಳಲ್ಪಟ್ಟಿದೆ. ಕರ್ಮ ಯೋಗಕ್ಕೆ ಸಂಬಂಧಿಸಿದ ಜ್ಞಾನ ಭಗವದ್ಗೀತೆಯಲ್ಲಿ ಮೂರು ಅಥವಾ ನಾಲ್ಕುನೂರು ಶ್ಲೋಕಗಳಲ್ಲಿ ಇದೆ. ಧರ್ಮಗಳಿಂದಲೇ ಲಭಿಸುವ ಬ್ರಹ್ಮಯೋಗವು ಕೆಲವು ಶ್ಲೋಕಗಳಲ್ಲಿಯೇ ಹೇಳಲಾಗಿದೆ. ಧರ್ಮಗಳಿಂದಲೇ ಲಭಿಸುವ ಬ್ರಹ್ಮಯೋಗ ಕೆಲವು ಶ್ಲೋಕಗಳಲ್ಲಿಯೇ ಹೇಳಲ್ಪಟ್ಟಿದೆ. ಧರ್ಮಗಳಿಂದ ಆಚರಿಸಲ್ಪಡುವ ಕರ್ಮಯೋಗ ಹೇಗೆ ಇದೆಯೋ ಉದಾಹರಣೆಗೆ ಮೋಕ್ಷಸನ್ಯಾಸ ಯೋಗ ಎನ್ನುವ ಅಧ್ಯಾಯದಲ್ಲಿ 17ನೇ ಶ್ಲೋಕದಲ್ಲಿ ನೋಡೋಣ.

**ಶ್ಲೋ॥ 17. ಯಸ್ಯ ನಾಹಂಕೃತೋಭಾವೋ ಬುದ್ಧಿ ರಸ್ಯನ ಲಿಪ್ಯತೇ ।**
**ಹತ್ವಾಪಿ ಸ ಇಮಾನ್ ಲೋಕಾನ್ನ ಹನ್ತಿ ನನಿಬಧ್ಯತೇ ॥**

**ಭಾವಾರ್ಥ :– "ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೋ, ಫಲಿತಾಂಶದ ಮೇಲೆ ಯಾರಿಗೆ ಆಸಕ್ತಿಯಿಲ್ಲವೋ ಆವನು ಈ ಲೋಕದಲ್ಲಿ ಇರುವವರೆಲ್ಲರನ್ನು ಸಾಯಿಸಿದರೂ ಆತನು ಹಂತಕನಲ್ಲ. ಹತ್ಯೆ ಪಾಪ ಅವನಿಗೆ ಅಂಟುವುದಿಲ್ಲ."**

ದೇವರ ಧರ್ಮದ ಪ್ರಕಾರ ಮನುಷ್ಯನ ಭಾವನೆಯಲ್ಲಿ ನಾನು ಮಾಡುತ್ತಿದ್ದೇನೆಂದು ಅಹಂಕಾರವಿಲ್ಲದೆ ಇರುವುದು ಕರ್ಮಯೋಗವಾಗುತ್ತದೆ. ಹಾಗೇ ಮನಸ್ಸು ಕೆಲಸ ಮಾಡದೆಹೋದರೆ ಬ್ರಹ್ಮಯೋಗವಾಗುತ್ತದೆ. ಈ ಎರಡು ಧರ್ಮಯುಕ್ತ ಯೋಗಗಳೇ ದೇವರ ಧರ್ಮದ ಪ್ರಕಾರ ಈ ಎರಡು ಯೋಗಗಳು ಇವೆ. ಶರೀರದಲ್ಲಿನ ಜೀವಿಯನ್ನು ನಡೆಸುವ ಆತ್ಮವೇ ಜೀವಿಗೆ ದೇವರಾಗಿದ್ದಾನೆ. ಜೀವಿಗೆ ಸ್ಥಾನ ಶರೀರ. ಆದ್ದರಿಂದ ಶರೀರದಲ್ಲಿ ಅಧಿಪತಿಯಾದ ಆತ್ಮವೇ ಜೀವಿಗೆ ದೇವರಾಗಿ ನೇಮಿಸಲ್ಪಟ್ಟಿದೆ. ಧರ್ಮಗಳಿಲ್ಲದ ದೇವರು, ಧರ್ಮಗಳಿರುವ ದೇವರನ್ನು ಶರೀರದಲ್ಲಿ ನೇಮಿಸಿದ್ದಾನೆ. ಪ್ರಪಂಚವನ್ನು ಸೃಷ್ಟಿಸಿದ ದೇವರು ತಾನು ಸೃಷ್ಟಿಸಿದ ಆತ್ಮವನ್ನು ದೇವರಾಗಿ ನೇಮಿಸಿದ್ದಾನೆ. **"ಸೃಷ್ಟಿಸಲ್ಪಟ್ಟಿರುವ ಪ್ರತಿಯೊಂದಕ್ಕು ಧರ್ಮಗಳಿರುತ್ತವೆ"** ಎನ್ನುವ ಸೂತ್ರದ ಪ್ರಕಾರ ಶರೀರದಲ್ಲಿ ಮನುಷ್ಯರಿಗೆ, ಜೀವರಾಶಿಗಳಿಗೆ ಶರೀರವನ್ನು ಧರಿಸಿದ ಸಮಸ್ತ ಪ್ರಾಣಿಗಳಿಗು ಆತ್ಮವೇ ದೇವರಾಗಿ ಇದ್ದಾನೆ. ಆತ್ಮಗೆ ಆತ್ಮ ಧರ್ಮಗಳೆನ್ನುವವು ಕೆಲವು ಇವೆ. ಅವುಗಳನ್ನೇ ದೈವಧರ್ಮಗಳು, ದೇವರ ಧರ್ಮಗಳು ಎಂದು ಕರೆಯುತ್ತಿದ್ದೇವೆ. ಶರೀರದಲ್ಲಿನ ದೈವಧರ್ಮಗಳ ಪ್ರಕಾರ ಕರ್ಮಯೋಗ, ಬ್ರಹ್ಮಯೋಗ ಎನ್ನುವವು ಇವೆಯೆಂದು ಹೇಳಿದ್ದೇವೆ.

ದೇವರನ್ನು ತಿಳಿಯುವುದಕ್ಕೆ ಧರ್ಮಗಳಿಂದ ಕೂಡಿದ ಯೋಗಗಳು ಎರಡು ಇವೆ. ಹಾಗೆಯೇ ಧರ್ಮವಿಲ್ಲದ ಯೋಗವು ಕೂಡಾ ಒಂದು ಇದೆ. ಧರ್ಮಯುಕ್ತವಾದ ಯೋಗಗಳು ಎರಡು ವರಸೆ ಕ್ರಮವಾಗಿ ಕರ್ಮಯೋಗ,

ಬ್ರಹ್ಮಯೋಗ ಆಗಿದ್ದು ಧರ್ಮರಹಿತ ಯೋಗ ಭಕ್ತಿಯೋಗವು ಇದೆ. ಯೋಗಗಳು ಒಟ್ಟು ಮೂರು ಇವೆ. ಧರ್ಮಗಳಿರುವ ಯೋಗದಿಂದ ಸೃಷ್ಠಿಸಲ್ಪಟ್ಟ ಶರೀರದಲ್ಲಿನ ದೇವರನ್ನು ತಿಳಿಯಬಹುದು. ಈ ಎರಡು ಯೋಗಗಳು ತಿಳಿದವನಿಗೆ ಭಕ್ತಿಯೋಗ ಎಂದರೆ ಏನೋ ತಿಳಿಯುತ್ತದೆ. ಭಕ್ತಿಯೋಗ ಧರ್ಮರಹಿತ ಯೋಗವೆಂದು ಹೇಳಿದ್ದೇವೆ ಅಲ್ಲವೆ! ಅದನ್ನು ಕುರಿತು ಭಗವದ್ಗೀತೆಯಲ್ಲಿ ಮೋಕ್ಷಸನ್ಯಾಸ ಯೋಗದಲ್ಲಿ ಅರವತ್ತಾರನೆ (66) ಶ್ಲೋಕದಲ್ಲಿ ಏನು ಹೇಳಿದ್ದಾರೊ ನೋಡಿರಿ.

**ಶ್ಲೋ॥ 66. ಸರ್ವಧರ್ಮಾನ್ ಪರಿತ್ಯಜ್ಯ ಮಾ ಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಶ್ಯಾಮಿ ಮಾಶುಚಃ ॥**

**ಭಾವಾರ್ಥ :– "ಸರ್ವಧರ್ಮಗಳನ್ನು ಸಂಪೂರ್ಣವಾಗಿ ಬಿಟ್ಟು ನೀನು ನನ್ನನ್ನು ಮಾತ್ರವೇ ನಂಬಿಕೋ. ನಿನ್ನನ್ನು ಕರ್ಮಗಳಿಂದ ಹೊರಹಾಕುತ್ತೇನೆ. ನಿನ್ನ ದುಃಖಗಳೆಲ್ಲ ಬಿಟ್ಟು ನೀನು ಮೋಕ್ಷವನ್ನು ಹೊಂದುತ್ತೀಯಾ."**

ಈ ಭಕ್ತಿಯೋಗಕ್ಕೆ ಸಂಬಂಧಿಸಿದ ಶ್ಲೋಕಗಳು ಭಗವದ್ಗೀತೆಯನ್ನೆಲ್ಲಾ ಹುಡಿಕಿದರೂ ಎರಡೇ ಇವೆ. ಒಂದು ಭಕ್ತಿಯೋಗ ಎನ್ನುವ ಅಧ್ಯಾಯದಲ್ಲಿ ಹತ್ತನೇ ಶ್ಲೋಕ, ಮೋಕ್ಷಸನ್ಯಾಸ ಯೋಗದಲ್ಲಿ ಅರವತ್ತಾರನೇ ಶ್ಲೋಕ ಎರಡೇ ಇವೆಯೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಅಧಿಕಭಾಗ ಕರ್ಮಯೋಗಕ್ಕೆ ಸಂಬಂಧಿಸಿದ ಶ್ಲೋಕಗಳು ಇವೆ. ಕೆಲವು ಹತ್ತರ ಸಂಖ್ಯೆಯಲ್ಲಿ ಮಾತ್ರ ಬ್ರಹ್ಮಯೋಗಕ್ಕೆ ಸಂಬಂಧಿಸಿದ ಶ್ಲೋಕಗಳು ಇವೆ. ಹಾಗೇ ಭಕ್ತಿಯೋಗಕ್ಕೆ ಸಂಬಂಧಿಸಿರುವವು ಎರಡೇ ಇವೆಯೆಂದು ಹೇಳಬಹುದು. ಧರ್ಮಗಳಿಂದ ಕೂಡಿದ ಕರ್ಮ, ಬ್ರಹ್ಮಯೋಗಗಳು ತಿಳಿದವನಿಗೇ ನಂತರ ಭಕ್ತಿಯೋಗ ತಿಳಿಯುತ್ತದೆ. ಧರ್ಮಯುಕ್ತವಾದ ಕರ್ಮ, ಬ್ರಹ್ಮಯೋಗಗಳು ತಿಳಿಯದೇ ಭಕ್ತಿಯೋಗ ತಿಳಿಯುವುದಿಲ್ಲ. ಯಾವಮಾತ್ರ ಅವಹಾಹನೆಗು ಬರುವುದಿಲ್ಲ. ಹಾಗೇ ಧರ್ಮಯುಕ್ತವಾದ ಆತ್ಮ ದೇವರು ತಿಳಿಯದವರೆಗು ಸೃಷ್ಠಿಕರ್ತನಾದ ಪರಮಾತ್ಮ ತಿಳಿಯುವುದಿಲ್ಲ.

**ಪ್ರಶ್ನೆ :– ಸರ್ವ ಪ್ರಪಂಚನ್ನು ಸೃಷ್ಠಿಸಿದವನು ದೇವರು. ಪ್ರಪಂಚವನ್ನು ಸೃಷ್ಠಿಸಿದ ದೇವರು ಯಾರಿಂದಲೂ ಸೃಷ್ಠಿಸಲ್ಪಡಲಿಲ್ಲ. ಆತನ ಆತ್ಮವನ್ನೇ ದೇವರಾಗಿ ನೇಮಿಸಿ ಜಗತ್ತು ನಡೆಯುವಂತೆ ಮಾಡಿದ್ದಾನೆ. ಆತ್ಮ ದೇವರಾಗಿ ಸೃಷ್ಠಿಸಲ್ಪಟ್ಟಿದ್ದಾನೆ. ದೇವರು ಒಬ್ಬನೇ ಸೃಷ್ಠಿಕರ್ತ, ಆತ್ಮ ಸೃಷ್ಠಿಕರ್ತ ಅಲ್ಲವಲ್ಲ! ಸೃಷ್ಠಿಕರ್ತ ಆದವನೇ ಕಾರ್ಯ ಕರ್ತನಾಗಿ ಇದ್ದಾನೆಂದು (6–102)ರಲ್ಲಿ ಹೇಳಿದಂತೆ ಇದೆ. ಸೃಷ್ಠಿಕರ್ತ ಒಬ್ಬನೇ ಅಲ್ಲವೆ! ಇಬ್ಬರು ಸೃಷ್ಠಿಕರ್ತರು ಇಲ್ಲವಲ್ಲ! (6–102) ವಾಕ್ಯದಲ್ಲಿ "ಈತನು ಹೊರತು ಇತರೆ ಆರಾಧ್ಯನು ಇಲ್ಲ. ಈತನೇ ಸರ್ವರಿಗು ಸೃಷ್ಠಿಕರ್ತನಾದ ದೇವರು ಮತ್ತು ಈತನೇ ಕಾರ್ಯಕರ್ತನಾಗಿ ಇದ್ದಾನೆ." ಎಂದು ಹೇಳಲ್ಪಟ್ಟಿದೆ ಅಲ್ಲವೆ! ಮನುಷ್ಯರು ಆರಾಧಿಸಬೇಕಾದ ದೇವರು ಶರೀರದಲ್ಲಿ ಕಾರ್ಯಕರ್ತನಾದರೆ ಆತನನ್ನು ಸೃಷ್ಠಿಕರ್ತ ನೆಂದು ವಾಕ್ಯದಲ್ಲಿ ಹೇಳಿರುವುದನ್ನು ಅನುಸರಿಸಿ ಈ ವಾಕ್ಯವನ್ನು ನೀವೇ ತಪ್ಪಾಗಿ ಅರ್ಥಮಾಡಿಕೊಂಡು ಇರುತ್ತೀರೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಇದಕ್ಕೆ ನೀವು ಏನು ಹೇಳುತ್ತೀರಾ?**

**ಉತ್ತರ :–** ಆತ್ಮವನ್ನು ದೇವರಾಗಿ ಸೃಷ್ಠಿಸಿದವನು ಒಬ್ಬನೇ ಸೃಷ್ಠಿಕರ್ತ ಎನ್ನುವ ಮಾತು ಸತ್ಯವೇ ಆದರೂ ಮನುಷ್ಯ ಎಷ್ಟೋ ಗ್ರಾಹಿತಶಕ್ತಿಯಿಂದ ಅರ್ಥಮಾಡಿಕೊಳ್ಳಬೇಕಾಗಿದೆ. ದೇವರು ಆದಿಯಲ್ಲಿ ಸಮಸ್ತ ಪ್ರಪಂಚವನ್ನು ಸೃಷ್ಠಿಸಿದ ಮಾತು ವಾಸ್ತವವೇ. ಆದರೇ ಸೃಷ್ಠಿ ನಡೆದ ನಂತರ ಆತ್ಮವನ್ನು ದೇವರಾಗಿ ನೇಮಿಸಿ ದೇವರು ಅಂದರೇ ಪರಮಾತ್ಮ ಮೊದಲು ಸೃಷ್ಠಿ ನಂತರ ಯಾವ ಕೆಲಸವನ್ನು ಮಾಡದೆ ಸುಮ್ಮನಿದ್ದು ಹೋಗಿದ್ದಾನೆ. ಅಂದಿನಿಂದ ತಾನು ಮಾಡಬೇಕಾದ ಕೆಲಸವೆಲ್ಲವನ್ನು ತನ್ನ ಆತ್ಮಗೆ ಒಪ್ಪಿಸಿ ತನ್ನ ಆತ್ಮನನ್ನೇ ದೇವರಾಗಿ, ಅಧಿಪತಿಯಾಗಿ ನೇಮಿಸಿ ತಾನು ಯಾರಿಗೂ ತಿಳಿಯದಂತೆ ಶರೀರದೊಳಗೆ, ಶರೀರದಹೊರಗೆ ಸಾಕ್ಷಿಯಾಗಿದ್ದು ಹೋಗಿದ್ದಾನೆ. ಅಂದಿನಿಂದ ಸೃಷ್ಠಿಕಾರ್ಯವನ್ನು ಆತ್ಮವೇ ಮಾಡುತ್ತಿದೆ. ಸಕಲ ಜೀವರಾಶಿಗಳ ಸಾವುಹುಟ್ಟುಗಳನ್ನು ಆತ್ಮ ಪ್ರಕೃತಿಯೊಂದಿಗೆ ಕೂಡಿ ಮಾಡುತ್ತಿದೆ. ಆತ್ಮ ನಿತ್ಯವೂ ಹುಟ್ಟುವವರಿಗೆ ತಂದೆಯಾಗಿದ್ದಾನೆ. ಆದರೇ ಪರಮಾತ್ಮನಾದ ದೇವರು ಮೊದಲು ಪಂಚಭೂತ

ಪ್ರಪಂಚವನ್ನು ಸೃಷ್ಠಿಸಿದ್ದಾನೆ. ನಂತರ ಜೀವರಾಶಿಗಳ ಸೃಷ್ಠಿಯನ್ನು ಆತ್ಮಗೆ ಒಪ್ಪಿಸಿದ್ದಾನೆ. ಆಗಿನಿಂದ ಆತ್ಮವೇ ಸಕಲ ಜೀವರಾಶಿಗಳನ್ನು ಸೃಷ್ಠಿಸುತ್ತಿದೆ. ಪ್ರಕೃತಿ ಸಕಲ ಜೀವಿಗಳ ಶರೀರಗಳಿಗೆ ತಾಯಿ ಆಗಿದ್ದು ಬೀಜದಾತನಾದ ಆತ್ಮ ಎಲ್ಲರಿಗೂ ತಂದೆಯಾಗಿದ್ದಾನೆ. ಈ ವಿಷಯ ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗ ಎನ್ನುವ ಅಧ್ಯಾಯದಲ್ಲಿ 3, 4 ಶ್ಲೋಕಗಳಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 3. ಮಮ ಯೋನಿ ರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವ ಸ್ಸರ್ವ ಭೂತಾನಾಂ ತತೋ ಭವತಿ ಭಾರತ ॥**

**ಶ್ಲೋ॥ 4. ಸರ್ವಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ॥**

**ಭಾವಾರ್ಥ :– ಪ್ರಕೃತಿ ಗರ್ಭ ಹೊಂದಿರುವುದಾಗಿದ್ದು ನಾನು ಅದಕ್ಕೆ ಬೀಜದಾತನಾಗಿ ಇದ್ದೇನೆ. ಆದ್ದರಿಂದ ಸಮಸ್ತ ಜೀವರಾಶಿಗಳು ನನ್ನಿಂದಲೇ ಹುಟ್ಟುತ್ತಿದ್ದಾರೆ. ಸರ್ವ ಗರ್ಭಗಳಲ್ಲಿ ಜನ್ಮಿಸುವ ಯಾವ ಜೀವರಾಶಿಗಾದರೂ ತಾಯಿ ಪ್ರಕೃತಿಯಾಗಿದ್ದು ನಾನು ತಂದೆಯಾಗಿ ಇದ್ದೇನೆ.**

ಆತ್ಮವನ್ನು ಸೃಷ್ಠಿಸಿದ ಪರಮಾತ್ಮ ಪ್ರಪಂಚವನ್ನು ಸೃಷ್ಠಿಸಿದಾಗ ನಂತರ ಜೀವರಾಶಿಗಳನ್ನು ಸೃಷ್ಠಿಸುವ ಜವಾವಾಬ್ಧಾರಿ ಒಪ್ಪಿಸಲ್ಪಟ್ಟಿದೆ. ಆಗಿನಿಂದ ಆತ್ಮ ಜೀವರಾಶಿಗಳ ವಿಷಯದಲ್ಲಿ ಸೃಷ್ಠಿಕರ್ತನಾಗಿ ಬದಲಾಗಿಹೋಗಿದೆ. ಪರಮಾತ್ಮ ಪಂಚಭೂತ ಪ್ರಪಂಚವನ್ನು ತಯಾರುಮಾಡಿದ್ದಾನೆ. ನಂತರ ಆತನು ಕಾರ್ಯವನ್ನು ಮಾಡುವವನಾಗಿ ಅಲ್ಲದೇ ದೃಶ್ಯವನ್ನು ನೋಡುವವನಾಗಿ ನಿಂತುಹೋಗಿದ್ದಾನೆ. ನಂತರ ದೇವರಾಗಿ ಜವಾಬ್ದಾರಿಯನ್ನು ಸ್ವೀಕರಿಸಿದ ಆತ್ಮ ಜೀವರಾಶಿಗಳನ್ನು ಸೃಷ್ಠಿಸಿದೆ. ಶರೀರಗಳನ್ನು ಪ್ರಕೃತಿ ತಯಾರು ಮಾಡಿದರೆ ಅದರಲ್ಲಿ ಜೀವಾತ್ಮಗಳನ್ನು ತುಂಬುತ್ತಾ ಶರೀರದಲ್ಲಿ ಸ್ವತಃ ಆತ್ಮವೇ ಕಾರ್ಯಕರ್ತನಾಗಿ ಇದ್ದುಹೋಗಿದೆ. ಆತ್ಮ ಹಾಗೆ ಇರುವುದರಿಂದ "ಆತನೇ ಸೃಷ್ಠಿಕರ್ತ, ಆತನೇ ತಂದೆ, ಆತನೇ ದೇವರು". ಎಂದು ಆತ್ಮವನ್ನೇ ಹೇಳಬೇಕಾಗಿ

ಬಂದಿದೆ. ಆದ್ದರಿಂದ (6–102) ನೇ ವಾಕ್ಯದಲ್ಲಿ ಆತ್ಮವೇ ದೇವರೆಂದು ಹೇಳುವುದೇ ಅಲ್ಲದೆ **"ಆತನು ಸರ್ವರಿಗೂ ಸೃಷ್ಠಿಕರ್ತನಾಗಿ ಇದ್ದಾನೆಂದು, ಅಷ್ಟೇ ಅಲ್ಲದೆ ಕಾರ್ಯಕರ್ತನಾಗಿ ಕೂಡಾ ಇದ್ದಾನೆಂದು"** ಹೇಳುವುದಾಗಿದೆ. ದೈವ ಗ್ರಂಥಗಳಲ್ಲಿ ಪರಮಾತ್ಮನನ್ನು, ಆತ್ಮವನ್ನು ಇಬ್ಬರನ್ನು ಸೃಷ್ಠಿಕರ್ತನೆಂದು ಹೇಳಿದ್ದಾರೆ. ಆದರೆ ಯಾರು ಯಾವುದನ್ನು ಸೃಷ್ಠಿಸಿರುವುದು ಕೂಡಾ ಸೂಚನೆಯಾಗಿ ಹೇಳಿದ್ದಾರೆ. ನಾವು ಗ್ರಂಥದಲ್ಲಿನ ವಿಷಯವನ್ನು ಅರ್ಥಮಾಡಿಕೊಂಡಿದ್ದೇವೆ. ಆದ್ದರಿಂದ ಯಾರು ಏನನ್ನು ಸೃಷ್ಠಿಸಿದ್ದಾರೋ ಹೇಳುತ್ತಿದ್ದೇವೆ. ದೇವರು ಹೇಳಿದ ವಾಕ್ಯವು ಅರ್ಥವಾಗದಿದ್ದರೆ ದೇವರಜ್ಞಾನ ಸರಿಯಾಗಿ ಅರ್ಥವಾಗುವುದಿಲ್ಲ. ಆದ್ದರಿಂದ ಮೊದಲು ದೇವರು ತನ್ನ ಗ್ರಂಥಗಳಲ್ಲಿ ಏನು ಹೇಳಿದ್ದಾನೊ ಜಾಗ್ರತೆಯಾಗಿ ನೋಡಬೇಕಾಗಿದೆ. ಹಾಗೆ ನೋಡಿದರೆ ಪರಮಾತ್ಮ ದೇವರು, ಆತ್ಮ ದೇವರು ಇಬ್ಬರಿರುವಾಗ ಪರಮಾತ್ಮ ದೇವರು ಮಾನವರು ಆರಾಧಿಸಬೇಕಾದ ದೇವರು ಆತ್ಮ ದೇವರೆಂದು ಹೇಳಿ, ಆತ್ಮವನ್ನು ದೈವವಾಗಿ ಮುಂದುವರೆಯುವಂತೆ ಮಾಡಿ, ತಾನು ಯಾರಿಗೂ ತಿಳಿಯದವನಾಗಿ ಕಾರ್ಯವನ್ನು ಮಾಡದೆ ಸ್ತಬ್ಧತೆಯಾಗಿದ್ದಾನೆ.

ಪರಮಾತ್ಮ ದೇವರು ಆತ್ಮ ದೇವರನ್ನು ನೇಮಿಸಿದ್ದಾನೆಂದು ಎಲ್ಲಾ ಅಧಿಕಾರಗಳು ಆತ್ಮಗೆ ಕೊಟ್ಟು ಆತನೇ (ಆತ್ಮವೇ) ನಿಮಗೆ ಆರಾಧ್ಯದೈವವೆಂದು ಹೇಳಿರುವಾಗ ಇಬ್ಬರು ದೇವರುಗಳಲ್ಲಿ ಮನುಷ್ಯರಾದ ನಾವು ಆರಾಧಿಸಬೇಕಾದ ದೇವರು ಆತ್ಮವೇ ಎಂದು ಇಲ್ಲಿಯವರೆಗು ಯಾರಿಗೂ ತಿಳಿಯದಂತೆ ಹೋಗಿದೆ. ಎಲ್ಲರಿಗೂ ದೇವರು ಒಬ್ಬನೇ ಎನ್ನುವಮಾತು ವಾಸ್ತವವೇ ಆದರೂ ಆ ದೇವರು ಯಾರೋ ಯಾರಿಗೂ ತಿಳಿದಿಲ್ಲ. ಪ್ರಸ್ತುತ ಕಾಲದಲ್ಲಿ ಮುಸ್ಲಿಮ್‌ರು ಒಬ್ಬ ದೇವರನ್ನೇ ವಿಶ್ವಾಸಿಸಿದ್ದಾರೆ. ಒಬ್ಬ ದೇವರನ್ನೇ ನಮಾಜ್ ಮಾಡುತ್ತಿದ್ದಾರೆ. ಅಲ್ಲಿಯವರೆಗು ಎಲ್ಲಾ ಚೆನ್ನಾಗಿವೆ. ಆ ಒಬ್ಬ ದೇವರನ್ನೇ ಕೆಲಸ ಮಾಡುವವನು ಅಲ್ಲವೆಂದು ಹೇಳುತ್ತಿದ್ದಾರೆ. ನಂತರ ಕೆಲವು ಸಮಯಗಳಲ್ಲಿ ದೇವರೇ ಎಲ್ಲಾ ಮಾಡುತ್ತಿದ್ದಾನೆಂದು ಹೇಳುತ್ತಿದ್ದಾರೆ. ಅದರಿಂದ ಅವರಿಗೇ ದೇವರು ಕೆಲಸ

ಮಾಡುವವನಾ? ಕೆಲಸ ಮಾಡದವನಾ! ಎಂದು ಪೂರ್ತಿ ತಿಳಿಯದಂತೆ ಇದೆ. ಖುರ್‌ಆನ್ ಗ್ರಂಥದಲ್ಲಿಯೂ ಸಹ 2ನೇ ಸೂರಾ 117ನೇ ಆಯತ್‌ನಲ್ಲಿ **"ದೇವರು ಕೆಲಸ ಮಾಡುವುದಿಲ್ಲ ಆತನದು ಸಂಕಲ್ಪ ಮಾತ್ರವೇ ಇದೆಯೆಂದು"** ಹೇಳಲಾಗಿದೆ. ಅದಕ್ಕೆ ವಿರುದ್ಧವಾಗಿ ಸೂರಾ 32 ಆಯತ್ 4 (32–4) ರಲ್ಲಿಯೂ ಮತ್ತು (2–255) ಆಯತ್‌ರಲ್ಲಿಯೂ **"ದೇವರು ಕೆಲಸ ಮಾಡುವನು"** ಎಂದು ಬರೆಯಲಾಗಿದೆ. ದೈವ ಗ್ರಂಥಗಳಲ್ಲಿ ಇಬ್ಬರು ದೇವರುಗಳನ್ನು ಹೇಳಿದ್ದಾರಾದ್ದರಿಂದ ಒಬ್ಬ ದೇವರು ಕೆಲಸ ಮಾಡುವುದಿಲ್ಲವೆಂದು, ಒಬ್ಬ ದೇವರು ಕೆಲಸ ಮಾಡುವನೆಂದು ಹೇಳಲಾಗಿದೆ. ಆದರೇ ಭೂಮಿಮೇಲೆ ಮನುಷ್ಯರೆಲ್ಲರಿಗೂ ದೇವರು ಎರಡಾಗಿ ಇದ್ದಾನೆಂದು ಮಾತ್ರ ತಿಳಿದಿಲ್ಲ. ಅಷ್ಟೋ ಇಷ್ಟೋ ಜ್ಞಾನ ತಿಳಿದಿದೆ ಎನ್ನುವವರೆಲ್ಲರೂ ದೇವರು ಒಬ್ಬನೇ ಎಂದು ಒಬ್ಬನನ್ನೇ ಆರಾಧಿಸಬೇಕೆಂದು ಹೇಳುತ್ತಿರುವರು. ಒಬ್ಬನನ್ನೇ ಆರಾಧಿಸಬೇಕೆನ್ನುವುದು ಸತ್ಯವೇ ಆದರೇ ಅದನ್ನು ಆಧಾರಮಾಡಿಕೊಂಡು ದೇವರು ಒಬ್ಬನೇ ಎಂದು ಹೇಳುವುದು ಪೂರ್ತಿ ಅಸತ್ಯವಾಗುತ್ತದೆ.

ದೈವಗ್ರಂಥದಲ್ಲಿ ದೇವರು ಎರಡು ವಿಧಗಳಾಗಿ ಇದ್ದಾನೆಂದು ಹೇಳಲಾಗಿದೆ. ಹಾಗೆಯೇ ಧರ್ಮಗಳಿರುವ ದೇವರು, ಧರ್ಮಗಳು ಇಲ್ಲದ ದೇವರು ಎಂದು ಎರಡು ವಿಧಗಳಲ್ಲಿ ದೇವರು ಇದ್ದಾನೆಂದು ಮೂರು ದೈವಗ್ರಂಥಗಳಲ್ಲಿ ಬರೆಯಲಾಗಿದೆ. ಹಾಗೆಯೇ ಕಾರ್ಯಗಳು ಮಾಡುತ್ತಾ ಕಾರ್ಯಕರ್ತನಾಗಿ ಇದ್ದ ದೇವರು, ಯಾವ ಕಾರ್ಯ ಮಾಡದೇ ಕೆಲವು ಸಂದರ್ಭಗಳಲ್ಲಿ ಮಾತ್ರ **'ಆಗಿಹೋಗಲಿ'** ಎಂದು ಸಂಕಲ್ಪ ಮಾಡಿದಾಗ ಕೆಲವು ಕೆಲಸಗಳು ನಡೆಯುತ್ತವೆಂದು ದೇವರು ಕ್ರಿಯಾಶೀಲನು, ಕ್ರಿಯಾ ರಹಿತನೆಂದು ಎರಡು ವಿಧಗಳಲ್ಲಿ ಹೇಳಲಾಗಿದೆ. ಆದರೇ ದೇವರು ಒಬ್ಬನೇ ಎನ್ನುವ ಮಾತು ಮಾತ್ರ ಕೆಲವರು ಹೇಳುತ್ತಿದ್ದಾರೆ ಹೊರತು ದೇವರು ಇಬ್ಬರೆಂದು ಯಾವಮಾತ್ರ ಯಾರಿಗೂ ತಿಳಿದಿಲ್ಲ. ನಮಗೆ ಜ್ಞಾನ ತಿಳಿದಿದೆ ಎನ್ನುವವನು ದೇವರು ಒಬ್ಬನೇ ಎಂದು ಅನ್ನುತ್ತಿದ್ದಾನೆ. ಹಾಗೆಯೇ ನಾವು ಒಂದೇ ದೇವರನ್ನು ಆರಾಧಿಸುತ್ತಿದ್ದೇ

ವೆಂದು ಹೇಳುವವರು ಸಹ ಎರಡನೆ ದೇವರು ಇದ್ದಾನೆಂದು ತಿಳಿಯದಂತಿದ್ದಾರೆ. ಜ್ಞಾನ ತಿಳಿಯದವರಿಗೆ ಒಬ್ಬರು ಇಬ್ಬರು ಎನ್ನುವ ಲೆಕ್ಕ ಇಲ್ಲ ಅವರಿಗೆ ಎಷ್ಟಾದರೂ ಇರಬಹುದು. ದೇವರು ಆಗದಿರುವವರನ್ನೆಲ್ಲಾ ದೇವರೆಂದು ತಿಳಿಯುತ್ತಿರುವರು. ಕೊನೆಗೆ ದೆವ್ವಗಳನ್ನು ಸಹ ದೇವರೆಂದು ಪೂಜಿಸುವವರು ಸಹ ಇದ್ದಾರೆ. ಹಿಂದೂಗಳಲ್ಲಿ ಬಹು ದೇವತಾರಾಧನೆ ಇದೆ. ಮುಸ್ಲಿಮ್‌ರಲ್ಲಿ ಏಕೇಶ್ವರೋಪಾಸನೆ ಇದೆ. ಕ್ರೈಸ್ತರಲ್ಲಿ ಸಹ ಒಂದೇ ದೇವರ ನಿನಾದವೇ ಇದೆ ಹೊರತು ಪ್ರಪಂಚದಲ್ಲಿ ಯಾವ ಮತಸ್ಥರಾಗಲೀ, ಎಷ್ಟು ಜ್ಞಾನಿಗಳಾಗಲೀ ದೇವರು ಎರಡು ವಿಧಗಳಲ್ಲಿ ಇದ್ದಾನೆಂದು, ಆದರೇ ನಾವು ಆರಾಧಿಸಬೇಕಾಗಿರುವುದು ಒಬ್ಬ ದೇವರನ್ನೇ ಎಂದು ಹೇಳಲಾರದೆ ಹೋಗುತ್ತಿದ್ದಾರೆ.

ಇದಕ್ಕೂ ಮೊದಲು ದೇವರು ಧರ್ಮಗಳು ಇರುವವನು, ಧರ್ಮಗಳು ಇಲ್ಲದವನೆಂದು ಹೇಳಿಕೊಂಡಿದ್ದೇವೆ. ಧರ್ಮಗಳು ಇರುವವನಿಗೆ ಸಂಬಂಧಿಸಿದ ಶ್ಲೋಕವನ್ನು ಮೋಕ್ಷ ಸನ್ನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ ಹೇಳಿ ಕೊಂಡಿದ್ದೇವೆ. ಹಾಗೆಯೇ ದೇವರು ಧರ್ಮಗಳು ಇಲ್ಲದವನೆಂದು ಹೇಳುವುದಕ್ಕೆ ಮೋಕ್ಷ ಸನ್ನ್ಯಾಸ ಯೋಗದಲ್ಲಿಯೇ 66ನೇ ಶ್ಲೋಕವನ್ನು ಹೇಳಿಕೊಂಡಿದ್ದೇವೆ. ಈಗ ನಾವು ಹೇಳಿದರೇ ಹೊಸದಾಗಿ ದೇವರು ಧರ್ಮಯುಕ್ತನು, ಧರ್ಮರಹಿತನು ಎಂದು ತಿಳಿಯುತ್ತಿದೆ. ಹಾಗೆ ನಾವು ಹೇಳಿದರೆ ದೇವರು ಕ್ರಿಯಾ ಶೀಲನು, ಕ್ರಿಯಾ ರಹಿತನು ಎಂದು ತಿಳಿಯುತ್ತಿದೆ. ದೇವರು ಕ್ರಿಯಾ ರಹಿತನು ಎಂದು ತಿಳಿಯುವುದಕ್ಕೆ ಖುರಾನ್ ಗ್ರಂಥದಲ್ಲಿ 2ನೇ ಸೂರಾ 117ನೇ ಆಯತ್‌ನಲ್ಲಿ" ಹೀಗೆ ಹೇಳಲಾಗಿದೆ ನೋಡಿರಿ.

**(2–117) "ಭೂಮಿ ಆಕಾಶವನ್ನು ಪ್ರಪ್ರಥಮವಾಗಿ ಸೃಷ್ಠಿಸಿದವನು ದೇವರೇ. ಆತನು ಯಾವ ಕೆಲಸವನ್ನಾದರೂ ಮಾಡಬೇಕೆಂದುಕೊಂಡಾಗ ಅದನ್ನು ಮುಗಿದುಹೋಗಲಿ ಎಂದರೆ ಮುಗಿದುಹೋಗುತ್ತದೆ."**

ಈ ವಾಕ್ಯದಲ್ಲಿ ದೇವರು ಕೆಲಸವನ್ನು ಮಾಡುವವನಲ್ಲ. ಏನಾದರೂ ಅಗತ್ಯಬಂದರೆ ಅದನ್ನು ಮಾಡಬೇಕೆಂದುಕೊಂಡಾಗ **"ತಯಾರಾಗಲಿ"** ಎಂದರೇ ಅದೇ ನಡೆದುಹೋಗುತ್ತದೆ. ಇದನ್ನನುಸರಿಸಿ **"ಒಬ್ಬ ದೇವರು ಕೆಲಸವನ್ನು ಮಾಡುವುದಿಲ್ಲ"** ಎಂದು ತಿಳಿದುಹೋಗುತ್ತಿದೆ. ಸೃಷ್ಠಿಯನ್ನು ಮೊದಲು ಸೃಷ್ಠಿಸಿದ ಪರಮಾತ್ಮ ಎನ್ನುವ ದೇವರು ಕೆಲಸ ಮಾಡುವವನಲ್ಲವೆಂದು, ಕ್ರಿಯಾರಹಿತನೆಂದು ಹೇಳಿಕೊಂಡಿದ್ದೇವೆ. ಯಾವ ಸಂದರ್ಭದಲ್ಲಿ ಆದರೂ ಆತನು ಯಾವ ಕಾರ್ಯವನ್ನಾದರೂ ಮಾಡಬೇಕಾಗಿ ಬಂದರೆ ಆತನು ಪ್ರತ್ಯಕ್ಷವಾಗಿ ಕೆಲಸ ಮಾಡದೆ, ಪರೋಕ್ಷವಾಗಿ ಮಾಡುವವನಾಗಿ ಅದನ್ನು "ತಯಾರಾಗಲಿ" ಎಂದು ಸಂಕಲ್ಪಿಸಿಕೊಂಡರೆ ಅದು ನಡೆದುಹೋಗುತ್ತದೆ. ಪರಮಾತ್ಮನಾದ ದೇವರು ಸಂಕಲ್ಪಗಳಿಂದಲೇ ಮಾಡುತ್ತಾನೆ ಆದರೆ ಪ್ರತ್ಯಕ್ಷವಾಗಿ ಮಾಡುವವನಲ್ಲವೆಂದು ತಿಳಿದುಹೋಗಿದೆ. ಮತ್ತೊಬ್ಬ ದೇವರು ಶರೀರದಲ್ಲಿ ಒಂದು ಸೆಕೆಂಡು ಕೂಡಾ ಸುಮ್ಮನಿರದೆ ಕೆಲಸವನ್ನು ಪ್ರತ್ಯಕ್ಷವಾಗಿ ಮಾಡುತ್ತಿದ್ದಾನೆ. ಆ ವಿಷಯವನ್ನು ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸೂರಾ 32 ಆಯತ್ 4ರಲ್ಲಿ ನೋಡಿರಿ.

**(32–4) "ಅಲ್ಲಾಹ್‌ನೇ (ದೇವರೆ) ಆಕಾಶಗಳನ್ನು, ಭೂಮಿಯನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಠಿಸಿದ್ದಾನೆ. ನಂತರ ಸಿಂಹಾಸನವನ್ನು (ಅರ್ಷ್‌ನ್ನು) ಅಧಿಷ್ಠಿಸಿದ್ದಾನೆ. ಆತನು ಹೊರತು ನಿಮಗೆ ಯಾವ ಸಹಾಯಕನು, ಮತ್ತು ಯಾವ ಸಿಫಾರಸು ಮಾಡುವ ವನಿಲ್ಲ. ಆದರೂ ನೀವು ಹಿತಬೋಧನೆಯನ್ನು ಗ್ರಹಿಸುವುದಿಲ್ಲವೇನು?"**

ಅದೇ ಗ್ರಂಥದಲ್ಲಿ ಸೂರಾ 2, ಆಯತ್ 255ರಲ್ಲಿ ಎಲ್ಲವೇಳೆಯಲ್ಲಿ ಕೆಲಸವನ್ನು ಮಾಡುತ್ತಿದ್ದಾನೆಂದು ಆದರೂ ಆತನಿಗೆ ದಣಿವು ಇಲ್ಲವೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಶರೀರ ಒಟ್ಟಾರೆ ಆತನ ಅಧೀನದಲ್ಲಿ ಇದೆಯೆಂದು ಕೂಡಾ ಹೇಳಿದ್ದಾರೆ ನೋಡಿರಿ.

**(2–255) “ಅಲ್ಲಾಹ್ ಮಾತ್ರವೇ ನಿಜಕ್ಕೆ ಆರಾಧ್ಯದೈವ. ಆತನು ಹೊರತು ಮತ್ತೊಬ್ಬ ಆರಾಧ್ಯನು ಇಲ್ಲವೇಯಿಲ್ಲ. ಆತನು ಸಜೀವನು, ಎಲ್ಲದಕ್ಕು ಮೂಲಾಧಾರ. ಆತನಿಗೆ ತೂಗಡಿಕೆಯಾಗಲಿ, ನಿದ್ರೆಯಾಗಲಿ ಬರುವುದಿಲ್ಲ. ಭೂಮಿ ಆಕಾಶಗಳಲ್ಲಿರುವ ಸಮಸ್ತವು ಆತನ ಅಧೀನದಲ್ಲಿದೆ. ಆತನ ಅನುಮತಿಯಿಲ್ಲದೆ ಆತನ ಸಮಕ್ಷಮದಲ್ಲಿ ಸಿಫಾರಸು ಮಾಡುವವನ್ಯಾರು? ಅವರಿಗೆ ಮುಂದಿರುವುದನ್ನು ಹಿಂದಿರುವುದನ್ನು ಆತನಿಗೆ ತಿಳಿದಿದೆ. ಆತನು ಕೋರಿರುವುದು ಹೊರತು ಆತನಿಗಿರುವುದು ಜ್ಞಾನದಲ್ಲಿನ ಯಾವ ವಿಷಯವು ಅವರ ಗ್ರಾಹ್ಯಪರಿಧಿಯೊಳಗೆ ಬರುವುದಿಲ್ಲ. ಆತನ ಕುರ್ಚಿ ವೈಶಾಲ್ಯ ಭೂಮ್ಯಾಕಾಶಗಳನ್ನು ಸುತ್ತುವರೆದಿದೆ. ಅವುಗಳನ್ನು ರಕ್ಷಿಸುವುದಕ್ಕೆ ಆತನು ಎಂದಿಗೂ ದಣಿಯುವುದಿಲ್ಲ. ಆತನು ಸರ್ವೋನ್ನತನು, ಶ್ರೇಷ್ಠನು.”**

ಈ ಆಯತ್ ಕೆಲಸಮಾಡುವ ದೇವರನ್ನು ಕುರಿತು ಹೇಳಿರುವುದೆಂದು ತಿಳಿಯುತ್ತಿದೆ. ಕೆಲಸವನ್ನು ಮಾಡುವ ದೇವರೇ ಆರಾಧ್ಯ ದೈವ ಎಂದು ಮಾತುಮಾತಿಗು ಹೇಳುವುದಾಗಿದೆ. ಈ ಆಯತ್‌ನಲ್ಲಿ **“ಆತನು ಸಜೀವನು”** ಎನ್ನುವ ಪದ ಬಳಸಲಾಗಿದೆ. ಸಜೀವನು ಎಂದರೆ ಜೀವ ಇರುವವನಾಗಿದ್ದಾ ನೆಂದು ಹೇಳಬಹುದು. ವಾಸ್ತವಕ್ಕೆ ಆತನು ಜೀವಿಗಿಂತ ಬೇರೆಯಾಗಿದ್ದಾನೆ. ಅಷ್ಟೇ ಅಲ್ಲದೆ ಜೀವಿಗಾಗಿ ಜೀವಿಯೊಂದಿಗೆ ಶರೀರದಲ್ಲಿದ್ದಾನೆ. ಆದ್ದರಿಂದ ‘ಜೀವಿಯೊಂದಿಗೆ ಸಹಾ ಇದ್ದಾನೆ’ ಎಂದು ಹೇಳುವುದಕ್ಕೆ **‘ಸಜೀವನು’** ಎನ್ನುವ ಪದವನ್ನು ಬಳಸಿದ್ದಾರೆ. ‘ಸಹವಾಸಿ’ ಎಂದರೆ ಅವನೊಂದಿಗೆ ಇರುವವನು ಎಂದು ಅರ್ಥ. ಹಾಗೆಯೇ ಸಜೀವನು ಎಂದರೆ ಜೀವಿಯೊಂದಿಗೆ ಇರುವ ವನೆಂದು ಗ್ರಹಿಸಿಕೊಳ್ಳಬೇಕು. ಜೀವಿಯೊಂದಿಗೆ ಶರೀರದಲ್ಲಿರುವುದು ಆತ್ಮವೇ. ಜೀವಾತ್ಮ ಎಲ್ಲಿ ಇರುತ್ತಾನೊ ಆತ್ಮ ಅಲ್ಲಿ ಇರುತ್ತದೆ. ಜೀವಿಯನ್ನು ಕರ್ಮ ಪ್ರಕಾರ ನಡೆಸುವವನು ಆತ್ಮವೇ. ಜೀವಿಯು ಶರೀರದಲ್ಲಿ ತಲೆಯಲ್ಲಿ ಒಂದುಕಡೆ ಗುಣಚಕ್ರದಲ್ಲಿರುವಾಗ, ಜೀವಿಯು ಕರ್ಮಗಳನ್ನು ಅನುಭವಿಸುವುದಕ್ಕೆ ಬೇಕಾದ

ಕೆಲಸವನ್ನು ಆತ್ಮ ಮಾಡುತ್ತಾ ಅದರಲ್ಲಿ ಬಂದಿರುವ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಶರೀರದಲ್ಲಿ ಆತ್ಮ ಎಲ್ಲಾಕಡೆ ವ್ಯಾಪಿಸಿದೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮ ಶರೀರದಲ್ಲಿನ ಪ್ರತಿ ಭಾಗವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿದೆ. ಆತ್ಮ ಅನುಮತಿ ಇಲ್ಲದೇ ಯಾವ ಶರೀರ ಭಾಗವು ಕೆಲಸ ಮಾಡುವುದಿಲ್ಲ. ಆತ್ಮ ಜೀವಾತ್ಮ ಇರುವ ಪ್ರತಿ ಶರೀರದಲ್ಲಿಯೂ ಜೀವಿಯೊಂದಿಗೆ ಜೀವಿಗೆ ಜೋಡಿ ಆತ್ಮವಾಗಿ, ಸ್ನೇಹಿತನಾಗಿ, ಪಕ್ಕದಲ್ಲೇ ಇರುವವನಾಗಿ ಇದೆ ಆದ್ದರಿಂದ ಮೊದಲು ಜೀವಾತ್ಮ ಇರುವ ಜನ್ಮವನ್ನು ತಿಳಿದಿದೆ. ಹಾಗೇ ಮುಂಬರುವಂತಹ ಜನ್ಮವನ್ನು ಕೂಡಾ ತಿಳಿದಿದೆ. ಜೀವಿಗಿರುವ ಕರ್ಮ ಆತ್ಮಗೆ ತಲೆಯಲ್ಲಿನ ಕರ್ಮಚಕ್ರದಲ್ಲಿ ಕಾಣಿಸುತ್ತಿದೆ. ಆದ್ದರಿಂದ ಬರುವಂತಹ ಜನ್ಮ ಕೂಡಾ ತಿಳಿಯುತ್ತಿದೆ. ಆದ್ದರಿಂದ ವಾಕ್ಯದಲ್ಲಿ "ಮುಂದಿರುವುದನ್ನು, ಹಿಂದಿರುವುದನ್ನು ಕೂಡಾ ಆತನಿಗೆ ತಿಳಿದಿದೆಯೆಂದು" ಹೇಳಿದ್ದಾರೆ. ದೇವರಾದ ಆತ್ಮವೇ ಶರೀರದಲ್ಲಿನ ಬುದ್ಧಿಗೆ ಬಲವನ್ನು ಕೊಟ್ಟು ಯಾವ ವಿಷಯವನ್ನಾದರೂ ಗ್ರಹಿಸುವಂತೆ ಮಾಡುತ್ತಿದ್ದಾನೆ. ಆದ್ದರಿಂದ ಆತ್ಮ ಅಂದುಕೊಂಡರೇನೇ ಏನಾದರೂ ಅರ್ಥವಾಗುತ್ತದೆ. ಆತ್ಮ ಅಂದುಕೊಳ್ಳದೆಹೋದರೆ **'ಯಾವ'** ಚಿಕ್ಕ ವಿಷಯವೂ ಸಹ ಅರ್ಥವಾಗುವುದಿಲ್ಲ. ಆದ್ದರಿಂದ ವಾಕ್ಯದಲ್ಲಿ "ಆತನ ಜ್ಞಾನದಲ್ಲಿ ಆತನು ಕೋರಿರುವುದು ಹೊರತು ಯಾವುದು ಗ್ರಾಹ್ಯಪರಧಿಯೊಳಗೆ ಬರುವುದಿಲ್ಲ." ಎಂದಿದ್ದಾರೆ. ಆತನು ಎಂದರೇ ಆತ್ಮನಿವಾಸವು ಶರೀರದಲ್ಲಿ ಪಾದಗಳಿಂದ ತಲೆವರೆಗು ಎಲ್ಲಾ ವ್ಯಾಪಿಸಿದೆ. ಆತನು ಶರೀರದಲ್ಲಿ ಎಲ್ಲಾಕಡೆ ವ್ಯಾಪಿಸಿದ್ದಾನೆ ಆದ್ದರಿಂದ "ಆತನ ಕುರ್ಚಿ ಭೂಮಿ ಆಕಾಶಗಳನ್ನು ಸುತ್ತುವರೆದಿದೆಯೆಂದು" ಹೇಳಿದ್ದಾರೆ. ಇಲ್ಲಿ ಭೂಮಿ ಎಂದರೆ ಪಾದಗಳೆಂದು. ಆಕಾಶ ಎಂದರೆ ತಲೆಯೆಂದು ಅರ್ಥಮಾಡಿಕೊಳ್ಳಬೇಕು. ಪಾದಗಳಿಂದ ತಲೆವರೆಗು ಆತ್ಮ ವ್ಯಾಪಿಸಿರುವುದರಿಂದ ಭೂಮಿ ಆಕಾಶಗಳನ್ನು ಸುತ್ತುವರೆದಿದೆಯೆಂದು ಹೇಳುವುದಾಗಿದೆ. ಶರೀರದಲ್ಲಿ ಎಲ್ಲಾಕಡೆ ವ್ಯಾಪಿಸಿರುವ ಆತ್ಮ, ಹುಟ್ಟಿದಾಗಿನಿಂದ ಸಾಯುವವರೆಗು ಒಂದುಕ್ಷಣಕಾಲ ಸಹ ಸುಮ್ಮನಿರದೆ. ಶ್ವಾಸವನ್ನು, ಗುಂಡಿಗೆಯನ್ನು ಆಡಿಸುತ್ತಿದ್ದಾನೆ. ಹಾಗೇ ಆಗಾಗ ಎಚ್ಚರದಲ್ಲಿ ಹೊರಗಿನ ಕಾರ್ಯಗಳನ್ನು ಕರ್ಮೇಂದ್ರಿಯಗಳಿಂದ

ಮಾಡಿಸುತ್ತಿದ್ದಾನೆ. ಶ್ವಾಸ ಆಡಿಸಿ ಶರೀರವನ್ನು ರಕ್ಷಿಸುವುದರಲ್ಲಿಯೂ ಹೊರಗಿನ ಕೆಲಸಗಳು ಮಾಡಿಸುತ್ತಾ ಜೀವನೋಪಾದಿ ಕಲ್ಪಿಸುವುದರಲ್ಲಿಯೂ ಆತ್ಮ ಎಲ್ಲಾವೇಳೆಯಲ್ಲಿಯು ಕಾರ್ಯಕರ್ತನಾಗಿ ಇರುವುದಲ್ಲದೆ ಆತನು ಎಂದಿಗೂ ಧಣಿಯಲಿಲ್ಲ. ಅದೇ ವಿಷಯವನ್ನೇ ವಾಕ್ಯದಲ್ಲಿ "ಆತನು ಎಂದಿಗೂ ಧಣಿಯುವುದಿಲ್ಲ" ಎಂದು ಹೇಳಿದ್ದಾರೆ. ಶರೀರದಲ್ಲಿರುವ ಸಮಸ್ತ ಅವಯವ ಗಳಿಗಿಂತ ಮತ್ತು ಜೀವಾತ್ಮಗಿಂತ ದೊಡ್ಡವನಾದ್ದರಿಂದ ವಾಕ್ಯದ ಕೊನೆಯಲ್ಲಿ "ಆತನು ಮಹೋನ್ನತನು, ದೊಡ್ಡವನು" ಎಂದು ಹೇಳಿದ್ದಾರೆ.

ಈ ವಿಧವಾಗಿ ಕೆಲಸವನ್ನು ಮಾಡುವ ದೇವರನ್ನು ಕುರಿತು ಹೇಳಿದ್ದಾರೆ. ಕೆಲಸವನ್ನು ಮಾಡದ ದೇವರು ಸಾಕ್ಷಿಯಾಗಿದ್ದಾನೆಂದು ಮೊದಲೇ ಹೇಳಿಕೊಂಡಿದ್ದೇವೆ. ಧರ್ಮಗಳಿರುವ ದೇವರನ್ನು, ಧರ್ಮಗಳಿಲ್ಲದ ದೇವರಿಗೆ ಸಂಬಂಧಿಸಿದ ಭಗವದ್ಗೀತೆ ಶ್ಲೋಕಗಳನ್ನು ಮೋಕ್ಷ ಸನ್ಯಾಸ ಯೋಗದಲ್ಲಿನ 17,66 ಶ್ಲೋಕಗಳಲ್ಲಿ ಹೇಳಿದ್ದೇವೆ, ಈಗ ಕೆಲಸ ಮಾಡದ ದೇವರನ್ನು ಖುರ್‌ಆನ್ ಗ್ರಂಥದಲ್ಲಿ (2–117) ಆಯತ್‌ನಲ್ಲಿರುವಂತೆ ಹೇಳಿದ್ದೇವೆ. ಕೆಲಸ ಮಾಡುವ ದೇವರನ್ನು (32–4) ರಲ್ಲಿಯು, (2–255) ರಲ್ಲಿಯು ಇರುವಂತೆ ಹೇಳಿದ್ದೇವೆ. ಹಾಗೇ ಸೃಷ್ಟಿಸಲ್ಪಡದ ದೇವರು ಸೃಷ್ಟಿಸಿದ ದೇವರು ಇಬ್ಬರಿರುವ ಸಮಾಚಾರವನ್ನು ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆ 5ನೇ ಅಧ್ಯಾಯದಲ್ಲಿ 21ನೇ ವಾಕ್ಯದಿಂದ 26ನೇ ವಾಕ್ಯದವರೆಗು ಇರುವುದನ್ನು ವಿವರವಾಗಿ ಹೇಳಿದ್ದೇವೆ. ಈ ವಿಧವಾಗಿ ಮೂರು ದೈವಗ್ರಂಥಗಳಲ್ಲಿನ ನಿರೂಪಣೆಗಳನ್ನು ಸಾಕ್ಷ್ಯವಾಗಿ ತೋರಿಸಿದ್ದೇವೆ. ನಾವು ತೋರಿಸಿದರೂ, ತೋರಿಸದಿದ್ದರೂ ಮೂರು ದೈವಗ್ರಂಥಗಳಲ್ಲಿಯು ಇಬ್ಬರು ದೇವರುಗಳನ್ನು ಕುರಿತು ಹೇಳಿದ ವಿಷಯ ಎಲ್ಲರ ಬಳಿ ಅವರವರ ಮತಗ್ರಂಥಗಳಾಗಿ ಹೇಳಿಕೊಳ್ಳುತ್ತಿರುವ ಗ್ರಂಥಗಳಲ್ಲಿದೆ. ನಾವು ಪ್ರತ್ಯೇಕ, ನಮ್ಮ ಗ್ರಂಥ ಪ್ರತ್ಯೇಕ. ನಮಗಿಂತ ನಿಜವಾದ ಜ್ಞಾನಿಗಳು, ಭಕ್ತರು ಇಲ್ಲ ಎನ್ನುವವರು ಅವರ ಗ್ರಂಥಗಳಲ್ಲಿರುವ ಸತ್ಯವನ್ನು ಏಕೆ ತಿಳಿಯಲಾರದೆ ಹೋಗಿದ್ದಾರೆ? ಎಂದು ಕೇಳಿದರೆ ಸಮಾಧಾನ ಹೇಳಲಾರದ ಸ್ಥಿತಿಯಲ್ಲಿದ್ದಾರೆ.

**ಪ್ರಶ್ನ :– ಈದಿನ ಭೂಮಿಮೇಲೆ ಎಷ್ಟೋಜನ ಜ್ಞಾನಿಗಳು, ಜ್ಞಾನ ಸಂಪನ್ನರಾದ ಸ್ವಾಮೀಜಿಗಳು, ಯೋಗಿಗಳು, ಮಹರ್ಷಿಗಳಾದ ದೊಡ್ಡವರಿದ್ದಾರೆ. ನೀವು ಹೇಳುವ ಇಬ್ಬರು ದೇವರುಗಳ ವಿಷಯ ಯಾರೂ ಹೇಳಲಿಲ್ಲ, ಯಾರಿಗೂ ತಿಯಲಿಲ್ಲ. ಮುಸ್ಲಿಮ್‌ರು ಕೆಲವರು ಅಲ್ಲಾಹ್ ಮೇಲಿನ ಭಕ್ತಿಯಿಂದ ಐದು ಹೊತ್ತು ನಮಾಜ್ ಮಾಡುತ್ತಿದ್ದಾರೆ. ಎಷ್ಟೋ ನಿಯಮಗಳು ಪಾಟಿಸುತ್ತಿದ್ದಾರೆ. ದೇವರು ಎಂದರೆ ಎಷ್ಟೋ ಭಯದಿಂದ ನಿಜವಾದ ಭಕ್ತಿಹೊಂದಿ ಅಲ್ಲಾಹ್‌ನನ್ನು ವಿಶ್ವಾಸಿಸಿದ್ದಾರೆ. ಅಂತಹವರಿಗೆ ದೇವರ ಸನ್ನಿಧಾನ ಸಿಗುತ್ತದೆ. ಅವರಿಗೆ ದೇವರು ಮುಕ್ತಿಯನ್ನು ಉಂಟುಮಾಡುತ್ತಾನೆ. ಮನುಷ್ಯರಿಗೆ ದೇವರ ಮೇಲೆ ಎಷ್ಟು ಶ್ರದ್ಧೆಯಿದೆಯೋ ದೇವರಿಗು ಕೂಡಾ ಮನುಷ್ಯರ ಮೇಲೆ ಅಷ್ಟೇ ಶ್ರದ್ಧೆ ಇರುತ್ತದೆ. ಸಕ್ರಮವಾದ ಭಕ್ತಿ, ಸಕ್ರಮವಾದ ನಮಾಜ್ ಮಾಡುವವರಿಗೆ ಮುಕ್ತಿ ಲಭಿಸುತ್ತದೆ. ಪರಲೋಕ ಪ್ರಾಪ್ತಿ (ಮುಕ್ತಿ)ಗಾಗಿಯೇ ಅಲ್ಲವೆ! ಮಾನವನು ದೇವರ ಮಾರ್ಗದಲ್ಲಿ ಪ್ರಯಾಣಿಸುತ್ತಿರುವುದು. ದೇವರ ಮಾರ್ಗದಲ್ಲಿ ಪಯಣಿಸುವವನಿಗೆ ತಪ್ಪದೆ ಮುಕ್ತಿ ಲಭಿಸುತ್ತದೆಂದು ಅಂದುಕೊಳ್ಳುತ್ತಿದ್ದಾರೆ. ನೀವು ಹೇಳಿದ ಇಬ್ಬರು ದೇವರ ವಿಷಯ ತಿಳಿಯದೆ ಹೋದರೂ ನಷ್ಟ ಏನು ಇಲ್ಲ ಅಲ್ಲವೆ! ದೇವರು "ನನ್ನನ್ನೇ ನಮಸ್ಕರಿಸು, ನನ್ನನ್ನೇ ಸೇರುತ್ತೀಯಾ, ಯಾವುದೇ ಸಂಶಯವಿಲ್ಲ" ಎಂದು ಹೇಳಿದ ಮಾತು ವ್ಯರ್ಥವಾಗುತ್ತದಾ? ಮುಸ್ಲಿಮ್‌ರು ದೇವರು (ಅಲ್ಲಾಹ್) ಹೇಳಿದ ಮಾತಿನ ಪ್ರಕಾರವೇ ಆಚರಿಸುತ್ತಾ ದೇವರ ಮಾರ್ಗದಲ್ಲಿ ಪ್ರಯಾಣಿಸುತ್ತಿದ್ದಾರೆ ಅಲ್ಲವೆ! ಅವರು ದೇವರು ಒಬ್ಬನೇ ಎನ್ನುವ ವಿಶ್ವಾಸದಿಂದ ಇದ್ದಾರೆ. ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಗ್ರಂಥದಲ್ಲಿ ಒಬ್ಬ ದೇವರೇ ಆರಾಧ್ಯ ದೈವವಾಗಿ ಇರಬೇಕೆಂದು, ಎರಡನೆಯವನನ್ನು ಯಾರನ್ನು ಆರಾಧಿಸಬಾರದೆಂದು ಹೇಳಿದ್ದಾರೆ. ಅದರ ಪ್ರಕಾರ ಇರುವುದು ಒಳ್ಳೆಯದೇ ಆದರೇ ಮೋಕ್ಷಕ್ಕೆ ಅಧಿಕಾರಿ ಯಾರು? ಎನ್ನುವ ವಿಷಯ ತಿಳಿದಿದೆಯಾ ಎಂದು ಕೇಳುತ್ತಿದ್ದೇನೆ. ಇಲ್ಲಿ ವಿಷಯ ಅರ್ಥವಾಗುವುದಕ್ಕೆ ಒಂದು ಚಿಕ್ಕ ಉಪಮಾನವನ್ನು ಹೇಳಿಕೊಳ್ಳೋಣ. ಒಂದು ದೊಡ್ಡ ಭವನದಲ್ಲಿ ನಾನು ಇಲ್ಲವೆ ನೀನು ನಿವಾಸಿಸುತ್ತಿದ್ದೇವೆಂದುಕೊಳ್ಳಿ. ಆ

ಭವನಕ್ಕೆ ಅಧಿಪತಿ o (ಒ) ಎನ್ನುವವನು ಎಂದುಕೊಳ್ಳೋಣ. ಆತನು ಭವನದ ಜವಾಬ್ದಾರಿಗಳೆಲ್ಲ c (ಸಿ) ಎನ್ನುವವನಿಗೆ ಒಪ್ಪಿಸಿ ಪಕ್ಕದ ದೇಶಕ್ಕೆ ಹೋಗಿದ್ದಾನೆ. o ನಲ್ಲಿ c ಎನ್ನುವವನು ಅರ್ಧವೇ ಇದ್ದಾನೆಂದು ನೋಡಿದರೆ ತಿಳಿಯುತ್ತಿದೆ. o ಮನೆಗೆ ಯಜಮಾನ ಆದರೆ c ಎನ್ನುವವನು ಮನೆಯ ಜವಾಬ್ದಾರಿಯೆಲ್ಲ ನೋಡುವವನು. ಆ ಮನೆಯನ್ನು ಶುಚಿ ಮಾಡುವ ಕೆಲಸದವನಾಗಿ ಕೂಡಾ c ಎನ್ನುವವನೇ ಇದ್ದಾನೆ. ಮನೆಗೆ ತಾತ್ಕಾಲಿಕ ಯಜಮಾನನಾಗಿ ಇರುತ್ತಾ ಇತರರಿಗೆ ಮನೆಯನ್ನು ಬಾಡಿಗೆಗೆ ಕೊಡುವುದಲ್ಲದೆ ಅದೇ ಮನೆಯಲ್ಲಿ ಕೆಲಸದವನಾಗಿ ಇರುತ್ತಾ ಮನೆಯಲ್ಲಿನ ಕೆಲಸಗಳೆಲ್ಲ c ಎನ್ನುವ ವ್ಯಕ್ತಿ ಜವಾಬ್ದಾರಿಯಾಗಿ ಮಾಡಿಕೊಳ್ಳುವುದು ನಡೆಯುತ್ತಿತ್ತು. ಮನೆಯಲ್ಲಿ ಬಾಡಿಗೆಗೆ ಸಿ ನಲ್ಲಿ ಅರ್ಧವೇ ಇದ್ದರೂ i (ಐ) ಗೆ ಮಾತ್ರವೇ ಕೊಡುತ್ತಿದ್ದನು. ಮನೆಯನ್ನು ಬಾಡಿಗೆಗೆ ಕೊಟ್ಟವನು ಆಗ ಯಜಮಾನ ಮತ್ತು ಕೆಲಸದವನಾಗಿದ್ದು, i ಎನ್ನುವವನು ಬಾಡಿಗೆಗೆ ಇದ್ದು ತನ್ನದೇ ಮನೆ ಎನ್ನುವಂತೆ ಪ್ರವರ್ತಿಸುತ್ತಿದ್ದನು. ಅದೆಲ್ಲವೂ ಮನೆಯಲ್ಲಿಯೇ ಕೆಲಸಮಾಡುತ್ತಿರುವ c ನೋಡುತ್ತಿದ್ದರೂ, i ಎನ್ನುವವನು ಏನೆಂದುಕೊಂಡರೆ ನಮಗೇನು, ಅವನು ಅನ್ಯಾಯವಾಗಿ ಅಂದುಕೊಂಡರೂ, ಮಾತನಾಡಿದರೂ ಅವನಿಗೇ ಪಾಪ ಬರುತ್ತದೆ ಎಂದು ಅಂದುಕೊಂಡಿದ್ದಾನೆ. ಅಷ್ಟೇ ಅಲ್ಲದೆ ನಾನು ಮನೆಯಲ್ಲಿಯೇ ಇದ್ದೇನೆ ಅಲ್ಲವೆ! ನನ್ನ ಇಷ್ಟಬಂದಾಗ ಅವನನ್ನು ನಾನು ಮನೆಬಿಟ್ಟು ಹೊರಗೆ ಹೋಗೆನ್ನಬಲ್ಲೆನೆಂದು ಅಂದುಕೊಂಡಿದ್ದಾನೆ. o (ಒ) ಮನೆಗೆ ಶಾಶ್ವತ ಯಜಮಾನನಾಗಿದ್ದು, o (ಒ) ನಲ್ಲಿ ಅರ್ಧವಾಗಿ ಇರುವ c (ಸಿ) ತಾತ್ಕಾಲಿಕ ಯಜಮಾನನಾಗಿದ್ದಾನೆ. ಮನೆಯಲ್ಲಿ ಬಾಡಿಗೆಗೆ ಇರುವವನು c (ಸಿ)ನಲ್ಲಿ ಅರ್ಧವಾಗಿದ್ದರೂ i (ಐ) ಎನ್ನುವವನು.

ಶಾಶ್ವತ ಯಜಮಾನನಾದ o ನೊಂದಿಗೆ ತಾತ್ಕಾಲಿಕ ಯಜಮಾನ ಆಗಾಗ ಫೋನ್‌ನಲ್ಲಿ ಮಾತನಾಡುತ್ತಾ ತಾನು ಮನೆಯಲ್ಲಿಯೇ ಎಲ್ಲಾ ಕೆಲಸಗಳು ಮಾಡುತ್ತಿದ್ದೇನೆ. ಮನೆಯಲ್ಲಿ ಬಾಡಿಗೆಗಿರುವವನು ತನ್ನದೇ ಮನೆಯೆನ್ನುವಂತೆ, ತಾನೇ ನಿಜವಾದ ಯಜಮಾನ ಎನ್ನುವ ಭಾವನೆಯಿಂದ ಇದ್ದಾನೆಂದು

ಹೇಳುತ್ತಿದ್ದನು. o ಗೆ (ಸಿ) ಹೇಳಿದರೂ, ಹೇಳದಿದ್ದರೂ i (ಐ) ಎನ್ನುವವನು c (ಸಿ) ಎನ್ನುವವನು ಇಬ್ಬರೂ ಮನೆಯಲ್ಲಿ ಹೇಗಿರುವುದು o ಎನ್ನುವ ಯಜಮಾನನಿಗೆ ಆಗಿಂದಾಗ್ಗೆ ತಿಳಿದುಹೋಗುತ್ತಿತ್ತು. ಮನೆಗೆ ಶಾಶ್ವತ ಯಜಮಾನನಾದ o ತನ್ನ ಮನೆಯೊಂದಿಗೆ ಸಂಬಂಧವಿಲ್ಲದೆ ದೂರವಾಗಿದ್ದರೂ, ತನ್ನ ಮನೆ ಸಮಾಚಾರ ತಿಳಿಯುವಂತೆ ಮನೆಯೆಲ್ಲವೂ ಸಿಸಿ ಕೆಮೆರಾಗಳು, ಆಡಿಯೊ ಸೌಂಡ್‌ನಿಂದ ಸಹ ತಿಳಿಯುವಂತೆ ಅಳವಡಿಸಿಟ್ಟುಕೊಳ್ಳುವುದರಿಂದ ತನ್ನ ಮನೆ ಸಮಾಚಾರ ಪ್ರತಿ ಕ್ಷಣ ತಿಳಿದುಹೋಗುತ್ತಿತ್ತು. ತಿಳಿಯದ ವಿಚಾರಗಳು ತಾನು ಮನೆ ಯಜಮಾನನಾಗಿ ನೇಮಿಸಿಟ್ಟಿರುವ c (ಸಿ) ಎನ್ನುವಾತನು ಹೇಳುತ್ತಿದ್ದನು. ಹೀಗೆ ಪೂರ್ತಿಯಜಮಾನನಾದ o ತಾತ್ಕಾಲಿಕ ಯಜಮಾನನಾದ c (ಸಿ) ನೊಂದಿಗೆ ಸಂಬಂಧ ಇಟ್ಟುಕೊಂಡಿರುವಾಗ i (ಐ) ಎನ್ನುವವನು ಮನೆಯಲ್ಲಿ ಬಾಡಿಗೆಗೆ ಇದ್ದಾನೆ. ತನ್ನದಲ್ಲದ ಮನೆಯನ್ನು ತನ್ನದು ಎನ್ನುವಂತೆ ಬಾಡಿಗೆಗಿರುವ i (ಐ) ಎಂದುಕೊಳ್ಳುವವನು.

1) ಈ ಕಥೆಯಲ್ಲಿ o ಎನ್ನುವವನು **ಪರಮಾತ್ಮ** ಎಂದು ಗ್ರಹಿಸಿಕೊಳ್ಳಬೇಕು.

2) c (ಸಿ) ಎನ್ನುವವನು ಶರೀರದಲ್ಲಿ ದೇವರಾಗಿ ಮತ್ತು ಕಾರ್ಯಕರ್ತನಾಗಿ ಇರುವ **ಆತ್ಮ**ವೆಂದು ತಿಳಿಯಬೇಕು.

3) i (ಐ) ಎನ್ನುವವನು ಶರೀರದಲ್ಲಿ ಬಾಡಿಗೆಗೆ ನಿವಾಸಿಸುವ **ಜೀವಿಯಾಗಿ** ಅರ್ಥ ಮಾಡಿಕೊಳ್ಳಬೇಕು.

4) ಬಾಡಿಗೆ ಮನೆ **ಶರೀರವಾಗಿ** ತಿಳಿಯಬೇಕು. ಜೀವಿಯು ಬಾಡಿಗೆ ಮನೆಯಾದ ಶರೀರದಲ್ಲಿಯೇ ನಿವಾಸಿಸುತ್ತಿದ್ದಾನೆ.

ಪ್ರಕೃತಿಯಿಂದ ತಯಾರು ಮಾಡಲ್ಪಟ್ಟಿರುವುದು ಮನೆಯಾಗಿದ್ದು, ಶರೀರವೆನ್ನುವ ಮನೆಗೆ ಯಜಮಾನ, ಮನೆ ನಮೂನೆ ಮಾಡಿ ಮನೆಯನ್ನು ನಮೂನೆ ಪ್ರಕಾರ ತಯಾರು ಮಾಡಿದವನು ಆತ್ಮವಾಗಿದ್ದು ಮನೆಗೆ ಬೇಕಾದ

ಸಾಮಾಗ್ರಿ ಕೊಟ್ಟು, ಮನೆ ನಿರ್ಮಾಣಕ್ಕೆ ಪೂರ್ತಿ ಆರ್ಥಿಕ ಸಹಾಯ ನೀಡಿದವನು ಪರಮಾತ್ಮ. ಪರಮಾತ್ಮ ಪ್ರಕೃತಿಯೆನ್ನುವ ಪಂಚಭೂತಗಳನ್ನು ಒದಗಿಸಿದಾಗ ಆತ್ಮಮನೆ ಎನ್ನುವ ಶರೀರವನ್ನು ಕಾರ್ಯಕರ್ತನಾಗಿ ತಯಾರು ಮಾಡಿ, ಪರಮಾತ್ಮಯೆನ್ನುವ ಯಜಮಾನನ ಕೆಳಗೆ ಆತ್ಮಯೆನ್ನುವವನು ಮನೆ ಯಜಮಾನನಾಗಿ ನೇಮಿಸಿಲ್ಪಟ್ಟಿದ್ದಾನೆಂದು ಅರ್ಥವಾಗುತ್ತಿದೆ. ಪರಮಾತ್ಮ ಪ್ರಕೃತಿ ಎನ್ನುವ ಶರೀರಕ್ಕೆ ಪೂರ್ತಿ ಯಜಮಾನನಾದರೂ, ಪರಮಾತ್ಮ ಮನೆ ಎನ್ನುವ ಶರೀರವನ್ನು ಆತ್ಮಗೆ ಒಪ್ಪಿಸಿ ಶರೀರದಲ್ಲಿರುವ ಜೀವಿಗಳಿಗೆ ಆತ್ಮವೇ ದೇವರಾಗಿರು ವಂತೆ ಮಾಡಿದ್ದಾನೆ. ಆತ್ಮವನ್ನು ದೇವರಾಗಿ ಪ್ರಕಟಿಸಿ ದೇವರ ಘನತೆಯನ್ನುಂಟು ಮಾಡಿ ದೇವರಿಗಿರುವ ಅಧಿಕಾರಗಳೆಲ್ಲವೂ ಆತ್ಮಗೆ ಕಲ್ಪಿಸಿದ್ದಾನೆ.

ಭೂಮಿಮೇಲೆ ಹುಟ್ಟಿದ ಮನುಷ್ಯರು ಯಾವ ಮತದಲ್ಲಿದ್ದರೂ ಅವರಿಗೆ ಶರೀರದಲ್ಲಿ ಅಧಿಪತಿಯಾಗಿರುವ ಆತ್ಮವೇ ದೇವರು. ಎಲ್ಲರೂ ಆತನನ್ನೇ ಆರಾಧಿಸಬೇಕೆಂದು ಸ್ವತಃ ಪರಮಾತ್ಮನೇ ತಿಳಿಸಿದ್ದಾನೆ. ಮನುಷ್ಯರೆಲ್ಲರಿಗೂ ಆರಾಧ್ಯದೈವ ಒಬ್ಬನೇಯೆಂದು ಆ ಒಬ್ಬನೇ ಶರೀರದಲ್ಲಿನ ಆತ್ಮಯೆಂದು ತಿಳಿಯಬೇಕು. ಮಾನವರೆಲ್ಲರೂ ಶರೀರದಲ್ಲಿಯೇ ಮರಣಿಸುವವರೆಗು ಇರಬೇಕು. ಆದ್ದರಿಂದ ಯಾವ ಮನುಷ್ಯನಾಗಲಿ ತಾನು ಆರಾಧಿಸಬೇಕಾಗಿರುವುದು, ತಿಳಿಯಬೇಕಾಗಿರುವುದು ಶರೀರದಲ್ಲಿ ಅಧಿಪತಿಯಾಗಿರುವ ದೇವರನ್ನೇಯೆಂದು ತಿಳಿಯಬೇಕು. ಬಹಳಜನ ದೇವರನ್ನು ಆರಾಧಿಸುತ್ತಿದ್ದೇವೆ ಎನ್ನುತ್ತಿದ್ದಾರೆ. ಮುಸ್ಲಿಮ್‌ರಾದರೇ ಒಬ್ಬ ದೇವರನ್ನೇ ಆರಾಧಿಸುತ್ತಿದ್ದಾರೆ, ಒಬ್ಬ ದೇವರನ್ನೇ ವಿಶ್ವಾಸಿಸುತ್ತಿದ್ದಾರೆ. ಆದರೇ ಅವರು ತಮ್ಮ ದೇವರು ಯಾರು? ಎಲ್ಲಿದ್ದಾನೆ? ಹೇಗಿದ್ದಾನೆ? ಎನ್ನುವ ವಿವರವನ್ನು ತಿಳಿಯದೆ ವಿಶ್ವಾಸಿಸುವುದು, ಪ್ರಾರ್ಥಿಸುವುದು ನಡೆಯುತ್ತಿದೆ. ಸೃಷ್ಠಿಕರ್ತನಾದ ಅಲ್ಲಾಹ್‌ನನ್ನು ನಾವು ಆರಾಧಿಸುತ್ತಿದ್ದೇವೆ ಎನ್ನುತ್ತಿದ್ದಾರೆ. ಇಲ್ಲಿ ಮೊದಲು ಪ್ರಪಂಚವನ್ನು ಸೃಷ್ಠಿಸಿದ ದೇವರನ್ನಾ, ಅಥವಾ ಶರೀರಗಳನ್ನು ಸೃಷ್ಠಿಸಿ ಅದರಲ್ಲಿ ತಮ್ಮನ್ನು ನಿಲ್ಲಿಸಿ, ಜೀವನ ಸಾಗುವಂತೆ ಮಾಡುವ ದೇವರನ್ನಾ. ಯಾರನ್ನು ಆರಾಧಿಸುತ್ತಿದ್ದೇವೆಂದು ತಿಳಿದಿಲ್ಲ. ಒಂದುವೇಳೆ

ಈಗ ಸ್ವಲ್ಪ ತಿಳಿದು ಹೇಳಿದರೂ 'ಪ್ರಪಂಚವನ್ನು ಸೃಷ್ಟಿಸಿದ ದೇವರನ್ನು' ಎಂದು ಹೇಳುತ್ತಾರೆ. ಪ್ರಪಂಚವನ್ನು ಸೃಷ್ಟಿಸಿದ ದೇವರು ಮನುಷ್ಯರಿಗಾಗಿ ಪ್ರತ್ಯೇಕವಾದ ದೇವರನ್ನು ತಯಾರುಮಾಡಿ ನೀವು ಈತನನ್ನೇ ಆರಾಧಿಸಿರೆಂದು ಹೇಳಿದ್ದಾನೆನ್ನುವ ವಿಷಯ ಖುರ್‌ಆನ್ ಗ್ರಂಥದಲ್ಲಿದ್ದರೂ ಅದು ಯಾವುದು ತಿಳಿದುಕೊಂಡಿಲ್ಲ.

ಅವರಿಗೆ ಜ್ಞಾನವನ್ನು ಬೋಧಿಸುವ ಹಿರಿಯರು ಕೂಡಾ ದೈವ ಗ್ರಂಥದಲ್ಲಿ (3–18) (6–102) (2–255) ವಾಕ್ಯಗಳ ಸಾರಾಂಶ ತಿಳಿಯಲಾರದೆ ಹೋಗಿದ್ದಾರೆ. ಆದ್ದರಿಂದ (6–91)ರಲ್ಲಿ **"ನಿಮಗಾಗಲಿ ನಿಮ್ಮ ಹಿರಿಯರಿಗಾಗಲಿ ದೇವರ ಜ್ಞಾನ ತಿಳಿಯದಂತೆ ಹೋಗಿದೆ"** ಎಂದು ಹೇಳುವುದಾಗಿದೆ. ದೇವರು ಅದ್ವಿತೀಯನು. ಅದ್ವಿತೀಯನಾದ ದೇವರನ್ನು ಆರಾಧಿಸಿರೆಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೇ ಎರಡನೆಯವನ ಮೇಲೆ ದೃಷ್ಟಿಯಿಲ್ಲದೆ ಒಂದೇ ದೇವರಾದ ಆತ್ಮವನ್ನೇ ಆರಾಧಿಸಿರೆಂದು, ತಾನು ಅಧಿಕಾರಕೊಟ್ಟವನನ್ನು ಆರಾಧಿಸಿದವನು ನನ್ನನ್ನು ಆರಾಧಿಸಿದಂತೆಯೆಂದು ದೈವಗ್ರಂಥದಲ್ಲಿ ಹೇಳುವುದಾಗಿದೆ. ನಾನು ಧರ್ಮಗಳಿಗೆ ಅತೀತನು, ಧರ್ಮಗಳಿಂದ ದೇವರಾಗಿರುವವನನ್ನು, ದೇವರ ಧರ್ಮಗಳ ಪ್ರಕಾರವೇ ಆತನನ್ನು ತಿಳಿಯಬೇಕೆಂದು ಪರಮಾತ್ಮ ದೇವರು ಹೇಳಿದ ಮಾತುಗಳನ್ನು ಮರೆತುಹೋಗಿದ್ದಾನೆ. ಮನುಷ್ಯ ಒಬ್ಬ ದೇವರನ್ನೇ ಆರಾಧಿಸುತ್ತಿದ್ದಾನೆ ಆದರೇ ಆ ದೇವರು ಯಾರು? ಎನ್ನುವುದು ತಿಳಿದಿಲ್ಲ. ತನ್ನ ದೇವರು ವಿಶ್ವಪ್ರಭುವು. ವಿಶ್ವಸಾಮ್ರಾಜ್ಯಕ್ಕೆ ಅಧಿಪತಿಯಾಗಿರುವವನು ಎಂದು ಹೇಳುತ್ತಿದ್ದಾನೆ. ಹಾಗೆಯೇ ಆರಾಧನೆ ಮಾಡುತ್ತಿದ್ದಾನೆ, ಸಂತೋಷ. ಆದರೇ ತಾನು ಸೃಷ್ಟಿ ಆದಿಯಲ್ಲಿ ದೇವರನ್ನು ಆರಾಧಿಸುತ್ತಿದ್ದೇನಾ? ಸೃಷ್ಟಿ ನಂತರ ದೇವರನ್ನು ಆರಾಧಿಸುತ್ತಿದ್ದೇನಾ? ಎಂದು ತಿಳಿಯಲಾರದೆ ಹೋಗುತ್ತಿದ್ದಾನೆ. ವಿಶ್ವಪ್ರಭುವು ಎಂದರೆ ಎರಡು ವಿಧಗಳ ಅರ್ಥವಿದೆ. ಒಂದು ಪಂಚಭೂತ ನಿರ್ಮಿತವಾದ ಅಚರ ಪ್ರಕೃತಿಯೆನ್ನುವ ಪ್ರಪಂಚ. ಎರಡು ಪ್ರಕೃತಿಯಿಂದಲೇ ನಿರ್ಮಿತವಾದ ಚರ ಪ್ರಕೃತಿಯೆನ್ನುವ ಪ್ರಪಂಚ. ಎಂದರೆ ಶರೀರಗಳ ರೂಪದಲ್ಲಿರುವ ಜೀವಸಮುದಾಯವನ್ನು ಒಟ್ಟಾರೆ ಮೊತ್ತವು ವಿಶ್ವವೆಂದು

ಹೇಳುತ್ತಿದ್ದೇವೆ. ಆದರೇ ಶರೀರಗಳಿಗೆ ವಿಶ್ವಕ್ಕೆ ಅಧಿಪತಿಯಾದ ದೇವರನ್ನೇ ಆರಾಧಿಸಿರೆಂದು, ಆತನೇ ನಿಮಗೆ ಆರಾಧ್ಯ ದೈವವೆಂದು ಹೇಳಲ್ಪಟ್ಟಿದ್ದಾನೆ. ಅಚರ ಪ್ರಕೃತಿ ಎನ್ನುವ ವಿಶ್ವಕ್ಕೆ ಅಧಿಪತಿ ಪರಮಾತ್ಮ. ಪರಮಾತ್ಮಯೇ ಶರೀರಗಳಿಗು ಕೂಡಾ ಅಧಿಪತಿಯೇ ಆದರೂ ಶರೀರಗಳಲ್ಲಿ ದೇವರಾಗಿರುವುದಕ್ಕೆ, ತನ್ನ ಸ್ಥಾನದಲ್ಲಿ ಆತ್ಮವನ್ನು ನೇಮಿಸಿ ಈತನೇ ನಿಮ್ಮ ದೇವರು ಎಂದು ಹೇಳಿದ್ದಾನೆ. ಆದರೇ ಮನುಷ್ಯ ದೃಷ್ಠಿಯನ್ನು ಪರಮಾತ್ಮನ ಮೇಲೆ ಇಟ್ಟುಕೊಂಡು ಆರಾಧಿಸುವುದರಿಂದ ಆ ಆರಾಧನೆ ಪರಮಾತ್ಮಗೆ ಸೇರುತ್ತಿದೆ. ಆಗ ತಾನು ನೇಮಿಸಿ ಈತನೇ ನಿಮಗೆ ಆರಾಧ್ಯ ದೈವವೆಂದು ಹೇಳಿದಾಗ ನೀವು ನನ್ನ ಮಾತನ್ನು ಕೇಳದಂತೆ ನೇರವಾಗಿ ನನ್ನನ್ನು ಆರಾಧಿಸುತ್ತಿದ್ದೀರ. ನನ್ನ ಆತ್ಮವನ್ನು ಆರಾಧಿಸದವರು ನನ್ನನ್ನು ಆರಾಧಿಸದಂತೆಯಾಗುತ್ತದೆ. ಆಗ ಮನುಷ್ಯನ ಆರಾಧನೆ ಒಟ್ಟಿನಲ್ಲಿ ವೃಥಾ ಆಗುತ್ತಿದೆ ಎಂದು ದೇವರು ಅನ್ನುತ್ತಿದ್ದಾನೆ. ನನ್ನ ಕುಮಾರನನ್ನು ಘನಪಡಿಸದವನು ನನ್ನನ್ನು ಘನಪಡಿಸದಂತೆಯೆಂದು ಹೇಳಿದ್ದಾನೆ.

**ಪ್ರಶ್ನೆ :– ಅಸಲಾದ ಸೃಷ್ಠಿಕರ್ತನಾದ ದೇವರನ್ನು ಆರಾಧಿಸಿದಾಗ ಆ ಆರಾಧನೆ ವೃಥಾ ಹೇಗೆ ಆಗುತ್ತದೆ?**

**ಉತ್ತರ :–** ಸೃಷ್ಠಿಕರ್ತನಾದ ಪರಮಾತ್ಮ ತನ್ನನ್ನು ಆರಾಧಿಸಬಾರದು ತನ್ನ ಆತ್ಮವನ್ನು ಆರಾಧಿಸೆಂದು ಹೇಳಿದ್ದಾನೆ ಅಲ್ಲವೆ! ಹಾಗೆ ಹೇಳಿದ ನಂತರ ಕೂಡಾ ಪರಮಾತ್ಮನ ಮಾತುಗಳು ಲೆಕ್ಕಮಾಡದೆಹೋದರೆ ಆತನ ಮಾತನ್ನು ಅಗೌರವಪಡಿಸಿದಂತೆ ಅಲ್ಲವೆ? ಸೃಷ್ಠಿ ಆದಿಯಲ್ಲಿ ದೇವರು ಸೃಷ್ಠಿ ನಂತರ ಮನುಷ್ಯರು ಆರಾಧಿಸಬೇಕಾದ ದೇವರನ್ನು ನಿರ್ಣಯಿಸಿ ಈತನನ್ನೇ ಆರಾಧಿಸಿರಿ, ಈತನು ಒಬ್ಬನೇ ನಿಮಗೆ ಆರಾಧ್ಯ ದೈವ, ಈತನನ್ನು ಆರಾಧಿಸಿದರೆ ನನ್ನನ್ನು ಆರಾಧಿಸಿದಂತೇಯಾಗುತ್ತದೆ. ಈತನನ್ನು ಆರಾಧಿಸದೆಹೋದರೆ ನನ್ನನ್ನು ಆರಾಧಿಸಿದಂತೆ ಆಗುತ್ತದೆ ಎಂದು ಹೇಳಿರುವಾಗ, ಆತನ ಮಾತನ್ನು ಅಲ್ಲಗಳೆದು ಆರಾಧಿಸಬೇಕಾದ ಆತ್ಮವನ್ನು ಆರಾಧಿಸದೆ ನೇರವಾಗಿ ಸೃಷ್ಠಿ ಆದಿಯಲ್ಲಿನ ದೇವರನ್ನು ಆರಾಧಿಸಿದರೇ ಆ ಆರಾಧನೆ ವೃಥಾ ಆಗುತ್ತದೆ. ಸೃಷ್ಠಿ ಆದಿಯಲ್ಲಿ

ದೇವರು ಧರ್ಮಯುಕ್ತನು ಅಲ್ಲ. ಆದ್ದರಿಂದ ಎಂತಹ ಆರಾಧನೆಗಳು, ಎಂತಹ ಯೋಗಗಳು ಧರ್ಮಗಳಿಂದ ಕೂಡಿಕೊಂಡಿರುವವು ಯಾವುವು ಆತನನ್ನು ಸೇರುವುದಿಲ್ಲ. ಆದ್ದರಿಂದ ವೃಥಾ ಆಗುತ್ತದೆಂದು ಹೇಳಿದ್ದೇವೆ. ನೀವು ಸೃಷ್ಟ್ಯಾದಿಯಲ್ಲಿ ದೇವರನ್ನು ಪೂಜಿಸಿ (ಆರಾಧಿಸಿ) ಸೃಷ್ಠಿಕರ್ತನಾದ ದೇವರನ್ನು ಆರಾಧಿಸಿದ್ದೇವೆಂದು ಹೇಳುವುದರಲ್ಲಿ ಎಷ್ಟೋ ತಿಳಿಯದತನವಿದೆ. ಸೃಷ್ಠಿಕರ್ತರು ಇಬ್ಬರು ಇದ್ದಾರೆ. ಒಬ್ಬರು ಆಚರ ಪ್ರಕೃತಿಯನ್ನು ಸೃಷ್ಠಿಸಿದ ಪರಮಾತ್ಮನಾಗಿದ್ದು, ಮತ್ತೊಬ್ಬರು ಚರ ಪ್ರಕೃತಿಯನ್ನು ಎಂದರೆ ಶರೀರಗಳೊಂದಿಗೆ ಕೂಡಿಕೊಂಡ ಜೀವರಾಶಿಗಳನ್ನು ಸೃಷ್ಠಿಸಿದ ಸೃಷ್ಠಿಕರ್ತ ಆತ್ಮ ಇದ್ದಾನೆ. ಇಬ್ಬರಲ್ಲಿ ಜೀವರಾಶಿಗಳನ್ನು, ಶರೀರಗಳನ್ನು ಸೃಷ್ಠಿಸಿದ ಸೃಷ್ಠಿಕರ್ತ ಆತ್ಮ ಇದೆ. ಇಬ್ಬರಲ್ಲಿ ಜೀವರಾಶಿಗಳನ್ನು ಶರೀರಗಳನ್ನು ಸೃಷ್ಠಿಸಿದ ಪ್ರಸ್ತುತ ಕೂಡಾ ಸೃಷ್ಠಿಸುತ್ತಿರುವ ಆತ್ಮವೇ ಜೀವಿಗಳಾದವರೆಲ್ಲರೂ ಆರಾಧಿಸುವಂತಹ ದೇವರು. ಧರ್ಮಗಳಿಂದ ಕೂಡಿಕೊಂಡ ದೇವರಾದ ಆತ್ಮವನ್ನು ಕೂಡಾ ಆರಾಧಿಸಬೇಕಾಗಿರುವವು ಧರ್ಮಯುಕ್ತವಾಗಿ ಎರಡೇ ವಿಧಾನಗಳು ಇವೆ. ದೇವರ ಧರ್ಮಗಳು ತಿಳಿದು ಎಂದರೇ ಆತ್ಮ ಧರ್ಮಗಳು ತಿಳಿದು ಆರಾಧಿಸಬೇಕಾದ ಕರ್ಮ ಬ್ರಹ್ಮಯೋಗಗಳೆನ್ನುವ ಎರಡು ವಿಧಾನಗಳಲ್ಲಿ ಯಾವುದೋ ಒಂದು ವಿಧಾನದ ಪ್ರಕಾರ ಆರಾಧಿಸಿದರೆ ಆಗ ಮನುಷ್ಯ ಸಂಪಾದಿಸಿಕೊಂಡ ಕರ್ಮಗಳು ತೊಲಗುವುದಕ್ಕೆ ಪ್ರಾರಂಭಿಸುತ್ತವೆ. ಆತ್ಮಜ್ಞಾನ ತಿಳಿಯದೇ, ಆತ್ಮನನ್ನು ಆರಾಧಿಸಬೇಕಾದ ಎರಡು ವಿಧಾನಗಳು ತಿಳಿಯದೇ, ಮೂರನೆ ಆತ್ಮನಾದ ಸೃಷ್ಠಿ ಆದಿಯಲ್ಲಿನ ದೇವರಾದ ಪರಮಾತ್ಮ ಏನೆಂಬುದು ತಿಳಿಯುವುದಿಲ್ಲ. ಆತನನ್ನು ಆರಾಧಿಸುವ ಆರಾಧನೆ ಏನೋ ತಿಳಿದಿಲ್ಲ.

ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ 112ನೇ ಸೂರಾ **'ಅಲ್ ಇಖ್ಲಾಸ್'** ನಲ್ಲಿ ಒಟ್ಟು ನಾಲ್ಕು ಆಯತ್‌ಗಳು (ವಾಕ್ಯಗಳು) ಇವೆ. ಅದರಲ್ಲಿ ಮೊದಲನೆಯದು **1) ಆತನು ಒಬ್ಬನೇ** ಯೆಂದು ಇದೆ. ಮತ್ತೊಂದು ಗ್ರಂಥದಲ್ಲಿ ತೆಲುಗು ಅನುವಾದದ ಪ್ರಕಾರ **1) ಆತನು ಅಲ್ಲಾಹ್ ಏಕೈಕನು. 2) ಅಲ್ಲಾಹ್**

**ಯಾರ ಅಕ್ಕರೆ ಇಲ್ಲದವನು. 3) ಆತನಿಗೆ ಸಂತಾನ ಇಲ್ಲ. ಆತನು ಯಾರ ಸಂತಾನವಲ್ಲ. 4) ಆತನೊಂದಿಗೆ ಸಮಾನನು ಯಾರೂ (ಯಾವುದು) ಇಲ್ಲ.**

ಈ ನಾಲ್ಕು ಆಯತ್‌ಗಳು ಸೃಷ್ಠಿ ಆದಿಯಲ್ಲಿನ ದೇವರನ್ನು ಕುರಿತು ಹೇಳಿದ ವಾಕ್ಯಗಳೆಂದು ಹೇಳದೆಯೇ ತಿಳಿಯುತ್ತಿದೆ. ಸೃಷ್ಠಿ ನಂತರ ನೇಮಿಸಿದ ದೇವರಿಗೆ ಸಂಬಂಧಿಸಿರುವವು ಅಲ್ಲವೆಂದು ಸುಲಭವಾಗಿ ತಿಳಿದುಹೋಗುತ್ತಿವೆ. ಇದರಲ್ಲಿ ಎರಡನೆ ವಾಕ್ಯವನ್ನು ಕುರಿತು ಈಗ ಹೇಳಿಕೊಳ್ಳೋಣ. **"ಅಲ್ಲಾಹ್ ಯಾರ ಅಕ್ಕರೆ ಇಲ್ಲದವನು"** ಎಂದು ಇದೆ. ಇದನ್ನನುಸರಿಸಿ ಯಾರ ಅವಶ್ಯಕತೆ ಇಲ್ಲದವನು ದೇವರು ಎಂದು ತಿಳಿಯುತ್ತಿದೆ. ಹಾಗಿರುವಾಗ ನಿನ್ನ ಆರಾಧನೆಯಿಂದ ಕೂಡಾ ಆತನಿಗೆ ಕೆಲಸವಿಲ್ಲ. ಆದ್ದರಿಂದ ನೀವು ಆರಾಧಿಸಬೇಕಾದ ದೇವರನ್ನು ಮೊದಲೇ ತೋರಿಸಿ **ಈತನೇ ನಿಮ್ಮ ಆರಾಧ್ಯ ದೈವ** ಎಂದು ಹೇಳಿದ್ದಾನೆ. ಸೃಷ್ಠಿ ಆದಿಯಲ್ಲಿ ದೇವರಿಗೆ ಯಾವ ಆರಾಧನೆ ಅಗತ್ಯವಿಲ್ಲ. ಸೃಷ್ಠಿ ಪೂರ್ವದಲ್ಲಿ ದೇವರು ಸೃಷ್ಠಿ ಆದಿಯಲ್ಲಿಯೇ ತನ್ನ ಜ್ಞಾನವನ್ನು ಹೇಳಿದಾಗ ಯಾರ ಆರಾಧನೆಯಿಂದಾಗಲಿ, ಆಪ್ಯಾಯತೆಯಿಂದಾಗಲಿ ನನಗೆ ಅಗತ್ಯವಿಲ್ಲ (ಅಕ್ಕರೆ) ಇಲ್ಲವೆಂದು ಹೇಳಿದ್ದಾನೆ. ಆದ್ದರಿಂದ ನಾವು ಯಾವ ದೇವರನ್ನು ಆರಾಧಿಸಬೇಕೊ ಆ ದೇವರನ್ನೇ ಆರಾಧಿಸಿರೆಂದು ಹೇಳುತ್ತಿದ್ದೇವೆ. ಹಾಗಾಗದ ಪಕ್ಷದಲ್ಲಿ ದೇವರು ಕೂಡಾ ಆರಾಧನೆ ಅಕ್ಕರೆ ಇರುವವನೆಂದು ಹೇಳಬೇಕಾಗಿ ಬರುತ್ತದೆ. ಸೃಷ್ಟ್ಯಾದಿಯಲ್ಲಿನ ಅಂದರೇ ಸೃಷ್ಠಿ ಪೂರ್ವದಲ್ಲಿ ದೇವರಿಗೆ ಯಾವ ಅಕ್ಕರೆಯಿಲ್ಲ. ಯಾವ ಅಗತ್ಯ ಇಲ್ಲದವನು ಆತ್ಮಗಿಂತ ಬೇರೆಯಾದ ಪರಮಾತ್ಮಯೆಂದು ಹೇಳುತ್ತಿದ್ದೇವೆ.

ಮೂರನೆ ವಾಕ್ಯದಲ್ಲಿ **"ಆತನಿಗೆ ಸಂತಾನ ಇಲ್ಲ. ಆತನು ಯಾರ ಸಂತಾನವಲ್ಲ"** ಎಂದು ಇದೆ. ಸೃಷ್ಠಿ ಆದಿ ದೇವರು ಸ್ವತಃವಾಗಿ ಮೊದಲಿನಿಂದ ಇರುವವನು, ಆತನಿಗಿಂತ ಮೊದಲು ಯಾರೂ ಇಲ್ಲ. ಆದ್ದರಿಂದ ಆತನು ಯಾರ ಸಂತಾನ ಅಲ್ಲವೆಂದು ಹೇಳಬಹುದು. ಆಕಾಶದಿಂದ ಮೊದಲುಗೊಂಡು

ಗಾಳಿ, ಅಗ್ನಿ, ನೀರು, ಭೂಮಿ ವರೆಗು ಯಾವುದು ಇಲ್ಲದಿರುವಾಗ ಅದು ಎಂತಹ ಸ್ಥಿತಿಯೋ ಯಾರಿಗು ಅರ್ಥವಾಗುವುದಿಲ್ಲ ಅಂತಹ ಸಮಯದಲ್ಲಿ ಕೂಡಾ ಸೃಷ್ಠಿಗಿಂತ ಮೊದಲಿನಿಂದ ಇರುವ ದೇವರು ಇದ್ದಾನೆ. ಆಗ ಆತನು ಒಬ್ಬನು ಹೊರತು ಯಾರೂ ಇಲ್ಲ. ಯಾರೂ ಇಲ್ಲದಿರುವಾಗ ಆತನಿಗೆ ತಾಯಿತಂದೆಯರು ಇರುವುದಿಲ್ಲ ಅಲ್ಲವೆ! ಆದ್ದರಿಂದ 112ನೇ ಸೂರಾದಲ್ಲಿನ ಮೂರನೆ ಆಯತ್‌ನಲ್ಲಿ **“ಆತನು ಯಾರ ಸಂತಾನ ಅಲ್ಲವೆಂದು”** ಹೇಳಿದ್ದಾರೆ. ಅಷ್ಠೇಅಲ್ಲದೆ **“ಆತನಿಗೆ ಯಾರೂ ಸಂತಾನ ಇಲ್ಲ”** ಎನ್ನುವ ವಾಕ್ಯವು ಕೂಡಾ ಅಲ್ಲಿಯೇ ಇದೆ. ಅದರ ಪ್ರಕಾರ ನೋಡಿದರೆ ಪರಮಾತ್ಮಯೆನ್ನುವ ಸೃಷ್ಠ್ಯಾದಿಯಲ್ಲಿನ ದೇವರು ಬದಲಾವಣೆಹೊಂದದ ಅಚರ ಪ್ರಕೃತಿಯನ್ನು ಸೃಷ್ಠಿಸಿದ ನಂತರ ಬದಲಾವಣೆ ಹೊಂದುವ ಪ್ರಕೃತಿಯನ್ನು ತಯಾರು ಮಾಡಲಿಲ್ಲ. ಅಚರ ಪ್ರಕೃತಿ ನಂತರ ಆತ್ಮವನ್ನು, ಜೀವಾತ್ಮವನ್ನು ಸೃಷ್ಠಿಸಿ ನಂತರ ಬದಲಾಗುವ ಪ್ರಕೃತಿಯನ್ನು, ಪ್ರಕೃತಿಯಿಂದ ವಿಭಾಗಿಸಲಾಗಿದೆ. ಆಗ ಬದಲಾಗದ, ಬದಲಾಗುವ ಪ್ರಕೃತಿಗಳಾಗಿ ಪ್ರಕೃತಿ ಬೇರ್ಪಟ್ಟು ದೇವರು ತನ್ನ ಸ್ಥಾನದಲ್ಲಿ ಆತ್ಮವನ್ನು ದೇವರಾಗಿ ನೇಮಿಸಿ ತಾನು ಸುಮ್ಮನೆ ಇದ್ದುಹೋಗಿ ದೇವರಾದ ಆತ್ಮ ಚರ ಪ್ರಕೃತಿಯಿಂದ ಶರೀರಗಳನ್ನು ತಯಾರು ಮಾಡಿ ಅದರಲ್ಲಿ ಜೀವಾತ್ಮಗಳನ್ನು ನಿವಾಸಿಸುವಂತೆ ಮಾಡಿದೆ. ಪ್ರಕೃತಿಯಿಂದ ಶರೀರ ತಯಾರಾಗಿ ಅದರಲ್ಲಿ ಜೀವಿಯು ಸೇರುವುದಾಗಿದೆ. ಈ ಕ್ರಿಯೆಯಲ್ಲಿ ಆತ್ಮ ಬೀಜದಾತನಾಗಿ ಇರುವುದರಿಂದ ಪ್ರಕೃತಿ ಗರ್ಭದಿಂದ ಹುಟ್ಟುವ ಜೀವಾತ್ಮಗಳಿಗೆ ಪ್ರಕೃತಿ ತಾಯಿಯಾಗಿದ್ದು, ಆತ್ಮ ತಂದೆಯಾಗಿ ಇದ್ದಾನೆ. ಹೀಗೆ ಸೃಷ್ಠಿ ನಂತರ ಆತ್ಮಗೆ ಸಂತಾನ ಇದೆ ಆದರೆ ಪರಮಾತ್ಮಗೆ ಸಂತಾನವಿಲ್ಲ. ಆತ್ಮಗಿಂತ ಬೇರೆಯಾಗಿರುವ ಪರಮಾತ್ಮ ಜೀವಿಗಳು ಶರೀರ ಧರಿಸಿ ಹುಟ್ಟುವುದರಲ್ಲಿ ಎಂತಹ ಪಾತ್ರ ಪೋಷಿಸಲಿಲ್ಲ. ಆದ್ದರಿಂದ ‘ಪರಮಾತ್ಮಗೆ ಯಾರೂ ಸಂತಾನ ಇಲ್ಲವೆಂದು’ ಹೇಳಬಹುದು. ಈ 112ನೇ ಸೂರಾವನ್ನು ಅನುಸರಿಸಿ ಆತ್ಮಬೇರೆ, ಪರಮಾತ್ಮ ಬೇರೆಯೆಂದು ತಿಳಿಯುತ್ತಿದೆ. ಸೃಷ್ಠಿ ನಂತರ ದೇವರಿಗೆ ಸಂತಾನ ಇರುವಾಗ, ಸೃಷ್ಠಿ ಪೂರ್ವದಿಂದ ಇರುವ ದೇವರಿಗೆ ಸಂತಾನ ಇಲ್ಲವೆಂದು ಹೇಳಬಹುದು. ಈ ವಿಧವಾಗಿ ದೈವ ಗ್ರಂಥದ

ಪ್ರಕಾರ ಇಬ್ಬರು ದೇವರುಗಳೆಂದು ಅದರಲ್ಲಿ ನೀನು (ಮನುಷ್ಯರು) ಆರಾಧಿಸಬೇಕಾಗಿರುವುದು ಒಬ್ಬ ದೇವರನ್ನೇಯೆಂದು ಆತನೇ ಸೃಷ್ಠಿ ನಂತರ ದೇವರೆಂದು ಸುಲಭವಾಗಿ ಹೇಳಬಹುದು.

ಅಂತಿಮ ದೈವಗ್ರಂಥ 112ನೇ ಸೂರಾದಲ್ಲಿ ನಾಲ್ಕು ಆಯತ್‌ಗಳಲ್ಲಿ ಮೊದಲ ವಾಕ್ಯ, ನಾಲ್ಕನೆ ವಾಕ್ಯ ಎರಡೂ ಒಂದೇ ಅರ್ಥಕೊಡುತ್ತಿವೆ. ಎರಡು, ಮೂರು ವಾಕ್ಯಗಳಲ್ಲಿ ಬೇರೆಬೇರೆ ಭಾವನೆಗಳಿದ್ದರೂ ಒಂದು, ನಾಲ್ಕು ಆಯತ್‌ಗಳು ಒಂದೇ ಭಾವನೆಯನ್ನು ತಿಳಿಸುವಂತೆ ಇವೆ. ಒಂದನೇ ಅಯತ್‌ನಲ್ಲಿ **ಆತನು ಒಬ್ಬನೇ** ಎಂದು ಇದೆ. ನಾಲ್ಕನೆ ಆಯತ್‌ನಲ್ಲಿ **ಆತನೊಂದಿಗೆ ಸಮಾನನು ಯಾರೂ ಇಲ್ಲ** ಎಂದು ಇದೆ. ಈ ಎರಡು ವಾಕ್ಯಗಳ ಸಾರಾಂಶ ದೇವರು ಒಬ್ಬನು ಹೊರತು ಯಾರೂ ಇಲ್ಲವೆಂದು ಅರ್ಥವಾಗುತ್ತಿದೆ. ಸೃಷ್ಠಿ ಆದಿಯಲ್ಲಿ ಆತನು ಹೊರತು ಪ್ರಕೃತಿಯಾಗಲಿ, ಯಾವ ಮಾನವನಾಗಲಿ ಇಲ್ಲ. ಸೃಷ್ಠಿ ಪೂರ್ವದಲ್ಲಿ ದೇವರಿಗೆ ಸಮಾನವಾದವನು ಇದ್ದಾನೆನ್ನುವುದಕ್ಕೆ ಅವಕಾಶವೇ ಇಲ್ಲ. ಏಕೆಂದರೆ! ಆಗ ಯಾರೂ ಇಲ್ಲ. ಸೃಷ್ಠಿ ನಂತರ ಒಂದೇಬಾರಿ ಯಾವುದು ತಯಾರಾಗಲಿಲ್ಲ. ಕಾಲ ಕಳೆದಂತೆಲ್ಲ ಕ್ರಮೇಣ ಎಲ್ಲಾ ಒಂದರ ನಂತರ ಒಂದು ತಯಾರಾಗುತ್ತಾ ಬಂದಿವೆ. ಆ ಕ್ರಮದಲ್ಲಿ ಸೃಷ್ಠಿಸಲ್ಪಟ್ಟ ಸೃಷ್ಠಿಗೆಲ್ಲ, ಸರ್ವಮಾನವರಿಗು ಸ್ವತಃವಾಗಿ ದೇವರೇ ಮತ್ತೊಬ್ಬ ದೇವರನ್ನು ತಯಾರು ಮಾಡಿದ್ದಾನೆ. ಆಗ ಹಾಗೆ ತಯಾರಿ ಮಾಡಲ್ಪಟ್ಟ ದೇವರಿಗೆ ಸರ್ವ ಅಧಿಕಾರಗಳು ದೇವರೇ ಕೊಟ್ಟಿದ್ದಾನೆ. ಹಾಗೆ ದೇವರಾಗಿ ತಯಾರಾದವನು ಕೂಡಾ ಮೊದಲಿನ ದೇವರಿಗೆ ಸಮಾನವಾಗಿ ಇಲ್ಲ. ಏಕೆಂದರೆ! ತಯಾರು ಮಾಡಲಾದ ದೇವರಿಗೆ ತಂದೆ ಮೊದಲ ದೇವರು ಆಗಿರುವುದರಿಂದ, ಕುಮಾರನು ಹುಟ್ಟಿಸಲ್ಪಟ್ಟವನು ಆಗಿರುವುದರಿಂದ ಮೊದಲ ಪರಮಾತ್ಮ ದೇವರಿಗೆ, ಎರಡನೆ ಆತ್ಮದೇವರು ಸಮಾನವಲ್ಲ. ಸೃಷ್ಠಿ ಪೂರ್ವದಲ್ಲಿರುವವನು ಒಬ್ಬನೇಯೆಂದು ಮೊದಲ ವಾಕ್ಯದಲ್ಲಿಯೂ, ಸೃಷ್ಠಿ ನಂತರ ಕೂಡಾ ಆತನಿಗೆ ಸಮಾನರು ಇಲ್ಲವೆಂದು ನಾಲ್ಕು ವಾಕ್ಯಗಳಲ್ಲಿಯೂ ಹೇಳಲ್ಪಟ್ಟಿದೆ. ಈ ನಾಲ್ಕು ಆಯತ್‌ಗಳು ಸೃಷ್ಠಿ

ಪೂರ್ವದಲ್ಲಿರುವ ದೇವರನ್ನು ಕುರಿತು ಹೇಳಿವೆ. ಖುರ್‌ಆನ್‌ನಲ್ಲಿನ ಉಳಿದ ಸೂರಾಗಳಲ್ಲಿನ ಅನೇಕ ವಾಕ್ಯಗಳು ಸೃಷ್ಠಿ ನಂತರ ದೇವರನ್ನು ಕುರಿತು ಹೇಳಿರುವವು ಇವೆ. 112ನೇ ಸೂರಾದಲ್ಲಿನ ನಾಲ್ಕು ಆಯತ್‌ಗಳು (3–18) ಆಯತ್‌ಗೆ ದಾರಿ ತೋರಿಸುತ್ತಿವೆ.  ಅಲ್ಲಿ ಹೇಳಿದ ವಿಷಯ ಕೂಡಾ ಸೃಷ್ಠಿ ಪೂರ್ವದಲ್ಲಿರುವ ದೇವರು ಸೃಷ್ಠಿ ನಂತರ ದೇವರನ್ನು ಕುರಿತು ಹೇಳುತ್ತಾ ಆತನು ಒಬ್ಬನೇ ನಿಮಗೆ ಆರಾಧ್ಯದೈವವೆಂದು ಹೇಳಿದ್ದಾನೆ. ಹಾಗೇ (2–255) ರಲ್ಲಿ ಎರಡನೆ ಆತ್ಮವನ್ನು ಕುರಿತು ಹೇಳಿರುವುದು ಇದೆ.

ಈ ವಾಕ್ಯಗಳಲ್ಲಿನ ಜ್ಞಾನವನ್ನು ಗ್ರಹಿಸಿಕೊಳ್ಳಲಾರದ ಪ್ರಜೆಗಳು ಮುಖ್ಯವಾಗಿ ಖುರ್‌ಆನ್ ಗ್ರಂಥ ನಮ್ಮದು ಎನ್ನುವ ಮುಸ್ಲಿಮ್‌ರು ಜ್ಞಾನವನ್ನು ತಿಳಿದಿದ್ದೇವೆಂದುಕೊಳ್ಳುತ್ತಾ ತಪ್ಪುದಾರಿಯಲ್ಲಿ ಹೋಗುತ್ತಿದ್ದಾರೆ. ಅಜ್ಞಾನ ಮಾರ್ಗದಲ್ಲಿ ಪ್ರಯಾಣಿಸುತ್ತಿದ್ದಾರೆ. ಒಬ್ಬ ದೇವರನ್ನೇ ಆರಾಧಿಸುತ್ತಾ ನಾವು ಸಕ್ರಮವಾದ ಮಾರ್ಗದಲ್ಲಿ ಇದ್ದೇವೆಂದು ಹೇಳುತ್ತಿದ್ದರೂ ಅವರು ಯಾವ ದೇವರನ್ನು ಆರಾಧಿಸುತ್ತಿದ್ದಾರೊ ತಿಳಿಯುತ್ತಿಲ್ಲ. ತಂದೆ ದೇವರನ್ನಾ ಅಥವಾ ಕುಮಾರನಾದ ದೇವರನ್ನಾ? ಎಂದು ಪ್ರಶ್ನಿಸಿದರೆ ಸಂದಿಗ್ಧದಲ್ಲಿ ಬಿದ್ದುಹೋ ಗುತ್ತಿದ್ದಾರೆ. ಇಲ್ಲಿಯವರೆಗು ದೇವರು ತಂದೆಯಾಗಿ, ಕುಮಾರನಾಗಿ ಎರಡಾಗಿ ಇದ್ದಾನೆಂದು ತಿಳಿಯದವರಿಗೆ, ಜ್ಞಾನದಲ್ಲಿ ನಾವು ದೊಡ್ಡವರೆನ್ನುವವರಿಗೆ ಒಂದು ಒಳಪು ಮೆರೆದಂತಾಗಿದೆ. ಅದರಿಂದ ಅವರು ಕುರುಡರಂತೆ ತಯಾರಾಗಿ ಯಾವುದು ಸತ್ಯ, ಯಾವುದು ಅಸತ್ಯ ಎಂದು ನೋಡಿಕೊಳ್ಳುವುದು ಆರಂಭಿಸಿದ್ದಾರೆ. ಈಗ ಕೇಳಿದ ವಿಷಯ ಶಾಸ್ತ್ರಬದ್ಧವೇ ಆಗಿರುವುದರಿಂದ ಒಂದುಕಡೆ ಪೂರ್ತಿಯಾಗಿ ಆಲೋಚಿಸಬೇಕಾಗಿ ಬಂದಿದೆ. ಕೆಲವರು ಕುರುಡರಾಗಿದ್ದೂ "ಇಲ್ಲಿಯವರೆಗು ಯಾವುದನ್ನು ನಂಬಿದ್ದೇವೊ ಅದನ್ನು ಈಗ ನಂಬುತ್ತಿದ್ದೇವೆ, ಅದು ಈಗ ಒಳ್ಳೆಯದಾ, ಕೆಟ್ಟದಾ ಎಂದು ನೋಡಬೇಕಾದ ಅಗತ್ಯವಿಲ್ಲ" ಎನ್ನುತ್ತಿದ್ದಾರೆ.

ಕೆಲವರು ಮಾತ್ರ ಇದರಲ್ಲಿ ಏನೊ ನಮಗೆ ತಿಳಿಯದ ರಹಸ್ಯವಿದೆ ಯೆಂದು ಈಗಿನಿಂದಾದರೂ ತಿಳಿದುಕೊಂಡರೆ ಒಳ್ಳೆಯದೆಂದು ತಿಳಿದುಕೊಳ್ಳುವು ದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಕೆಲವರು "ನೀವು ಹೇಳುವುದು ಸತ್ಯವಾದರೂ ನಾವು ನಿಮ್ಮ ಮಾತನ್ನು ಕೇಳುವುದಿಲ್ಲ. ನಮ್ಮ ಹಿರಿಯರು ಹೇಗೆ ಹೇಳಿದರೇ ಹಾಗೆ ಕೇಳುತ್ತೇವೆ." ಎಂದು ಹೇಳುತ್ತಿದ್ದಾರೆ. ಕೆಲವರು "ನಮ್ಮ ಹಿರಿಯರು ಹೇಳಿದಂತೆ ನಾವು ಜಕಾತ್ ಕೊಡುತ್ತಿದ್ದೇವೆ, ನಮಾಜ್ ಮಾಡುತ್ತಿದ್ದೇವೆ. ಅದಕ್ಕಿಂತ ಮೀರಿರುವುದು ಇಲ್ಲವೆಂದು ಖುರ್ಆನ್ ಗ್ರಂಥದಲ್ಲಿಯೇ ಇದೆ. ಹಾಗಿರುವಾಗ ಒಂದೇ ದೃಷ್ಠಿಹೊಂದಿ ದೇವರ ಮಾರ್ಗದಲ್ಲಿ ಮುಂದಕ್ಕೆ ಹೋಗಬೇಕೇ ಹೊರತು, ಅನುಮಾನಗಳಿಂದ ಹಿಂದಕ್ಕೆ ಬರಬಾರದೆಂದು" ಹೇಳುತ್ತಿದ್ದಾರೆ. ಮನುಷ್ಯರ ಹಿಂದಿದ್ದು ನಡೆಸುವವನು ದೇವರಾದ ಆತ್ಮ ಆಗಿರುವುದರಿಂದ ಆತನು ಶ್ರದ್ಧೆ ಇರುವವರನ್ನು ಒಳ್ಳೆಯ ಮಾರ್ಗದಲ್ಲಿಯೂ, ಶ್ರದ್ಧೆ ಇಲ್ಲದವನನ್ನು ಅಜ್ಞಾನ ಮಾರ್ಗದಲ್ಲಿಯೂ ನಡೆಸುತ್ತಾನೆ. ಶರೀರದಲ್ಲಿನ ಆತ್ಮ ಸರ್ವ ಜೀವರಾಶಿಗಳಿಗು ದೇವರಾಗಿ ಇರುವುದರಿಂದ ಜೀವಿಗಳೆಲ್ಲರನ್ನು ಅವರವರ ಕರ್ಮಪ್ರಕಾರ ಮತ್ತು ಅವರ ಶ್ರದ್ಧೆ ಪ್ರಕಾರ ನಡೆಸುತ್ತಿರುತ್ತದೆ. ಪ್ರಪಂಚ ವಿಷಯಗಳಲ್ಲಿ ಕರ್ಮಪ್ರಕಾರ, ಜ್ಞಾನ ವಿಷಯಗಳಲ್ಲಿ ಶ್ರದ್ಧೆ ಪ್ರಕಾರ ನಡೆಸುತ್ತಿರುತ್ತದೆ. ಪ್ರಪಂಚವೆಲ್ಲಾ ವ್ಯಾಪಿಸಿರುವ ಪರಮಾತ್ಮನಾದ ದೇವರು ಕಾರ್ಯಗಳನ್ನು ಮಾಡದವನಾಗಿ ಇರುವಾಗ, ಶರೀರಗಳಲ್ಲಿ ಎಲ್ಲಕಡೆ ವ್ಯಾಪಿಸಿರುವ ಆತ್ಮ ಜೀವಿಗೆ ಕಾರ್ಯಕರ್ತನಾಗಿದ್ದು ಎಲ್ಲವೇಳೆಯಲ್ಲಿ ಕೆಲಸವನ್ನು ಮಾಡುತ್ತಾ ಜೀವಿಯ ಕರ್ಮಪಾಲನೆಯನ್ನು ಮಾಡುತ್ತಿದ್ದಾನೆ. ಶರೀರದಲ್ಲಿ ಆತ್ಮ ಅಧಿಪತಿ ಯಾಗಿ ಇರುವಾಗ, ಹೊರಗಿನ ಪ್ರಪಂಚದಲ್ಲಿ ಪ್ರಕೃತಿ ಅಧಿಪತಿಯಾಗಿದ್ದು ತನ್ನ ಪಾಲಕರಾದ ಗ್ರಹಗಳು, ಭೂತಗಳಿಂದ ಹೊರಗೆ ನಡೆಯಬೇಕಾದ ಕಾರ್ಯಗಳನ್ನು ಮಾಡಿಸುತ್ತಿದೆ. ಇಲ್ಲಿಯವರೆಗು ಹೇಳಿದ ವಿಷಯಗಳೆಲ್ಲವೂ ಗತದಲ್ಲಿ ಹತ್ತು ದಿನಗಳ ಕೆಳಗೆ ಬಿಡುಗಡೆಯಾದ **"ದೇವರ ಮುದ್ರೆ"** ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಆದರೇ ಈಗ ಓದುವುದರಿಂದ ಇದೆಲ್ಲವೂ ಹೊಸದಾಗಿಯೇ ಇರುತ್ತದೆ ಆದರೆ ಹಳೆ ವಿಷಯಗಳೇಯೆಂದು ತಿಳಿಯಬೇಕು.

ಈಗ **"ಧರ್ಮಚಕ್ರ"**ವನ್ನು ಕುರಿತು ತಿಳಿದುಕೊಳ್ಳೋಣ. ಧರ್ಮ ಎಂದರೆ ಏನೋ ಹೇಗಿರುತ್ತದೋ ಮೊದಲೇ ಗ್ರಂಥ ಪ್ರಾರಂಭದಲ್ಲಿಯೇ ಹೇಳಿ ಕೊಂಡಿದ್ದೇವೆ. "ಚಕ್ರ" ಎಂದರೆ ಏನೊ ಈಗ ತಿಳಿದುಕೊಳ್ಳೋಣ. ಚಕ್ರ ಎಂದರೆ ಎಲ್ಲರಿಗೂ ತಿಳಿದಂತೆ ಉರುಳುವುದೆಂದು ಹೇಳಬಹುದು. ಇಲ್ಲದಿದ್ದರೆ ತಿರುಗುವುದು ಎಂದು ಕೂಡಾ ಹೇಳಬಹುದು. ಧರ್ಮಚಕ್ರದಲ್ಲಿ ಅರ್ಥವೇನು ಇದೆಯೆಂದು ನೋಡಿದರೆ ಧರ್ಮಚಕ್ರದಲ್ಲಿ ಧರ್ಮ ತಿರುಗುತ್ತಿರುತ್ತದೆ. ಚಕ್ರದಲ್ಲಿ ಒಂದುಕಡೆ ಗುರುತನ್ನು ಇಟ್ಟರೆ ಚಕ್ರ ತಿರುಗುವಾಗ ಆ ಗುರುತು ಮೇಲಕ್ಕೆ ಕೆಳಕ್ಕೆ ತಿರುಗುತ್ತಿರುತ್ತದೆ. ಹಾಗೇ ಧರ್ಮಚಕ್ರದಲ್ಲಿ ಧರ್ಮವನ್ನು ಒಂದುಕಡೆ ಗುರುತಿಸಲ್ಪಟ್ಟರೆ ಅದು ಚಕ್ರ ಗಮನದಲ್ಲಿ ಒಂದುಕಡೆ ಇರದೆ ಮೇಲಕ್ಕೆ ಕೆಳಕ್ಕೆ ತಿರುಗುತ್ತಿರುತ್ತದೆ. ಧರ್ಮ ವಿಶ್ವದಲ್ಲಿ ಯಾರಿಗೆ ಇದೆ? ಎನ್ನುವುದು ಮುಖ್ಯವಾದ ಪ್ರಶ್ನೆ. ಸೃಷ್ಠಿ ಆದಿಯಲ್ಲಿರುವ ದೇವರಿಗೆ ಹೊರತು ಸೃಷ್ಠಿ ನಂತರ ಹುಟ್ಟಿದ ಪ್ರತಿಯೊಂದಕ್ಕು ಧರ್ಮವಿದೆ. ಪ್ರಕೃತಿಗೆ ಒಂದು ವಿಧವಾದ ಧರ್ಮ. ಆತ್ಮಗೆ ಒಂದು ವಿಧವಾದ ಧರ್ಮವಿದೆ. ಹಾಗೇ ಜೀವಾತ್ಮಗೆ ಧರ್ಮವಿದೆ. ಜೀವರಾಶಿ ಗಳೆಲ್ಲ ಶರೀರದಲ್ಲಿಯೇ ನಿವಾಸಿಸುತ್ತಿವೆ. ಶರೀರವಿಲ್ಲದ ಜೀವರಾಶಿ ಸಾಮಾನ್ಯವಾಗಿ ಯಾವುದು ಇರುವುದಿಲ್ಲ. ಹುಟ್ಟಿದ ಪ್ರತಿ ಜೀವಿಗೆ ಶರೀರವಿದ್ದೇ ಇರುತ್ತದೆ. ಮರಣಿಸಿದವನಿಗೆ ಶರೀರ ನಶಿಸಿಹೋಗುತ್ತದೆ. ಅಕಾಲ ಮರಣ ಹೊಂದಿದವನಿಗೆ ಶರೀರ ಇರುವುದಿಲ್ಲ. ಮರಣ ಹೊಂದುವವರೆಗು ಶರೀರವಿರುತ್ತದೆ.

ಒಬ್ಬ ಮನುಷ್ಯ ಶರೀರದಲ್ಲಿ ಜೀವಿಸುತ್ತಿರುವಾಗ ಆತನಿಗೆ ಪ್ರಕೃತಿ ಯೊಂದರ ಶರೀರವಿರುತ್ತದೆ. ಹಾಗೇ ಪರಮಾತ್ಮದಿಂದ ದೇವರಾಗಿ ಮಾಡಲ್ಪಟ್ಟ ದೇವರಾದ ಆತ್ಮ ಇರುತ್ತದೆ. ಜೀವಾತ್ಮನಾದವನು ಪ್ರಕೃತಿ ಶರೀರದಲ್ಲಿಯೂ, ಆತ್ಮ ದೇವರೊಂದಿಗೂ ನಿವಾಸ ಮಾಡುತ್ತಿದ್ದಾನೆ. ಅಂತಹ ಜೀವಿಯು ತನಗಿರುವ ಕರ್ಮವನ್ನು ಅನುಭವಿಸುವ ಧರ್ಮವನ್ನು, ಕರ್ಮಯಿಲ್ಲದಿದ್ದರೆ ಮುಕ್ತಿ ಹೊಂದುವ ಧರ್ಮವನ್ನು ತಿಳಿದವನಾಗಿರಬೇಕು. ಆದರೇ ಈದಿನ ಜೀವಿಗೆಂದು ಒಂದು ಧರ್ಮ ಇದೆಯೆಂಬ ಜ್ಞಾಪಕ ಕೂಡಾ ಜೀವಿಗೆ (ಮನುಷ್ಯನಿಗೆ) ಇಲ್ಲ. ತನ್ನ

ಧರ್ಮದ ಮೇಲೆ ಧ್ಯಾಸ ಉಂಟಾದವನು, ತನ್ನನ್ನು ಕುರಿತು ತಾನು ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಈ ದಿನ ತನ್ನ ಧರ್ಮದ ಮೇಲೆ ಧ್ಯಾಸ ಇಲ್ಲದವರೇ ಇದ್ದಾರೆ. ಅಂತಹವನು ತನ್ನನ್ನು ತಾನು ತಿಳಿದುಕೊಳ್ಳುವ ಪ್ರಯತ್ನ ಮಾಡುವುದಿಲ್ಲ.

ತನ್ನ ಧರ್ಮಗಳನ್ನು ಕುರಿತು ತಾನು ತಿಳಿಯದವನು ತನ್ನ ಮೇಲೆ ತನಗೇ ಧ್ಯಾಸ ಇಲ್ಲದವನಾಗಿರುತ್ತಾನೆ. ಅಂತಹವನು ತಾನು ನಿವಾಸಿಸುವ ಪ್ರಕೃತಿ ಧರ್ಮಗಳನ್ನಾಗಲಿ, ತನ್ನನ್ನು ಅಧೀನದಲ್ಲಿ ಇಟ್ಟುಕೊಂಡ ಆತ್ಮ ಧರ್ಮಗಳನ್ನು ಕುರಿತಾಗಲಿ ತಿಳಿಯಬೇಕೆಂದು ಪ್ರಯತ್ನ ಮಾಡುವುದಿಲ್ಲ. ಅಸಲಿಗೆ ತಾನು ಹೊರತು ಆತ್ಮ ಇದೆಯೆಂದಾಗಲಿ, ಪ್ರಕೃತಿ ಇದೆಯೆಂದಾಗಲಿ ತಿಳಿಯದವನಾಗಿ ಮನುಷ್ಯ ಪ್ರಕೃತಿವೊಂದರ, ಆತ್ಮವೊಂದರ ಧರ್ಮಗಳನ್ನು ತಿಳಿಯದಿದ್ದಾನೆ. ತನಗೆಂದೂ ಒಂದು ಧರ್ಮವಿದೆಯೆಂದು ಧ್ಯಾಸವಿಲ್ಲದವರು ಜೀವನವನ್ನು ಪ್ರಾಣಿಯಂತೆ ಏನು ತಿಳಿಯದೇ ಕಳೆಯುತ್ತಿರುತ್ತಾರೆ. ಅಂತಹವರಿಗೆ ಆತ್ಮಜ್ಞಾನ ತಿಳಿಸುವ ಸಲುವಾಗಿ ಆತ್ಮಗೆ ತಂದೆಯಾದ ಪರಮಾತ್ಮ, ನಮಗೆ ತಾತನಾದ ದೇವರು ಮನುಷ್ಯನಿಗೆ ಧರ್ಮಗಳನ್ನು ಗುರುತು ಮಾಡಬೇಕಾಗಿದೆ. ದೇವರ ಧರ್ಮಗಳು ದೇವರಿಗೆ ಹೊರತು ಇತರ ಮನುಷ್ಯರಿಗೆ ಯಾರಿಗೂ ತಿಳಿದಿಲ್ಲ. ಹಾಗೇ ಪ್ರಕೃತಿ ಧರ್ಮಗಳು, ಆತ್ಮ ಧರ್ಮಗಳು, ಜೀವಾತ್ಮ ಧರ್ಮಗಳೆಲ್ಲ ಪರಮಾತ್ಮಗೆ ತಿಳಿದಿದೆ. ಆದ್ದರಿಂದ ನಮಗೆ ತಾತನಾದ ದೇವರು ಹೊರಗಿನ ಪ್ರಪಂಚದಲ್ಲಿ ಮನುಷ್ಯನಂತೆ ಶರೀರ ಧರಿಸಿ ಹುಟ್ಟಿ ಆತ್ಮ ಧರ್ಮಗಳು, ಪರಮಾತ್ಮ ಧರ್ಮಗಳು, ಪ್ರಕೃತಿ ಧರ್ಮಗಳು, ಜೀವಾತ್ಮ ಧರ್ಮಗಳು ಎಲ್ಲವನ್ನು ಶಾಸ್ತ್ರಬದ್ಧವಾಗಿ ತಿಳಿಸುತ್ತಾನೆ. ಆಗ ಪರಮಾತ್ಮನಾದ ದೇವರು, ಯಾವ ಕಾರ್ಯವು ಮಾಡದ ದೇವರು ಸಾಧಾರಣ ಮನುಷ್ಯನಂತೆ ಭೂಮಿಮೇಲೆ ಇದ್ದು, ಧರ್ಮಗಳನ್ನು ತಿಳಿಸುತ್ತಿದ್ದಾನೆಂದು ಯಾರಿಗೂ ತಿಳಿದಿಲ್ಲ.

ಶರೀರದಲ್ಲಿರುವ ಆತ್ಮದೇವರು ಮನುಷ್ಯನನ್ನು ಅವನ ಕರ್ಮಪ್ರಕಾರವೇ ನಡೆಸುತ್ತಿರುತ್ತಾನೆ. ಆತ್ಮ ಶರೀರಕ್ಕೆ ಅಧಿಪತಿಯಾಗಿ, ದೇವರಾಗಿ ಇದ್ದರೂ ತನ್ನ ಸ್ವತಂತ್ರವಾಗಿ ಆತ್ಮ ಪ್ರವರ್ತಿಸದೆ ಜೀವಿಯ ಕರ್ಮವನ್ನು ಅನುಸರಿಸಿ ಅವನಿಗೆ

ಕಷ್ಟ ಸುಖಗಳನ್ನು ಅನುಭವಿಸುವಂತೆ ಮಾಡುವನು. ಹಾಗೇ ಅವನ ಶ್ರದ್ಧೆಯನ್ನನುಸರಿಸಿ ಜ್ಞಾನವನ್ನು ತಿಳಿಸುತ್ತಾನೆ. ಅಜ್ಞಾನದ ಮೇಲೆ ಚಿಂತೆ ಇರುವವನಿಗೆ ಅಜ್ಞಾನವನ್ನೇ ಆತ್ಮನಾದ ದೇವರು ಬೋಧಿಸುತ್ತಾನೆ. ದೇವರಾಗಿದ್ದು ಅಜ್ಞಾನವನ್ನು ಬೋಧಿಸುತ್ತಾನಾ? ಎಂದು ಪ್ರಶ್ನಿಸಿದರೆ ಹೌದೆಂದೇ ಹೇಳಬೇಕು. ಶರೀರದಲ್ಲಿನ ಆತ್ಮ ಅಧಿಪತಿಯಾಗಿ ಜೀವಿಗೆ ಆರಾಧ್ಯ ದೈವವಾಗಿದ್ದು ಮನುಷ್ಯನಿಗೆ ಜ್ಞಾನದ ಅವಶ್ಯಕತೆಯನ್ನು ಅನುಸರಿಸಿ ಅವನಿಗೆ ಜ್ಞಾನವನ್ನು ಕೂಡಾ ಆತ್ಮ ಬೋಧಿಸುತ್ತಿದೆ. ಹಾಗೆ ಮನುಷ್ಯನೊಂದರ ಅಶ್ರದ್ಧೆಯನ್ನನುಸರಿಸಿ ಅವನಿಗೆ ಅಜ್ಞಾನವನ್ನು ಕೂಡಾ ಆತ್ಮ ಬೋಧಿಸುತ್ತಿದೆ. ಹಾಗೆ ನಡೆಯುವುದರಿಂದ ಕಾಲಕ್ರಮದಲ್ಲಿ ಆತ್ಮ ಧರ್ಮಗಳು ಮನುಷ್ಯನಿಗೆ ಪೂರ್ತಿ ತಿಳಿಯದೇ ಹೋಗಿ ಮನುಷ್ಯ ಆತ್ಮವನ್ನು ಪೂರ್ತಿಯಾಗಿ ಮರೆತುಹೋಗುತ್ತಾನೆ. ಆತ್ಮವೆಂದರೇ ಏನೋ ತಿಳಿಯದ ಸ್ಥಿತಿಯಲ್ಲಿ ಇದ್ದುಹೋಗುತ್ತಾನೆ. ಆಗ ದೇವರ ಧರ್ಮಗಳು ಪೂರ್ತಿ ನಶಿಸಿ ಹೋಗಿವೆಯೆಂದು ಅಧರ್ಮಗಳು ಅಭಿವೃದ್ಧಿಯಾಗಿವೆಯೆಂದು ಹೇಳಬಹುದು. ಆತ್ಮಗೆ ಧರ್ಮಗಳು ತಿಳಿದಿದ್ದರೂ ತಾನು ಸ್ವತಃವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಶರೀರದಲ್ಲಿನ ಜೀವಿಯನ್ನನುಸರಿಸಿಯೇ ಆತ್ಮ ಪ್ರವರ್ತನೆ ಇರುತ್ತದೆ. ಅಜ್ಞಾನಿಗೆ ಅಜ್ಞಾನವನ್ನು, ಜ್ಞಾನಿಗೆ ಜ್ಞಾನವನ್ನು ಬೋಧಿಸುವುದು ಆತ್ಮವೊಂದರ ವಿಧಾನ. ಆತ್ಮ ಸ್ವತಃವಾಗಿ ಯಾವುದು ಮಾಡುವುದಿಲ್ಲ. ಮನುಷ್ಯನ ಕರ್ಮವನ್ನು, ಶ್ರದ್ಧೆಯನ್ನು ಅನುಸರಿಸಿಯೇ ಮಾಡುತ್ತಾನೆಂದು ಮೊದಲೇ ಹೇಳಿಕೊಂಡಿದ್ದೇವೆ. ಜೀವಿಯು ಆರಾಧಿಸುವುದಕ್ಕೆ ಆತ್ಮ ಆರಾಧ್ಯ ದೈವವಾಗಿದ್ದರೂ ಮನುಷ್ಯನ ವಿಧಾನವನ್ನನುಸರಿಸಿ ಕಾರ್ಯಕರ್ತನಾಗಿ ಕೆಲಸ ಮಾಡುವುದರಿಂದ ಮನುಷ್ಯ ಕರ್ಮವನ್ನು, ಶ್ರದ್ಧೆಯನ್ನನುಸರಿಸಿ ಆತ್ಮ ಕೆಲಸ ಮಾಡಬೇಕಾಗಿದೆ. ಆದ್ದರಿಂದ ಆತ್ಮ ತನ್ನ ಧರ್ಮಗಳನ್ನು ಕೂಡಾ ತನ್ನ ಇಷ್ಟದ ಪ್ರಕಾರ ಬೋಧಿಸುವುದಿಲ್ಲ. ಆತ್ಮ ಧರ್ಮಗಳಿಗೆ ಮುಪ್ಪು ಏರ್ಪಟ್ಟಾಗ, ಅಧರ್ಮಗಳು ಹೆಚ್ಚಾದಾಗ ಪರಮಾತ್ಮ ತನಗೆ ಸಂಬಂಧವಿಲ್ಲದೆ ದೂರವಾಗಿದ್ದರೂ, ತನ್ನ ಪ್ರತಿನಿಧಿ ಮೂಲಕ ಆತ್ಮ ಧರ್ಮಗಳನ್ನು ಪುನಃ ಭೂಮಿಮೇಲೆ ಮನುಷ್ಯರಿಗೆ ತಿಳಿಯುವಂತೆ ಮಾಡುತ್ತಾನೆ. ಆಗ ಆತ್ಮ ಧರ್ಮಗಳು ಮನುಷ್ಯರಿಗೆ ತಿಳಿಯುತ್ತವೆ. ಹೀಗೆ ಕಾಲಗಮನದಲ್ಲಿ

ಧರ್ಮಗಳ ಸಾಂಧ್ರತೆ ಕಡಿಮೆಯಾಗುವುದು, ಪರಮಾತ್ಮ ಜೋಕ್ಯದ ಮೂಲಕ ಪುನಃ ಹೆಚ್ಚಾಗುವುದು ನಡೆಯುತ್ತಿರುತ್ತದೆ. ಈ ವಿಧವಾಗಿ ಧರ್ಮಗಳು ಆರೋಹಣ, ಅವರೋಹಣ ಇರುವುದರಿಂದ, ಚಕ್ರದಂತೆ ಧರ್ಮಗಳು ಅಧರ್ಮಗಳಾಗಿ, ಅಧರ್ಮಗಳು ಪುನಃ ಧರ್ಮಗಳಾಗಿ ಭೂಮಿಮೇಲೆ ಬದಲಾಗುತ್ತಿರುವುದರಿಂದ ಈ ವಿಧಾನವನ್ನು **"ಧರ್ಮಚಕ್ರ"** ಎಂದು ಕರೆದಿದ್ದಾರೆ.

ಚಕ್ರ ಎಂದರೇ ಕೆಳಗಿನದ್ದು ಮೇಲಕ್ಕೆ, ಮೇಲಿನದ್ದು ಕೆಳಕ್ಕೆ ತಿರುಗುತ್ತಿರುತ್ತದೆಂದು, ಧರ್ಮಗಳು ಹೆಚ್ಚಾಗುವುದು ಕಡಿಮೆಯಾಗುವುದು ಇರುವುದರಿಂದ ಧರ್ಮಚಕ್ರ ಎಂದು ಕರೆದಿದ್ದಾರೆ. ಧರ್ಮಗಳು ಇರುವ ದೇವರು ಶರೀರದಲ್ಲಿದ್ದಾನೆ. ಧರ್ಮಗಳಿರುವ ದೇವರು ಶರೀರದಲ್ಲಿರುವ ದೇವರೇಯೆಂದು ಹೇಳಿದ್ದೇವೆ. ಮನುಷ್ಯ ತಿಳಿದುಕೊಳ್ಳಬೇಕಾದ ದೇವರು, ಆರಾಧಿಸಬೇಕಾದ ದೇವರು ಶರೀರದಲ್ಲಿನ ಆತ್ಮವನ್ನೇಯೆಂದು ದೈವಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ತಿಳಿದುಕೊಳ್ಳಬೇಕಾದ ಜೀವಿಯು ಶರೀರದಲ್ಲಿಯೇ ಇದ್ದಾನೆ. ತಿಳಿಯಬೇಕಾದ ದೇವರು ಶರೀರದಲ್ಲಿಯೇ ಇದ್ದಾನೆ. ತಿಳಿಯಬೇಕಾದ ಧರ್ಮಗಳು ಆತ್ಮದ ಹತ್ತಿರವೇ ಇವೆ. ತಿಳಿದುಕೊಳ್ಳಬೇಕಾದ ಜೀವಿಯು, ತಿಳಿಯಲ್ಪಡುವ ದೇವರು, ತಿಳಿಯಬೇಕಾದ ಧರ್ಮಗಳು ಮೂವರು ಶರೀರದಲ್ಲಿಯೇ ಇರುವುದರಿಂದ ಧರ್ಮಗಳ ಅವರೋಹಣ, ಆರೋಹಣ ಎರಡೂ ದೇಹದಲ್ಲಿಯೇ ನಡೆಯುತ್ತಿರು ವಾಗ ಧರ್ಮಚಕ್ರ ಶರೀರದಲ್ಲಿಯೇ ಇದೆಯೆಂದು ತಿಳಿಯುತ್ತಿದೆ. ಶರೀರ ದೊಳಗಿರುವ ಧರ್ಮಚಕ್ರವನ್ನು ಸೂಚನೆ ನಿಮಿತ್ತ ಬರೆದಿದ್ದೇವೆ ನೋಡಿರಿ. ಈ ಆಕಾರ ಎಲ್ಲಿಯೂ ಇಲ್ಲ. ಆದರೂ ನೀವು ಅರ್ಥ ಮಾಡಿಕೊಳ್ಳುವುದಕ್ಕೆ ಶರೀರ ವನ್ನು ಚಕ್ರವಾಗಿ ತೋರಿಸಿ ಅದರಲ್ಲಿಯೇ ಆತ್ಮ, ಪರಮಾತ್ಮ, ಧರ್ಮ ಅಧರ್ಮಗಳು, ಗುಣಗಳು, ಶರೀರ ಭಾಗಗಳು ಕೊನೆಗೆ ಜೀವಾತ್ಮವನ್ನು ತೋರಿಸುವು ದಾಗಿದೆ. ಇದು ತಿಳಿಯುವುದಕ್ಕೆ ದೃಶ್ಯರೂಪವೇ ಹೊರತು ವಾಸ್ತವವಾಗಿಲ್ಲ. ಧರ್ಮಚಕ್ರವನ್ನು ನಂತರ ಪೇಜಿ ಪುಟದಲ್ಲಿ ನೋಡಬಹುದು.




# ಧರ್ಮಚಕ್ರ

ಮನುಷ್ಯರಲ್ಲಿಯೇ ದೇವರ ಧರ್ಮಗಳು ತಿಳಿಯುವುದು, ತಿಳಿಯದೆ ಹೋಗುವುದು ನಡೆಯುತ್ತಿದೆ. ಮನುಷ್ಯನ ಶರೀರದಲ್ಲಿರುವ ವಿಧಾನವನ್ನು ಉದಾಹರಣೆ ನಿಮಿತ್ತ ಚಿತ್ರಪಟವಾಗಿ ತೋರಿಸಿಕೊಂಡಿದ್ದೇವೆ. ಚಕ್ರ ಯಾವುದಾದರೂ ತಿರುಗುತ್ತಿರುತ್ತದೆ ಅಥವಾ ಉರುಳುತ್ತಿರುತ್ತದೆ. ಚಕ್ರ ತಿರುಗುವುದಕ್ಕೆ ಏನಾದರೂ ಶಕ್ತಿ ಉಪಯೋಗಿಪಡಬೇಕಾಗಿದೆ. ನಮಗೆ ಕಾಣಿಸುವ ಚಕ್ರಗಳನ್ನು ತ್ರಿರುಗಿಸುವುದಕ್ಕೆ ಯಂತ್ರಶಕ್ತಿ ಅಥವಾ ಶರೀರ ಬಲವೊ ಉಪಯೋಗ ಪಡಬೇಕಾಗಿದೆ. ರಿಕ್ಷಾ ಚಕ್ರ ತಿರುಗುವುದಕ್ಕೆ ಮನುಷ್ಯನ ಶಕ್ತಿ, ಎತ್ತಿನಗಾಡಿಯ ಚಕ್ರ ತಿರುಗುವುದಕ್ಕೆ ಎತ್ತುಗಳ ಬಲ, ಹಿಟ್ಟಿನಮಿಷನ್ ಚಕ್ರ ತಿರುಗುವುದಕ್ಕೆ

ಮೋಟಾರ್‌ನಲ್ಲಿನ ವಿದ್ಯುತ್‌ಶ್ಶಕ್ತಿ ಉಪಯೋಗಪಡುತ್ತಿದೆ. ಹಾಗೇ ಧರ್ಮಚಕ್ರ ತಿರುಗುವುದಕ್ಕೆ ಪರಮಾತ್ಮಶಕ್ತಿ ಉಪಯೋಗಪಡುತ್ತಿದೆ. ಆತ್ಮ ಧರ್ಮಗಳು ಯಾವಾಗ ಭೂಮಿಮೇಲೆ ತಳಸೇರಿ ಹೋಗುತ್ತವೊ ಅಂದರೇ ದೈವ ಧರ್ಮಗಳು ಯಾವಾಗ ಮನುಷ್ಯರಿಗೆ ತಿಳಿಯದೆಹೋಗಿ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ಬಂದು ಸೇರುತ್ತವೊ ಆಗ ಪುನಃ ಧರ್ಮ ಪ್ರತಿಷ್ಠಾಪನೆ ಸಲುವಾಗಿ ಪರಮಾತ್ಮ ಶಕ್ತಿ ಉಪಯೋಗಪಟ್ಟರೆ ಅಧರ್ಮಗಳು ಚಕ್ರದಲ್ಲಿ ತಿರುಗಿ ಧರ್ಮಗಳು ಬರುತ್ತವೆ.

**ಪ್ರಶ್ನೆ :– ಧರ್ಮಚಕ್ರದಲ್ಲಿ ಅಂದರೇ ಮನುಷ್ಯರಲ್ಲಿ ಅಧರ್ಮಗಳು ಹೋಗಿ ಧರ್ಮಗಳು ಬರುವುದಕ್ಕೆ ಪರಮಾತ್ಮಶಕ್ತಿ ಉಪಯೋಗಪಡುವುದರಿಂದ ಅಧರ್ಮಗಳು ಹೋಗಿ ಧರ್ಮಗಳು ಮನುಷ್ಯರಲ್ಲಿ ಕಾಣಿಸುತ್ತಿವೆ. ಅಧರ್ಮಗಳು ಹೋಗುವುದಕ್ಕೆ ಧರ್ಮಗಳು ಬರುವುದಕ್ಕೆ ತಾತನಾದ ಪರಮಾತ್ಮ ಶಕ್ತಿ ಉಪಯೋಗಪಟ್ಟಾಗ ಧರ್ಮಗಳು ಹೋಗಿ ಅಧರ್ಮಗಳು ಬರುವುದಕ್ಕೆ ಕೂಡಾ ಧರ್ಮಚಕ್ರ ತಿರುಗಬೇಕಾಗಿದೆ. ಆಗ ಯಾರಶಕ್ತಿ ಉಪಯೋಗಪಡುವುದರಿಂದ ಅಧರ್ಮಗಳು ಪುನಃ ಬಂದಿವೆ ಎನ್ನುವ ಪ್ರಶ್ನೆ ಬರುತ್ತಿದೆ? ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಧರ್ಮಗಳು ಅಧರ್ಮಗಳು ಚಕ್ರದಂತೆ ತಿರುಗುತ್ತಿವೆಯೆಂದು ಹೇಳುವುದಕ್ಕೆ ಭಗವದ್ಗೀತೆ ಜ್ಞಾನಯೋಗದಲ್ಲಿ ಎಂಟನೆಯ ಶ್ಲೋಕ ಆಧಾರವಾಗಿದೆ. ಆ ಶ್ಲೋಕದಲ್ಲಿ **"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"** ಎಂದು ಹೇಳಿರುವುದರಿಂದ ಧರ್ಮ ಸಂಸ್ಥಾಪನೆ ನಿಮಿತ್ತ ನಾನು ಯುಗಯುಗ ದಲ್ಲಿಯೂ ಅವತರಿಸಬೇಕಾಗಿ ಬರುತ್ತಿದೆ ಎಂದು ಸ್ವತಃ ಪರಮಾತ್ಮನೇ ಎಂದಂತೆ ಇದೆ. ಪ್ರತಿ ಯುಗದಲ್ಲಿಯೂ ಅಷ್ಟೋ ಇಷ್ಟೋ ಅಧರ್ಮಗಳು ಬರುತ್ತಿವೆ, ಧರ್ಮಗಳು ಹೋಗುತ್ತಿವೆ. ಹೋದ ಧರ್ಮಗಳನ್ನು ಪುನಃ ತರುವುದಕ್ಕೆ ಬಂದಿರುವ ಅಧರ್ಮಗಳು ಇಲ್ಲದಂತೆ ಮಾಡುವುದಕ್ಕೆ ಸೃಷ್ಠಿ ಆದಿಯಲ್ಲಿನ ದೇವರು ಸಂಭವಿಸಬೇಕಾಗಿ ಬರುತ್ತಿದೆಯೆಂದು ಶ್ಲೋಕದಲ್ಲಿ ಹೇಳಿದ್ದಾರೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಏಳು, ಎಂಟು ಶ್ಲೋಕಗಳಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 7. ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ॥**
**ಅಭ್ಯುತ್ಥಾನಮಧರ್ಮಸ್ಯ ತದಾ ತ್ಮಾನಂ ಸೃಜಾಮ್ಯಹಮ್॥**

**ಶ್ಲೋ॥ 8. ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚದುಷ್ಕೃತಾಮ್।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥**

**ಭಾವಾರ್ಥ :– "ಭೂಮಿಮೇಲೆ ಯಾವಾಗ ಧರ್ಮಗಳಿಗೆ ಗ್ಲಾನಿ ಉಂಟಾಗಿ ಅಧರ್ಮಗಳು ವೃದ್ಧಿ ಹೊಂದುತ್ತವೋ ಆಗ ನಾನು ಭೂಮಿಮೇಲೆ ಅವತರಿಸಬೇಕಾಗಿ ಬರುತ್ತಿದೆ."**

**ಭಾವಾರ್ಥ :– "ಒಳ್ಳೆಯವರನ್ನು ಅಭಿವೃದ್ಧಿ ಮಾಡುವುದಕ್ಕೆ ದುಷ್ಟ ಜನರನ್ನು ಇಲ್ಲದಂತೆ ಮಾಡುವುದಕ್ಕೆ ಸಕಲ ಧರ್ಮಗಳನ್ನು ಸಂಸ್ಥಾಪನೆ ಮಾಡುವುದಕ್ಕೆ ಪ್ರತಿ ಯುಗ ಆದರೂ, ಯಾವ ಯುಗದಲ್ಲಿ ಆದರೂ ಉದ್ಭವಿಸುತ್ತಿರುತ್ತಾನೆ."**

ಈ ವಿಧವಾಗಿ ಧರ್ಮ ಅಧರ್ಮಗಳ ವಿಷಯವಾಗಿ ಪರಮಾತ್ಮ ಸೃಷ್ಠಿ ಆದಿಯಲ್ಲಿಯೇ ಈ ವಿಷಯವನ್ನು ಹೇಳಿದ್ದಾನೆ. ಇದನ್ನು ಪರಮಾತ್ಮ ದೇವರು ಧರ್ಮಗಳನ್ನು ತಿಳಿಸಿದರೆ ತಿಳಿಯುತ್ತಿರುವಾಗ ಅಧರ್ಮಗಳನ್ನು ಯಾರು ಹೇಳಿದರೆ ಮನುಷ್ಯರ ಮಧ್ಯದೊಳಗೆ ಬರುತ್ತಿವೆ? ಧರ್ಮಚಕ್ರ ತಿರುಗಿ ಧರ್ಮಗಳು ತೆರೆಮೇಲೆ ಬರುವುದಕ್ಕೆ ಪರಮಾತ್ಮ ಶಕ್ತಿ ಉಪಯೋಗಪಟ್ಟಿದೆ. ಅದೇ ವಿಧವಾಗಿ ಧರ್ಮಚಕ್ರ ತಿರುಗಿ ಅಧರ್ಮಗಳು ತೆರೆಮೇಲಕ್ಕೆ ಬರುವುದಕ್ಕೆ ಯಾರಶಕ್ತಿ ಉಪಯೋಗಪಟ್ಟಿದೆ ಎಂದು ಕೆಲವರ ಪ್ರಶ್ನೆಯಾಗಿದೆ. ಆದರೇ ಈ ವಿಷಯವಾಗಿ ಮೊದಲೇ ನಾವು ಉತ್ತರ ಹೇಳಿದ್ದೇವೆ. ಈಗ ಮತ್ತೊಂದುಸಲ ಹೇಳುತ್ತೇವೆ ನೋಡಿರಿ.

ಪರಮಾತ್ಮ ತನ್ನ ಆತ್ಮವನ್ನು ದೇವರಾಗಿ ನೇಮಿಸಿ ಜೀವಿಯನ್ನು ಪಾಲಿಸುವುದಕ್ಕೆ ಶರೀರದಲ್ಲಿಯೇ ಇಟ್ಟಿದ್ದಾನೆ. ಶರೀರದಲ್ಲಿನ ಜೀವಿಗೆ ದೇವರು ಮತ್ತು ಆರಾಧ್ಯದೈವ ಶರೀರದಲ್ಲಿನ ದೇವರೇಯೆಂದು ಹೇಳಿಕೊಂಡಿದ್ದೇವೆ.

ಶರೀರದಲ್ಲಿನ ಜೀವಿಯ ಕರ್ಮವನ್ನನುಸರಿಸಿ ಕಷ್ಟಸುಖಗಳು, ಭಾವನೆಯನ್ನನು ಸರಿಸಿ ಪಾಪಪುಣ್ಯಗಳು, ಅಜ್ಞಾನವನ್ನನುಸರಿಸಿ ಅಧರ್ಮಗಳು ಉಂಟುಮಾಡುವ ವನು ಶರೀರದಲ್ಲಿನ ದೇವರೇಯೆಂದು ಹೇಳಿದ್ದೇವೆ. ಇದನ್ನನುಸರಿಸಿ ಮನುಷ್ಯನಿಗೆ ಲಭಿಸುವುದು ಏನಾದರೂ ಮತ್ತೊಂದರ ಆಧಾರದಿಂದಲೇ ಎಂದು ತಿಳಿಯುತ್ತಿದೆ. ಕಷ್ಟಸುಖಗಳಿಗೆ ಕರ್ಮ ಕಾರಣವಾಗಿದ್ದು, ಪಾಪ ಪುಣ್ಯಗಳಿಗೆ ಭಾವನೆ ಕಾರಣ ವಾಗಿದ್ದು, ಧರ್ಮ ಅಧರ್ಮಗಳಿಗೆ ಮನುಷ್ಯನಲ್ಲಿನ ಜ್ಞಾನ ಅಜ್ಞಾನಗಳ ಶ್ರದ್ಧೆ ಕಾರಣವೆಂದು ತಿಳಿಯುತ್ತಿದೆ. ಕರ್ಮ ಪರಿಮಿತಿಯನ್ನನುಸರಿಸಿ ಸ್ವಲ್ಪವೂ ಕೂಡಾ ಹೆಚ್ಚು ಕಡಿಮೆ ಆಗದಂತೆ ಖಚಿತವಾದ ಅಳತೆ ಪ್ರಕಾರ ಕಷ್ಟ ಸುಖ ಅನುಭವಗಳು ಬರುತ್ತಿರುತ್ತವೆ. ಕರ್ಮಪ್ರಕಾರ ಯಾವುದು ಯಾವಾಗ ನಡೆಯಬೇಕಾಗಿರುತ್ತದೊ ಆಗಲೇ ನಡೆಯುವಂತೆ ಶರೀರದಲ್ಲಿನ ದೇವರು ಮಾಡುತ್ತಿದ್ದಾನೆ. ಇದರ ನಿರೂಪಣೆ ನಿಮಿತ್ತ ನೋಡಿದರೆ ದ್ವಿತೀಯ ದೈವ ಗ್ರಂಥ ಇಂಜೀಲು (ಬೈಬಲ್) ನಲ್ಲಿ ಲೂಕಾ ಸುವಾರ್ತೆ 12ನೇ ಅಧ್ಯಾಯದಲ್ಲಿ ಏಳನೆ ವಚನದಲ್ಲಿ ಹೀಗೆ ಇದೆ ನೋಡಿರಿ. **(ಲೂಕಾ 12–7) "ನಿಮ್ಮ ತಲೆಕೂದಲೆಲ್ಲವೂ ಲೆಕ್ಕಿಸಲ್ಪಟ್ಟಿವೆ ಭಯಪಡಬೇಡಿ."**

ಈ ವಾಕ್ಯವನ್ನು ಅನುಸರಿಸಿ ಕರ್ಮ ವಿಷಯದಲ್ಲಿ ದೇವರು ಬಹಳ ಸುನ್ನಿತವಾದ ದೃಷ್ಟಿಯಿಂದ ಇದ್ದಾನೆಂದು ಯಾವಾಗ ಕರ್ಮಪ್ರಕಾರ ತಲೆಯಲ್ಲಿನ ಕೂದಲು ಉದರಿಹೋಗಬೇಕೊ ಆಗ ಅದನ್ನು ಉದರಿಹೋಗುವಂತೆ ದೇವರು ಮಾಡುತ್ತಿದ್ದಾನೆ. ಹೀಗೆ ಕರ್ಮಗಳನ್ನು ಖಚಿತವಾದ ಅಳತೆಗಳಿಂದ ಪಾಲಿಸುವುದು, ಜಾರಿ ಮಾಡುವುದು ಮಾಡುತ್ತಿದ್ದಾನೆ. ಕರ್ಮಗಳ ವಿಷಯದಲ್ಲಿ ಯಾವುದೆ ತಡವಿಲ್ಲದೆ ಆಗಿಂದಾಗಲೆ ನಡೆಯುವಂತೆ ಮಾಡುತ್ತಿದ್ದಾನೆ. ಕರ್ಮಗಳ ವಿಷಯದಲ್ಲಿ ದೇವರು (ಆತ್ಮ) ಎಷ್ಟು ಜಾಗ್ರತೆ ಹೊಂದಿದ್ದಾನೊ ಹಾಗೇ ಭಾವನೆಯ ವಿಷಯದಲ್ಲಿ ಪಾಪ ಪುಣ್ಯಗಳನ್ನು ಅಂಟಿಸುವುದರಲ್ಲಾಗಲಿ, ಶ್ರದ್ಧೆ ವಿಷಯದಲ್ಲಿ ಜ್ಞಾನ ಅಜ್ಞಾನಗಳು ಉಂಟಾಗುವುದಕ್ಕೆ ಧರ್ಮ ಅಧರ್ಮಗಳು ಉಂಟುಮಾಡುವು ದರಲ್ಲಿಯೂ ತಡ ಮಾಡದೆ ಕೆಲಸವನ್ನು ಮಾಡುತ್ತಿದ್ದಾನೆ. ನೀವು ಕೇಳಿದಂತೆ

ಅಧರ್ಮಗಳು ಉಂಟಾಗುವುದಕ್ಕೆ ಕೂಡಾ ಶರೀರದಲ್ಲಿನ ದೇವರೇ ಕಾರಣವೆಂದು ಹೇಳಬಹುದು. ದೇವರು ಆಗಿರುವುದಕ್ಕೆ ಧರ್ಮಗಳು ಉಂಟುಮಾಡಬೇಕೆಂದು ನೀವು ಅಂದುಕೊಳ್ಳಬಹುದು. ಆದರೇ ಶರೀರದಲ್ಲಿ ದೇವರು ಪರಮಾತ್ಮನಿಂದ ನೇಮಿಸಲ್ಪಟ್ಟ ದೇವರು ಮನುಷ್ಯರು ಆರಾಧಿಸುವುದಕ್ಕೆ ಈತನು ದೇವರಾಗಿದ್ದಾನೆ. ಮನುಷ್ಯರನ್ನು ಪಾಲಿಸುವುದಕ್ಕೆ ಕಾರ್ಯಕರ್ತನಾಗಿ ಎಲ್ಲವೇಳೆಯಲ್ಲಿ ಕೆಲಸವನ್ನು ಮಾಡುವವನಾಗಿ ಇದ್ದಾನೆ. ಮನುಷ್ಯರ ಆರಾಧನೆ ವಿಷಯದಲ್ಲಿ ಆತ್ಮವೇ ನಿಜವಾದ ಆರಾಧಕನು, ಹಾಗೇ ಶರೀರ ಪಾಲನೆಯಲ್ಲಿ ಖಚಿತವಾದ ಪರಿಪಾಲ ಕನು. ಒಂದು ಸೆಕೆಂಡುಕಾಲ ಕೂಡಾ ಸುಮ್ಮನಿರದೆ ಕೆಲಸ ಮಾಡುತ್ತಿದ್ದಾನೆ. ಪರಮಾತ್ಮ ಮನುಷ್ಯರ ಆರಾಧನೆ ನಿಮಿತ್ತ ಆತ್ಮವನ್ನು ದೇವರಾಗಿ ನೇಮಿಸಿದಾಗ ಮನುಷ್ಯನ ಭಕ್ತಿ ಭಾವನೆಯನ್ನು ದೇವರಾದ ಆತ್ಮ ಎಲ್ಲಾ ಕೋನಗಳಲ್ಲಿ ನೋಡುತ್ತಿದ್ದಾನೆ. ಮನುಷ್ಯನ ಶ್ರದ್ಧೆಯನ್ನನುಸರಿಸಿ ಆತನಿಗೆ ಜ್ಞಾನವನ್ನು ತಿಳಿಸಬೇಕೊ ಅಥವಾ ಅಜ್ಞಾನವನ್ನು ತಿಳಿಸಬೇಕೊ ದೇವರಾದ ಆತ್ಮ ನಿರ್ಣಯಿಸುತ್ತದೆ. ಖಚಿತವಾದ ಲೆಕ್ಕ ಪ್ರಕಾರ ಆ ಮನುಷ್ಯನನ್ನು ಅಜ್ಞಾನದೊಳಗೊ, ಜ್ಞಾನದೊಳಗೊ ನಡೆಸುತ್ತಿದೆ. ಶರೀರದಲ್ಲಿ ದೇವರಾಗಿರುವ ಆತ್ಮ ತನ್ನ ದೇವರ ಪಾತ್ರವನ್ನು ಸಮರ್ಥವಂತವಾಗಿ ನಿರ್ವಹಿಸುತ್ತಿದೆ. ಮನುಷ್ಯನ ಕೋರಿಕೆಗಳನ್ನನು ಸರಿಸಿ, ಅವನ ಕರ್ಮವನ್ನನುಸರಿಸಿ, ಅವನ ಜ್ಞಾನವನ್ನು ಅನುಸರಿಸಿ ಆತ್ಮ ಕರ್ಮವನ್ನು ಕ್ಷಮಿಸಲೂಬಹುದು ಇಲ್ಲವೆ ಮೂಟೆಕಟ್ಟಲೂ ಬಹುದು. ಕರ್ಮವನ್ನು ಅನುಭವಿಸುವಂತೆ ಮಾಡುವುದರಲ್ಲಿ ಕಠಿಣಾತಿಕಠಿಣವಾಗಿ ವ್ಯವಹರಿಸಿ ಅನುಭವಿಸುವಂತೆ ಮಾಡುವನು. ಆತ್ಮಗೆ ಯಾವುದೆ ದಯೆ ದಾಕ್ಷಿಣ್ಯವಿಲ್ಲ. ಜ್ಞಾನ ಇರುವವನ ಜ್ಞಾನ ಸಾಂದ್ರತೆಯನ್ನನುಸರಿಸಿ, ಜ್ಞಾನಶಕ್ತಿಯನ್ನು ಅನುಸರಿಸಿ ಅವನ ಕರ್ಮಗಳನ್ನು ದಹಿಸಿಹಾಕುವುದು ಕೂಡಾ ಆತ್ಮವೇ. ಶರೀರದಲ್ಲಿ ಕರ್ಮಗಳನ್ನು (ಪಾಪಗಳನ್ನು) ಅನುಭಸುವಂತೆ ಮಾಡುವುದರಲ್ಲಿ ಯಮಧರ್ಮ ರಾಜನಾಗಿ ಇದ್ದಾನೆ. ಆದ್ದರಿಂದ ಭಗವದ್ಗೀತೆ ವಿಭೂತಿಯೋಗದಲ್ಲಿ 29ನೇ ಶ್ಲೋಕದ ಕೊನೆಯಲ್ಲಿ **"ಯಮಸ್ಸಂ ಯಮತಾ ಮಹಮ್"** ಎಂದಿದ್ದಾನೆ.

ದೇವರನ್ನು, ದೇವರ ಜ್ಞಾನವನ್ನು ಎಂದರೇ ಆತ್ಮವನ್ನು, ಆತ್ಮಜ್ಞಾನವನ್ನು ಯಾವ ವಿಧವಾಗಿ ಅಜ್ಞಾನದಿಂದ ಅವನು ನಂಬದಿರುವಾಗ, ದೇವರನ್ನು ಆರಾಧಿಸದಿದ್ದಾಗ ಅವನನ್ನು ಅಜ್ಞಾನ ಮಾರ್ಗದಲ್ಲಿಯೇ, ಅಧರ್ಮದಲ್ಲಿಯೇ ಹೋಗುವಂತೆ ಒಳಗೆ ದೇವರೇ ಮಾಡುತ್ತಿದ್ದಾನೆ. ಅದೇ ವಿಷಯವನ್ನೇ ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸುರಾ 6, ಆಯತ್ 110, 111ರಲ್ಲಿ ಈ ವಿಧವಾಗಿ ಹೇಳಿದ್ದಾನೆ ನೋಡಿರಿ.

**(6–110) "ಮೊದಲಸಲ ಯಾವ ವಿಧವಾಗಿಯಾದರೆ ಇವರು ಇದನ್ನು ವಿಶ್ವಾಸಿಸಲಿಲ್ಲವೊ ಅದೇ ವಿಧವಾಗಿ ನಾವು ಕೂಡಾ ಅವರ ಹೃದಯಗ ಳನ್ನು, ಅವರ ದೃಷ್ಠಿಗಳನ್ನು ತಿರುವಿ ಹಾಕೋಣ. ಅವರನ್ನು ಅವರ ತಲೆಬಿರುಸುತನದಲ್ಲಿಯೇ ದೇವರ ಮಾರ್ಗ ಬಿಟ್ಟು ದೂರವಾಗಿ ತಿರುಗು ವಂತೆ ಮಾಡುತ್ತಿದ್ದೇವೆ."**

**(6–111) "ನಾವು ಅವರ ಹತ್ತಿರಕ್ಕೆ ದೂತರನ್ನು ಕಳುಸಿದರೂ, ಮೃತರು ಅವರೊಂದಿಗೆ ಮಾತನಾಡಿ ಇದು ಒಳ್ಳೆಯಮಾರ್ಗ, ಇದು ಕೆಟ್ಟಮಾರ್ಗ, ಇದು ದೇವರ ಮಾರ್ಗ, ಇದು ಮಾಯ ಮಾರ್ಗ ಎಂದು ಹೇಳಿದರೂ, ಸಮಸ್ತ ವಸ್ತುಗಳನ್ನು, ಸಮಸ್ತ ಜ್ಞಾನವನ್ನು ಅವರ ಮುಂದೆ ತಂದಿಟ್ಟರೂ ಅವರು ವಿಶ್ವಾಸಿಸುವುದು ಮಾಯಾ ಜ್ಞಾನವನ್ನೇ, ಅವರು ದೇವರ ಜ್ಞಾನವನ್ನು ವಿಶ್ವಾಸಿಸುವುದಿಲ್ಲ."**

ಇಲ್ಲಿ 110ನೇ ವಾಕ್ಯದಲ್ಲಿ "ಮೊದಲು ಯಾರಾದರೆ ದೇವರನ್ನು, ದೇವರ ಜ್ಞಾನವನ್ನು ಸಕ್ರಮವಾದ ಮಾರ್ಗದಲ್ಲಿ ಶ್ರದ್ಧೆಹೊಂದಿ ನಂಬುವುದಿಲ್ಲವೊ, ಹಾಗೆ ಶ್ರದ್ಧೆಯಿಲ್ಲದವನನ್ನು ಅವನ ಅಭಿಷ್ಟದ ಮೇರೆಗೆ ನಾನು ಕೂಡಾ ಅವನ ಅಂತರಂಗದಲ್ಲಿಯೇ ಅವನ ದೃಷ್ಠಿಯನ್ನು ಅಧರ್ಮಗಳ ಕಡೆ ತಿರುಗುಸುತ್ತೇನೆ. ಅವನನ್ನು ಜ್ಞಾನಮಾರ್ಗವನ್ನು ಬಿಟ್ಟು ಅಜ್ಞಾನ ಮಾರ್ಗದಲ್ಲಿ ಹೋಗುವಂತೆ

ಮಾಡುತ್ತೇನೆಂದು" ಹೇಳಿದ್ದಾನೆ. ಶರೀರದಲ್ಲಿನ ದೇವರು ಮನುಷ್ಯನನ್ನು ಒಂದುಸಲ ಅಜ್ಞಾನದಲ್ಲಿಯೇ ಇದ್ದು ಅಧರ್ಮಗಳಲ್ಲಿಯೇ ಹೋಗುವಂತೆ ಮಾಡಿದಾಗ ಅವನಿಗೆ ದೇವದೂತರಾಗಲಿ, ಮರಣಿಸಿದವರು ಬಂದಾದರೂ ಇದು ಒಳ್ಳೆಯದು, ಇದು ಕೆಟ್ಟದು, ಇದು ದೇವರು, ಇದು ಮಾಯೆ, ಇದು ಧರ್ಮ, ಇದು ಅಧರ್ಮ ಎಂದು ಹೇಳಿದರೂ ಅವನು ಅಜ್ಞಾನವನ್ನೇ ಆಶ್ರಯಿಸುತ್ತಾನೆ. ಈ ವಿಧವಾಗಿ ಖುರ್‌ಆನ್‌ನಲ್ಲಿ ಹೇಳಿರುವುದನ್ನು ಅನುಸರಿಸಿ ಶರೀರದಲ್ಲಿನ ದೇವರೇ ಮನುಷ್ಯನನ್ನು ಅವನ ಇಷ್ಟವನ್ನನುಸರಿಸಿ ಯಾವ ದಾರಿಯಲ್ಲಿ ಕಳುಹಿಸಬೇಕೊ ಆ ದಾರಿಯಲ್ಲಿಯೇ ಕಳುಹಿಸುತ್ತಾನೆಂದು ತಿಳಿಯುತ್ತಿದೆ. ಹಾಗೆ ಮಾನವನನ್ನು ಒಳ್ಳೆಯ ಮಾರ್ಗದಲ್ಲಿ ಆದರೂ, ಕೆಟ್ಟ ಮಾರ್ಗದಲ್ಲಿ ಆದರೂ ಕಳುಹಿಸುವವನು ದೇವರೇಯೆಂದು ತಿಳಿದುಹೋಗಿದೆ. ಶರೀರದಲ್ಲಿನ ದೇವರು ಅವನ ಇಷ್ಟಾಯಿಷ್ಟವನ್ನನುಸರಿಸಿ ಕೆಟ್ಟದು ಇಲ್ಲವೆ ಒಳ್ಳೆಯ ಮಾರ್ಗದಲ್ಲಿ ಕಳಿಸುವ ಅಧಿಕಾರ ಇರುವವನಾಗಿದ್ದಾನೆ. ಅಜ್ಞಾನದ ದೃಷ್ಟಿ, ಅಜ್ಞಾನದ ಭಾವನೆ, ಅಜ್ಞಾನದ ಮೇಲೆ ಇಷ್ಟ ಇರುವವನನ್ನು ಅಜ್ಞಾನ ಮಾರ್ಗದಲ್ಲಿಯೇ ಕಳುಹಿಸುವುದಕ್ಕೆ ಅವನಿಗೆ ಅಧರ್ಮಗಳನ್ನು ದೇವರೇ ತಂದಿಡುತ್ತಿದ್ದಾನೆ. ಆಗ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳಿದ್ದು ಹೋಗುತ್ತಿವೆ. ಅಧರ್ಮಗಳನ್ನು ಮನುಷ್ಯನ ಅಜ್ಞಾನ ಭಾವನೆಯನ್ನು ನೋಡಿ ಆತ್ಮದೇವರು ತರುತ್ತಿದ್ದಾನೆ.

ಹೀಗೆ ಕೆಲವು ಸಾವಿರಾರು, ಕೆಲವು ಲಕ್ಷಗಳ ವರ್ಷಗಳು ಕಳೆದುಹೋಗಿ ಒಂದಕ್ಕೊಂದು ಆಗಾಗ ಅಧರ್ಮಗಳು ಹೆಚ್ಚಾಗುತ್ತಾಬಂದು ಧರ್ಮಗಳು ತಿಳಿಯದಂತೆ ಹೋಗುತ್ತಿರುತ್ತವೆ. ಕೊನೆಗೆ ಅಧರ್ಮಗಳು ಹೆಚ್ಚಾಗಿ ಧರ್ಮಗಳು ಹೆಸರಿಗೆ ಮಾತ್ರ ಉಳಿದಾಗ ಪುನಃ ಧರ್ಮಗಳು ಆರೋಹಣ ನಡೆಯಬೇಕಾಗಿದೆ. ಆಗ ತಿಳಿಯದೇ ಹೋಗಿರುವ ಧರ್ಮಗಳನ್ನು ತಿಳಿಸುವುದಕ್ಕೆ, ಭೂಮಿಮೇಲೆ ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ತಾತನಾದ ದೇವರು, ಪರಮಾತ್ಮನಾದ ದೇವರು ಮನುಷ್ಯನಂತೆ ಅವತರಿಸಿ ಮನುಷ್ಯರಿಗೆ ಧರ್ಮಗಳನ್ನು ತಿಳಿಸಬೇಕಾಗಿದೆ.

ತನ್ನ ಕಾನೂನಿನ ಪ್ರಕಾರ ಇಲ್ಲವೆ ತನ್ನ ನಿಯಮದ ಪ್ರಕಾರ ಖುರ್ಆನ್ ಗ್ರಂಥದಲ್ಲಿ (6–110) ರಲ್ಲಿ ಹೇಳಿದಂತೆ "ತಂದೆಯಾದ ದೇವರೇ ಅಧರ್ಮಗಳನ್ನು ತೆರೆಮೇಲಕ್ಕೆ, ಮನುಷ್ಯರ ಹೃದಯಗಳ ಮೇಲಕ್ಕೆ ತರುತ್ತಿದ್ದಾನೆ." ಹಾಗೆ ನಡೆದಂತೆಲ್ಲಾ ಸ್ವಲ್ಪ ಕಾಲಕ್ಕೆ ಅಧರ್ಮಗಳ ಸಾಂದ್ರತೆ ಬೆಳೆದುಹೋಗಿ ಧರ್ಮಗಳ ಸಾಂದ್ರತೆ ಕಡಿಮೆಯಾಗುತ್ತದೆ. ಆಗ ತಾನು ನೇಮಿಸಿದ ದೇವರು ತನ್ನ ಪದ್ಧತಿ ಪ್ರಕಾರ ಅಧರ್ಮಗಳನ್ನು ಬೆಳೆಸಿದಾಗ ಪರಮಾತ್ಮ ತನ್ನ ಸ್ಥಾನದಲ್ಲಿ ತಾನು ಇರುತ್ತಾ, ಪ್ರತ್ಯೇಕವಾದ ಮಾನವನನ್ನು ತಯಾರು ಮಾಡಿ ಆತನಲ್ಲಿ ತನ್ನ ಆತ್ಮವನ್ನು (ತನ್ನ ಶಕ್ತಿಯನ್ನು) ತುಂಬಿ ತನ್ನ ಪ್ರತಿನಿಧಿಯಾಗಿ ಭೂಮಿಮೇಲಕ್ಕೆ ಮನುಷ್ಯರ ಮಧ್ಯದೊಳಗೆ ಕಳುಹಿಸುತ್ತಾನೆ. ಆಗ ಮಾನವ ಆಕಾರದಿಂದ ಬಂದವನು ಪರಮಾತ್ಮ ಶಕ್ತಿ ಇರುವವನೆಂದು, ದೇವರ ಪಾಲನೆಯಲ್ಲಿನ ಗ್ರಹಗಳು, ಭೂತಗಳು ಗ್ರಹಸಿ ಬಂದ ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡುವರು. ಮಾನವರು ಕೂಡಾ ಹಾಗೆಯೇ ಸಾಷ್ಟಾಂಗ ನಮಸ್ಕಾರ ಮಾಡಬೇಕಾಗಿರುವಾಗ ಅಧರ್ಮ ಗಳಿಂದ ತುಂಬಿದ ಮನುಷ್ಯರು ಮಾಯೆಯೊಂದಿಗೆ ಇರುವವರಾಗಿ ಬಂದವನನ್ನು ಸಾಧಾರಣ ಮನುಷ್ಯನಾಗಿ ಲೆಕ್ಕಿಸುತ್ತಾರೆ. ಆತನಿಗೆ ನಮಸ್ಕರಿಸುವು ದಿಲ್ಲ. ಆತನು ಯಾರೋ ಕೂಡಾ ಮನುಷ್ಯರಿಗೆ ತಿಳಿದಿಲ್ಲ. ಈ ವಿಷಯವನ್ನು ಅಂತಿಮ ದೈವಗ್ರಂಥ ಖುರ್ಆನ್‌ನಲ್ಲಿ ಸೂರಾ 15ರಲ್ಲಿ 28, 29, 30, 31ರಲ್ಲಿ ಹೀಗಿದೆ ನೋಡಿರಿ.

**(15–28) "ಮಣ್ಣಿನಿಂದ ನಾನು ಒಬ್ಬ ಮಾನವನನ್ನು ತಯಾರು ಮಾಡುತ್ತಿದ್ದೇನೆ ಎಂದು ನಿನ್ನ ಪ್ರಭುವು ದೂತರೊಂದಿಗೆ ಹೇಳಿದ್ದಾನೆ."**

**(15–29) "ನಾನು ಆತನನ್ನು ಪೂರ್ತಿಯಾಗಿ ತಯಾರು ಮಾಡಿ ಆತನಲ್ಲಿ ನನ್ನ ಆತ್ಮವನ್ನು ಊದಿದಾಗ ನೀವೆಲ್ಲರೂ ಆತನ ಮುಂದೆ ಸಾಷ್ಟಾಂಗ ಬೀಳಿರಿ."**

**(15–30) "ದೂತರೆಲ್ಲರೂ ಸಾಷ್ಟಾಂಗ ಬಿದಿದ್ದಾರೆ."**

## (15–31) "ಒಬ್ಬ ಇಬ್ಲೀಸು ಹೊರತು ಸಾಷ್ಟಾಂಗ ಬೀಳುವವರೊಂದಿಗೆ ಸೇರಿಸುವುದಕ್ಕೆ ಅವನು ನಿರಾಕರಿಸಿದ್ದಾನೆ."

ಈ ವಿಧವಾಗಿ ವಾಕ್ಯದಲ್ಲಿ ಇರುವುದನ್ನು ವಿಶ್ಲೇಷಿಸಿಕೊಂಡು ನೋಡಿದರೆ ಪರಮಾತ್ಮ ಪರಮಾತ್ಮನಾಗಿಯೇ ಇರುತ್ತಾ ತನ್ನ ಶಕ್ತಿಯಿಂದ ಒಬ್ಬ ಮನುಷ್ಯನನ್ನು ತಯಾರು ಮಾಡಿ ಕಳುಹಿಸುತ್ತಾನೆ. ಇನ್ನೊಂದು ವಿಧವಾಗಿ ಹೇಳಬೇಕೆಂದರೆ ಸ್ವತಃವಾಗಿ ಪರಮಾತ್ಮನೇ ಮಾರುವೇಷದಲ್ಲಿ ಭೂಮಿಮೇಲಕ್ಕೆ ಮನುಷ್ಯನಾಗಿ ಬರುವನು. ಆದರೇ ಹಾಗೆ ಬಂದಾಗ ಆತನು ದೇವರಾಗಿ ಕೆಲವು ಸಮಯಗಳಲ್ಲಿ ಮಾತ್ರವೇ ಇರುತ್ತಾ ಉಳಿದ ಸಮಯವೆಲ್ಲಾ ಅಂದರೆ ಉಳಿದ ಜೀವನವೆಲ್ಲ ಕರ್ಮವಿರುವ ಜೀವಿಯಾಗಿ, ಕರ್ಮ ಅನುಭವಿಸುತ್ತಿರುತ್ತಾನೆ. ಹಾಗಿರುವುದರಿಂದ ಆತನನ್ನು ದೇವರ ಅವತಾರವೆಂದು, ಪರಮಾತ್ಮ ಬಂದಿದ್ದಾನೆಂದು ಯಾರೂ ತಿಳಿಯಲಾರರು. ಅಂತಹ ಪರಿಸ್ಥಿತಿಯಲ್ಲಿ ಕೆಲವರು ಆತನು ಎಂದರೇ ಭಗವಂತನು ಹೇಳುವ ಜ್ಞಾನವನ್ನು ವಿರೋಧಿಸುತ್ತಾ ತಮಗೆ ತಿಳಿದ ಜ್ಞಾನವೇ ಉತ್ತಮವಾದುದೆಂದು ಹೇಳುತ್ತಿರುತ್ತಾರೆ. ಅಲ್ಲಿಗೆ ಸುಮ್ಮನಾಗದೆ ಸಾಧಾರಣ ಮನುಷ್ಯನನ್ನು ಹೇಳನವಾಗಿ ಮಾತನಾಡಿದಂತೆ ಮಾತನಾಡುವುದೇ ಅಲ್ಲದೆ ಆತನನ್ನು ಅವಮಾನಿಸುತ್ತಾರೆ. ಆದರೂ ಎಲ್ಲವನ್ನು ಸಹಿಸಿಕೊಂಡು ತಾನು ಯಾವ ಉದ್ದೇಶದಿಂದ ಬಂದಿದ್ದಾನೊ ಆ ಉದ್ದೇಶವನ್ನು ಯಾರಿಗೂ ತಿಳಿಯದಂತೆ ನೆರವೇರಿಸಿ ತನ್ನ ಸ್ಥಾನದೊಳಗೆ ತಾನು ಹೋಗುವನು. ಈ ವಿಷಯವಾಗಿ ಭಗವದ್ಗೀತೆಯಲ್ಲಿ ರಾಜವಿದ್ಯೆ ರಾಜಗುಹ್ಯ ಯೋಗ ಎನ್ನುವ ಅಧ್ಯಾಯದಲ್ಲಿ ಹನ್ನೊಂದನೆ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**

**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್ ॥**

**ಭಾವಾರ್ಥ :– "ಸರ್ವ ಜೀವರಾಶಿಗಳಿಗು ದೇವರಾಗಿದ್ದು ಮಾನವ ಶರೀರ ಧರಿಸಿ ಬಂದಿರುವ ನನ್ನನ್ನು ನೋಡಿ ನನ್ನ ಘನತೆ ತಿಳಿಯದ ಮನುಷ್ಯರು ಅಜ್ಞಾನಿಗಳಾಗುತ್ತಾ ನನ್ನನ್ನು ಅವಮಾನಿಸುತ್ತಿದ್ದಾರೆ."**

**ಜ್ಞಾನಯೋಗ 6ನೇ ಶ್ಲೋಕ. . .**

**ಶ್ಲೋ॥ ಅಜೋಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಪಿಸನ್ ।**

**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥**

**ಭಾವಾರ್ಥ :– "ನಾಶವಿಲ್ಲದವನನ್ನು, ಜನ್ಮ ಇಲ್ಲದವನನ್ನು ಸಕಲ ಜೀವಿರಾಶಿಗಳಿಗೆ ದೇವರಾಗಿ ನನ್ನ ಪ್ರಕೃತಿಯಿಂದ ಶರೀರವನ್ನು ತಯಾರು ಮಾಡಿಕೊಂಡು ನಾನು ಹುಟ್ಟುತ್ತಿದ್ದೇನೆ."**

ಖುರ್‌ಆನ್ ಗ್ರಂಥದಲ್ಲಿ ಸೂರಾ 89, ಆಯತ್ 22ರಲ್ಲಿ ದೇವರು ಬರುತ್ತಾನೆಂದು ದೇವದೂತರು ಸಾಲಾಗಿ ನಿಂತಿರುವಾಗ ಬರುತ್ತಾನೆಂದು ಹೇಳಿದ್ದಾರೆ. ಆ ವಿಷಯವನ್ನು ನೋಡೋಣ.

**(89–22) "ದೇವದೂತರು ಸಾಲಾಗಿ ನಿಂತಿರುವಾಗ, ದೇವರು ಸ್ವತಃವಾಗಿ ಬಂದಾಗ."**

ಹೀಗೆ ಪರಮಾತ್ಮ ಸ್ವತಃವಾಗಿ ಬರುತ್ತಿದ್ದಾನೆಂದು ಭಗವದ್ಗೀತೆ ಮತ್ತು ಖುರ್‌ಆನ್ ಗ್ರಂಥ ಹೇಳುತ್ತಿದೆ. ದೇವರು ಮನುಷ್ಯನಾಗಿ ಬಂದರೆ ಆತನು ಮನುಷ್ಯರಂತೆ ಇದ್ದರೂ ಆತನನ್ನು ಸಾಧಾರಣ ಮನುಷ್ಯನೆಂದು ಅನ್ನಬಾರದು. ಆತನು ಯಾರಿಂದಲೂ ಗುರುತಿಸಲ್ಪಡದಿದ್ದರೂ ಆತನು ಬಂದಿರುವ ವಿಧಾನವನ್ನು ಅನುಸರಿಸಿ, ಆತನು ಹುಟ್ಟಿರುವ ಪದ್ಧತಿಯನ್ನು ಅನುಸರಿಸಿ ಭಗದಿಂದ ಹುಟ್ಟಿದವನೆಂದು ಭಗವಂತನು ಎಂದು ಹೇಳುತ್ತಿದ್ದೇವೆ. ಭಗವಂತನೆನ್ನುವ ಹೆಸರಿನಲ್ಲಿ ವಿಶೇಷ ಅರ್ಥವಿದೆ. ದೇವರಆಗಮನವಾಗಿ ಬಂದಿರುವ ಮನುಷ್ಯನನ್ನು ಭಗವಂತನೆಂದು ಹೇಳಬಹುದು. ಅಷ್ಟೇ ಹೊರತು ಆ ಹೆಸರು ಯಾರಿಗೂ ಸರಿಹೋಗುವುದಿಲ್ಲ.

ಪರಮಾತ್ಮ ಮಾನವ ಶರೀರವನ್ನು ಪ್ರಕೃತಿಯಿಂದ ತಯಾರು ಮಾಡಿಕೊಳ್ಳುವುದರಿಂದ ಖುರ್‌ಆನ್ ಗ್ರಂಥದಲ್ಲಿ **(15–28) ರಲ್ಲಿ "ದೇವರು**

**ಮಣ್ಣಿನಿಂದ ಗೊಂಬೆಯನ್ನು ಮಾಡಿ ಮಾನವನನ್ನು ಸೃಷ್ಟಿಸುತ್ತಿದ್ದೇನೆಂದು"** ಹೇಳಿದ್ದಾನೆ. ಪ್ರಕೃತಿಯಲ್ಲಿನ ಒಂದು ಭಾಗ ಮಣ್ಣುಯೆಂದು ಪ್ರಕೃತಿಯನ್ನು ಗುರುತು ಮಾಡುವುದಕ್ಕೆ ಹಾಗೆ ಹೇಳಿದ್ದಾನೆ. ಖುರ್‌ಆನ್ ಗ್ರಂಥದಲ್ಲಿ ಪಂಚಭೂತಗಳನ್ನು ಕುರಿತು ಎಲ್ಲಿಯೂ ಹೇಳಲಿಲ್ಲ. ಆದ್ದರಿಂದ ಪ್ರಕೃತಿಯೆಂದು ಅರ್ಥವಾಗುವುದಕ್ಕೆ ಮಣ್ಣಿನಿಂದ ಗೊಂಬೆಯನ್ನು ಮಾಡುವುದು ಎಂದು ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಜೀವರಾಶಿಗಳಿಗೆ ದೇವರಾದವನೇ ಮನುಷ್ಯನಾಗಿ ಬಂದು ಹುಟ್ಟಿದರೆ ಆತನು ದೇವರೆಂದು ತಿಳಿಯದೆ, ಆತನ ದೊಡ್ಡತನ ತಿಳಿಯದೆ ಜೀವರಾಶಿಗಳಿಗೆಲ್ಲ ದೊಡ್ಡವನೆಂದು, ಅಧಿಪತಿಯೆಂದು ತಿಳಿಯದೆ ಮನುಷ್ಯನಾಗಿರುವ ದೇವರನ್ನೇ ಅವಮಾನಿಸುತ್ತಿದ್ದಾರೆಂದು ಕೂಡಾ ಹೇಳಿದ್ದಾರೆ.

ತಂದೆಯಾದ ಆತ್ಮದೇವರು ಅಧರ್ಮಗಳನ್ನು ಅಭಿವೃದ್ಧಿ ಮಾಡಿದರೆ, ತಾತನಾದ ಪರಮಾತ್ಮದೇವರು ಪುನಃ ಧರ್ಮಗಳನ್ನು ಸ್ಥಾಪಿಸುತ್ತಿದ್ದಾನೆ. ಆದ್ದರಿಂದ ಧರ್ಮಗಳು ಅಧರ್ಮಗಳಾಗಿ, ಅಧರ್ಮಗಳು ಧರ್ಮಗಳಾಗಿ ಚಕ್ರದಂತೆ ತಿರುಗುತ್ತಿವೆ. ಸೃಷ್ಠಿ, ಸೃಷ್ಠಿ ಆದಿ ದೇವರು, ಸೃಷ್ಠಿ ನಂತರ ದೇವರು ಎಂದು ಹೇಳುತ್ತಿದ್ದೇವೆ. ಪ್ರಪಂಚ ಹುಟ್ಟಿದಾಗಿನಿಂದ ಅದರಲ್ಲಿ ಜೀವರಾಶಿಗಳು ಹುಟ್ಟಿದಾಗಿನಿಂದ ಪರಮಾತ್ಮ, ಆತ್ಮ, ಜೀವಾತ್ಮ ಮೂರು ಆತ್ಮಗಳು ಒಂದು ಪ್ರಕೃತಿ ಇದೆಯೆಂದು ಜ್ಞಾನದ ಪ್ರಕಾರ ತಿಳಿದುಕೊಂಡಿದ್ದೇವೆ. ಆದರೇ ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಮನುಷ್ಯರ ಮಧ್ಯದಲ್ಲಿ ಪುನಃ ಧರ್ಮಗಳನ್ನು ಪುನರುದ್ಧರಿಸುವುದಕ್ಕೆ ತೆರೆಮೇಲೆ ಪರಮಾತ್ಮ ಅವತರಿಸಬೇಕಾಗಿ ಬರುತ್ತಿದೆ. ಪರಮಾತ್ಮ ಮನುಷ್ಯನ ಶರೀರ ಧರಿಸಿ ಬಂದರೂ ಪರಮಾತ್ಮ ಸ್ಥಾನ ಖಾಲಿಯಾಗ ದಂತೆ ಹಾಗೆಯೇ ಇರುತ್ತದೆ. ಹಾಗೆ ಪರಮಾತ್ಮ ಇರುತ್ತಾ ತಾನೇ ತನ್ನ ಪ್ರತಿನಿಧಿ ಯಾಗಿ ಮಾರುವೇಷದಲ್ಲಿ ಭೂಮಿಮೇಲಕ್ಕೆ ಬರುತ್ತಿದ್ದಾನೆ. ಆದರೆ ಭಗವಂತನೆನ್ನುವ ಹೆಸರಿರುವ ಪರಮಾತ್ಮ ಜನ್ಮ. ಅವಶ್ಯಕತೆಗೆ ಅನುಗುಣವಾಗಿ ಬಂದು ಪುನಃ ಇಲ್ಲದಂತೆ ಹೋಗುತ್ತಿದೆ. ಹಾಗೆ ಬರುವುದು ಕೆಲವು ಲಕ್ಷಗಳ ಸಂವತ್ಸಗಳಿಗೊ, ಸಾವಿರಾರು ವರ್ಷಗಳಿಗೊ ನಡೆಯುತ್ತಿರುತ್ತದೆ.

ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿಯೂ, ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿಯೂ ನಾನು ಸರ್ವಜೀವರಾಸಿಗಳಿಗು, ಸರ್ವ ಪ್ರಪಂಚಕ್ಕು ದೇವರಾಗಿ ಮನುಷ್ಯನಾಗಿ ಹುಟ್ಟುತ್ತಿದ್ದೇನೆ ಎಂದು ಎರಡುಕಡೆ ಹೇಳಿದಾಗ ಖುರ್‌ಆನ್ ಗ್ರಂಥದಲ್ಲಿ (15–29), (89–22) ವಾಕ್ಯಗಳಲ್ಲಿಯೂ ದೇವರು ಅವತರಿಸುತ್ತಾನೆಂದು ಇದೆ. ಹಾಗೇ ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆ 14ನೇ ಅಧ್ಯಾಯ 26ನೇ ವಾಕ್ಯದಲ್ಲಿ **(ಯೋಹಾನ್ 14–26) "ಆದರಣಕರ್ತ ಎಂದರೆ ತಂದೆ ನನ್ನ ನಾಮದಲ್ಲಿ ಕಳುಹಿಸುವ ಪರಿಶುದ್ಧಾತ್ಮ ಸಮಸ್ತವನ್ನು ನಿಮಗೆ ಬೋಧಿಸಿ ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನು ನಿಮಗೆ ಜ್ಞಾಪಕ ಮಾಡುತ್ತಾನೆ"** ಎಂದು ಹೇಳಿದ್ದಾರೆ. ಪರಿಶುದ್ಧಾತ್ಮ ಎಂದರೇ ಪತಮಾತ್ಮಯೆಂದು ಅರ್ಥ ಮಾಡಿಕೊಳ್ಳಬೇಕು. ಪರಮಾತ್ಮ ಅವತಾರವನ್ನು 'ಆದರಣಕರ್ತ' ಎಂದು ಹೇಳಿದ್ದಾರೆ. ಆದರಣಕರ್ತ ಎಂದರೆ ಭಗವಂತನೆಂದು ಅರ್ಥ ಮಾಡಿಕೊಳ್ಳಬೇಕು. **"ತಂದೆ ನನ್ನ ನಾಮದಲ್ಲಿ"** ಎಂದಾಗ "ಯೇಸುಪ್ರಭು ನಾಮದಲ್ಲಿ" ಎಂದು ಎಲ್ಲರೂ ಅಂದುಕೊಳ್ಳಬಹುದು. ಹಾಗೆ ಅಲ್ಲಿ ಹೇಳಿರಲಿಲ್ಲ. ಪರಮಾತ್ಮ ಅವತರಿಸಿದಾಗ ಪ್ರತ್ಯೇಕಿಸಿ ಸಜೀವವಾಗಿ ಭಗದಿಂದ ಹುಟ್ಟಿದವನಾಗಿರುವುದರಿಂದ 'ಭಗವಂತ' ಎಂದು ಕರೆಯುವುದು ನಡೆಯುತ್ತಿದೆ. ಆದ್ದರಿಂದ 'ನನ್ನ ಹೆಸರಿನಿಂದ' ಎಂದು ಹೇಳಿದ್ದಾರೆ. 'ನನ್ನ ಹೆಸರು' ಎಂದರೇ ಭಗವಂತನೆಂದು ಅರ್ಥ. ಭಗವಂತನು ಎಂದರೇ 'ಆದರಣ ಕರ್ತ' ಎಂದು ಕೂಡಾ ಕರೆಯುತ್ತಾರೆ. ಆದ್ದರಿಂದ ಆದರಣಕರ್ತ ಎಂದರೆ 'ನನ್ನ ನಾಮದಲ್ಲಿ 'ಎಂದು ವಾಕ್ಯದಲ್ಲಿ ಹೇಳುವುದಾಗಿದೆ. ಈ ವಿಧವಾಗಿ ಮೂರು ದೈವಗ್ರಂಥಗಳಲ್ಲಿ ದೇವರು ಮನುಷ್ಯನಂತೆ ಜನ್ಮಿಸುತ್ತಾನೆಂದು, ಜನ್ಮಿಸಿ ಧರ್ಮಗಳನ್ನು ಬೋಧಿಸುತ್ತಾನೆಂದು ಹೇಳಿದ್ದಾರೆ. ಮೂರು ದೈವ ಗ್ರಂಥಗಳಲ್ಲಿ ದೇವರು ಬಂದು ಧರ್ಮಗಳನ್ನು ತಿಳಿಸುತ್ತೇನೆಂದು ಇರುವಾಗ ಮುಸ್ಲಿಮ್‌ರು ಗ್ರಂಥದಲ್ಲಿ ಬರೆದಿರುವುದನ್ನು ಗ್ರಹಿಸಲಾರದೆ ದೇವರು ಹುಟ್ಟುವುದಿಲ್ಲ ಎಂದು ಗೆರೆಯನ್ನು ಎಳೆದುಕೊಂಡಿದ್ದಾನೆ. ದೇವರ ಧರ್ಮಗಳು ದೇವರಿಗೆ ಹೊರತು ಇತರ ಮಾನವರಿಗೆ ಯಾರಿಗೂ ತಿಳಿಯುವುದಿಲ್ಲವೆಂದು ಖುರ್‌ಆನ್ ಗ್ರಂಥದಲ್ಲಿ ಸೂರಾ ಮೂರು ಆಯತ್

ಏಳರಲ್ಲಿ (3–7) ಹೇಳಿದ ಮಾತನ್ನು ಮರೆತುಹೋಗಿದ್ದಾರೆ. ಸೂಕ್ಷ್ಮಜ್ಞಾನದಿಂದ ಕೂಡಿಕೊಂಡ ವಿಷಯಗಳು ಅಂದರೇ ಧರ್ಮಗಳನ್ನು ದೇವರೇ ಮನುಷ್ಯರಿಗೆ ಹೇಳಬೇಕಾಗಿರುತ್ತದೆ. ದೇವರು ಹೇಳದೆಹೋದರೆ ಮನುಷ್ಯರು ತಿಳಿಯುವುದಕ್ಕೆ ಅವಕಾಶವೇ ಇಲ್ಲ.

**ಪ್ರಶ್ನೆ :– ಯೇಸುನಾಗಿ ಬಂದಿರುವ ವ್ಯಕ್ತಿ ನಮಗೆ ತಿಳಿದಮಟ್ಟಿಗೆ ಮನುಷ್ಯನೆಂದೇ ಹೇಳುತ್ತೇವೆ. ಆದರೇ ಆತನು ಪರಮಾತ್ಮನನ್ನು ತಂದೆಯೆಂದು ಅನೇಕಕಡೆ ಹೇಳುವುದಾಗಿದೆ. ನೀವೇನೊ ಪರಮಾತ್ಮ ಸೃಷ್ಠಿ ನಂತರ ಸೃಷ್ಠಿಸಿದ ಆತ್ಮಗೆ ತಂದೆಯೆಂದು ಹೇಳಿದ್ದೀರ. ಮನುಷ್ಯನಿಗೆ ಆತ್ಮ ತಂದೆಯೆಂದು ಹೇಳಿದ್ದೀರ. ಯೇಸು ತಂದೆಯೆಂದು ಶರೀರದಲ್ಲಿನ ಆತ್ಮವನ್ನು ಅನ್ನುತ್ತಿದ್ದಾನಾ? ಅಥವಾ ಪ್ರಪಂಚವೆಲ್ಲಾ ವ್ಯಾಪಿಸಿ ಶರೀರದಲ್ಲಿ ಕೂಡಾ ಸಾಕ್ಷಿಯಾಗಿರುವ ಪರಮಾತ್ಮನನ್ನು ಕುರಿತು ತಂದೆಯೆಂದು ಹೇಳುತ್ತಿದ್ದಾನಾ? ಸ್ವಲ್ಪ ವಿವರವಾಗಿ ಹೇಳಿರಿ.**

**ಉತ್ತರ :–** ಶರೀರದಲ್ಲಿನ ಆತ್ಮ ಶರೀರದೊಂದಿಗೆ ಜನ್ಮಿಸುವ ಪ್ರತಿ ಜೀವರಾಶಿಗು ಬೀಜದಾತನಾಗಿರುವುದು. ತಾಯಿ ಶರೀರವಾಗಿರುವ ಚರ ಪ್ರಕೃತಿ ಅಥವಾ ಚೇತನ ಪ್ರಕೃತಿ ಎನ್ನುವುದರಿಂದ ಹೊಸ ಶಿಶು ಶರೀರವನ್ನು ತಯಾರಾಗುವಂತೆ ಮಾಡುತ್ತಿದೆ. ಸ್ತ್ರೀ ಶರೀರದಲ್ಲಿ ಕೂಡಾ ಆತ್ಮವೇ ಇದೆ. ಹಾಗೆ ಪುರುಷ ಶರೀರದಲ್ಲಿ ಕೂಡಾ ಆತ್ಮವೇ ದೇವರಾಗಿ, ಅಧಿಪತಿಯಾಗಿ, ಕಾರ್ಯಕರ್ತನಾಗಿದೆ. ಒಬ್ಬ ಮನುಷ್ಯ ಎಲ್ಲಿ ಹುಟ್ಟಿದರೂ ಅವನ ಕರ್ಮವನ್ನು ಅನುಸರಿಸಿ ಕರ್ಮಪ್ರಕಾರ ಹುಟ್ಟುತ್ತಾನೆ. ಜೀವಿಯ ಕರ್ಮ ಪ್ರಕಾರ ನಡೆಸುವುದು ಆತ್ಮವೇ ಆಗಿರುವುದರಿಂದ ಸ್ತ್ರೀ ಶರೀರದಿಂದಲೇ ಯಾರಾದರೂ ಶರೀರವನ್ನು ಧರಿಸಿ ಹುಟ್ಟಬೇಕಾಗಿದೆ. ಎಲ್ಲರಿಗೂ ಮೇಲ್ನೋಟಕ್ಕೆ ತಿಳಿಯುವ ವಿಷಯವಿಷ್ಟೇ ಆದರೂ ತಿಳಿಯದ ವಿಷಯ ಏನೆಂದರೆ! ಜೀವಿಯು ತಾಯಿ ಗರ್ಭದಿಂದ ಹುಟ್ಟಲಿಲ್ಲ. ಜೀವಿಯು ಧರಿಸುವ ಶರೀರ ಮಾತ್ರ ಹುಟ್ಟುತ್ತಿದೆ. ಜೀವಿಯು ಹೊಸದಾಗಿ ತಯಾರಾಗಿ ಪ್ರಸವಿಸಲ್ಪಟ್ಟ ಶರೀರದಲ್ಲಿ ಪ್ರವೇಶಿಸುತ್ತಿದ್ದಾನೆ. ಜೀವಿಯು ಒಂದುಕಡೆ ಮರಣಿಸಿ ಶರೀರವನ್ನು ಬಿಟ್ಟುಬಂದು ಮತ್ತೊಂದುಕಡೆ ಹೊಸ ಶರೀರವನ್ನು ಸೇರುತ್ತಿದ್ದಾನೆ.

ಅದನ್ನೇ ಹುಟ್ಟು (ಜನ್ಮ) ಎನ್ನುತ್ತಿದ್ದೇವೆ. ಹುಟ್ಟುವಿಕೆಯಲ್ಲಿ ಯಾವ ಜೀವಿಯು ತಾಯಿ ಗರ್ಭದಿಂದ ಹುಟ್ಟಲಿಲ್ಲ. ಸ್ತ್ರೀ ಶರೀರದಲ್ಲಿ ಶಿಶುವು ತಯಾರಾಗುವುದಕ್ಕೆ ಸ್ತ್ರೀಗೆ ಬೀಜದಾತನಾದ ಪುರುಷನು ಅಗತ್ಯ. ಆದರೇ ಪ್ರಪಂಚದಲ್ಲಿ ಪುರುಷರು ಮೂವರೇ ಇದ್ದಾರೆ. ಮೂವರು ಪುರುಷರನ್ನು ಮೂರು ದೈವಗ್ರಂಥಗಳಲ್ಲಿ ಹೇಳಿದರೂ 'ಪುರುಷರು' ಎನ್ನುವ ಹೆಸರಿನಿಂದ ಭಗವದ್ಗೀತೆಯಲ್ಲಿಯೇ ಹೇಳಿದ್ದಾರೆ. ಭಗವದ್ಗೀತೆ ಪುರುಷೋತ್ತಮಪ್ರಾಪ್ತಿ ಯೋಗ ಎನ್ನುವ ಅಧ್ಯಾಯದಲ್ಲಿ 16, 17ನೇ ಶ್ಲೋಕಗಳನ್ನು ನೋಡಿದ ಪುರುಷರ ವಿಷಯ ಅರ್ಥವಾಗುತ್ತದೆ.

**ಶ್ಲೋ॥ 16. ದ್ವಾ ವಿಮೌ ಪುರು ಷೌ ಲೋಕೇಕ್ಷರ ಶ್ಚಾಕ್ಷರ ಏವಚ।**

**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋ ಕ್ಷರ ಉಚ್ಯತೇ॥**

**ಶ್ಲೋ॥ 17. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯು ದಾಹೃತಃ।**

**ಯೊ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

**ಭಾವಾರ್ಥ :– "ಲೋಕದಲ್ಲಿ ಪುರುಷರು ಎರಡು ವಿಧಗಳು ಇರುವವರು ಇದ್ದಾರೆ. ಒಬ್ಬರು ಕ್ಷರನು (ನಾಶವಾಗುವವನು). ಎರಡನೆಯವನು ಅಕ್ಷರನು, ನಾಶ ಆಗದಿರುವ ವನು. ಸರ್ವ ಜೀವರಾಶಿಗಳಲ್ಲಿ ಜೀವಿಯಾಗಿ ಜೀವಿಸುವವನು ಕ್ಷರನು ಎನ್ನಲ್ಪಡುತ್ತಿ ದ್ದಾನೆ. ಜೀವಿಯೊಂದಿಗೆ ಶರೀರದಲ್ಲಿಯೇ ಇರುವವನನ್ನು ಅಕ್ಷರನೆಂದು ಹೇಳುತ್ತಿರುತ್ತಾರೆ."**

**"ಇವರು ಇಬ್ಬರು ಅಲ್ಲದೆ ಉತ್ತಮನಾದ ಪುರುಷನು ಇನ್ನೊಬ್ಬನು ಇದ್ದಾನೆ. ಆತನನ್ನೇ ಪರಮಾತ್ಮಯೆಂದು ಹೇಳುತ್ತಿದ್ದೇವೆ. ಆತ್ಮಗಿಂತ ಬೇರೆಯಾಗಿ ಪರಮಾತ್ಮನಾಗಿ ಇರುವವನು ಒಟ್ಟಾರೆ ಪ್ರಪಂಚವೆಲ್ಲ ವ್ಯಾಪಿಸಿದ ಅಧಿಪತಿಯಾದ ದೇವರಾಗಿದ್ದಾನೆ. ಆತನೇ ಎಲ್ಲವನ್ನು ಭರಿಸುವ ದೇವರು".**

ಈ ಎರಡು ಶ್ಲೋಕಗಳ ವಿವರದಲ್ಲಿ ಪ್ರಪಂಚದಲ್ಲಿ ಮೂವರೇ ಪುರುಷರಿದ್ದಾರೆಂದು ಅದರಲ್ಲಿ ಒಬ್ಬನು ಜೀವಾತ್ಮವಾಗಿದ್ದು, ಎರಡನೆಯವನು

ಆತ್ಮ ಎಂದೂ ಹೇಳಿದ್ದಾರೆ. ಮೂರನೆ ಪುರುಷನನ್ನೇ ಪರಮಾತ್ಮಯೆಂದು ಹೇಳಿದ್ದೇವೆ. ಇದಕ್ಕುಮುನ್ನ ಆತ್ಮವನ್ನು, ಪರಮಾತ್ಮವನ್ನು ಕುರಿತು ಹೇಳಿಕೊಂಡಿದ್ದೇವೆ. ಆದರೇ ಜೀವಾತ್ಮವನ್ನು ಕುರಿತು ಸ್ವಲ್ಪ ಹೇಳಿಕೊಂಡಿದ್ದೇವೆ. ಈಗ ಸಂದರ್ಭ ಬಂದಿದೆಯಾದ್ದರಿಂದ ಜೀವಾತ್ಮನನ್ನು ಕುರಿತು ಸ್ವಲ್ಪ ತಿಳಿದುಕೊಳ್ಳೋಣ. ಜೀವಾತ್ಮ ಪುರುಷ ಸಂಬಂಧವಾದವನೇ ಆದರೂ ಜೀವಿಯು ಕೂಡಾ ಸೃಷ್ಠಿಸಲ್ಪಟ್ಟವನೇ. ಸೃಷ್ಠಿಸಲ್ಪಟ್ಟವನು ಯಾರಾದರೂ, ಯಾವುದಾದರೂ ಅವನಿಗೆ ಕೆಲವು ಧರ್ಮಗಳಿರುತ್ತವೆ. ಸೃಷ್ಠಿಸಲ್ಪಟ್ಟ ಆತ್ಮಗೇ ಧರ್ಮಗಳಿರುವಾಗ ಜೀವಾತ್ಮಗು ಕೂಡಾ ಧರ್ಮಗಳು ಇವೆ. ಜೀವಾತ್ಮಗಿರುವ ಧರ್ಮದ ಪ್ರಕಾರ ಆತನು ಏನು ಮಾಡುವವನಲ್ಲ. ಯಾವ ಕೆಲಸ ಕೈಲಾಗುವುದಿಲ್ಲ. ಎಂದಿಗಾದರೂ ನಶಿಸಿ ಇಲ್ಲದಂತೆ ಹೋಗುವವನೆ. ಜೀವಾತ್ಮ ಪುರುಷನೇ ಆದರೂ ಪುರುಷತ್ವದಿಂದ ಪ್ರಕೃತಿ ಲಕ್ಷಣಗಳು ಬೆರೆತಿರುವುದರಿಂದ ಪೂರ್ತಿ ಪುರುಷನೆಂದು ಹೇಳದೆ ಅರ್ಧ ಗಂಡಸುತನ ಇರುವವನೇ ಎಂದು ನಪುಂಸಕನೆಂದು ಹೇಳಬಹುದು. ನಪುಂಸಕನ ಶರೀರವೆಲ್ಲ ಪುರುಷ ಆಕೃತಿಯಲ್ಲಿ ಇದ್ದರೂ ಪೂರ್ತಿ ಪುರುಷ ಲಕ್ಷಣಗಳಿರದೆ ಸ್ತ್ರೀ ಲಕ್ಷಣಗಳು ಕೂಡಾ ಕೆಲವು ಬೆರೆತಿರುತ್ತವೆ. ಆದ್ದರಿಂದ ಜೀವಿಗೆ ಸಂತತಿಯಿಲ್ಲ. ಜೀವಿಯು ಬೀಜದಾತನಲ್ಲ. ಜೀವಿಯು ಏನನ್ನಾದರೂ ಅನುಭವಿಸುತ್ತಾ ಶರೀರದಲ್ಲಿ ನಿವಾಸಿಸುತ್ತಿದ್ದಾನೆ. ಆತನ ಕರ್ಮಪ್ರಕಾರ ಲಭಿಸುವುದನ್ನು ಅನುಭವಿಸುತ್ತಿದ್ದಾನೆ. ಶರೀರದಲ್ಲಿರುವ ಜೀವಿಯುಎಂತಹ ಪರಿಸ್ಥಿತಿಯಲ್ಲಿಯೂ ಸ್ವತಃವಾಗಿ ನೋಡುವವನಲ್ಲ, ಕೇಳುವವನು ಅಲ್ಲ. ಜೀವಿಯು ಪೂರ್ತಿ ಕುರುಡನು, ಕಿವುಡನು. ಅಷ್ಟೇಅಲ್ಲದೆ ಯಾವ ಜ್ಞಾನೇಂದ್ರಿಯಗಳಾಗಲಿ, ಕರ್ಮೇಂದ್ರಿಯಗಳಾಗಲಿ ಇಲ್ಲದ ಅಂಗವಿಕಲನೆಂದು ಹೇಳಬಹುದು. ದುಂಡನೆಯ ಗುಂಡುಕಲ್ಲಿನಂತಹವನು ಜೀವಿಯು. ಜೀವಿಗೆ ತಿಳಿಸುವವನು ಏನಾದರೂ ತಿಳಿಸಿದರೆ ಅದನ್ನು ಅನುಭವಿಸುವವನೇ ಹೊರತು ಸ್ವತಃವಾಗಿ ಯಾವುದನ್ನು ತೆಗೆದುಕೊಳ್ಳಲಾರನು. ಜೀವಾತ್ಮ ಶರೀರದಲ್ಲಿ ನಿವಾಸಿಸುತ್ತಿರುವುದರಿಂದ ಜೀವಿಗೆ ಆತ್ಮವೇ ದೇವರಾಗಿ ಒಂದುಕಡೆ, ಕಾರ್ಯಕರ್ತನಾಗಿ ಕೆಲಸಗಳು ಮಾಡಿಡುವ ಗುಮಾಸ್ತನಾಗಿ ಮತ್ತೊಂದುಕಡೆ ಇರುವುದರಿಂದ ಜೀವಿಯು ಶರೀರದಲ್ಲಿ

ಜೀವಿಸುತ್ತಿದ್ದಾನೆ. ಆತ್ಮ ಇಲ್ಲದ್ದು ಜೀವಿಯು ಮನುಗಡೆ ಸಾಗಿಸಲಾರನು. ಆದ್ದರಿಂದ ಜೀವಿಯು, ಆತ್ಮ ಪ್ರತಿ ಶರೀರದಲ್ಲಿಯೂ ಜೋಡಿ ಆತ್ಮಗಳಾಗಿ ಇದ್ದಾರೆ. ಜೀವಿಯು ಹೊರಗಿನ ವಿಷಯಗಳನ್ನು ತಿಳಿಯುವುದಕ್ಕೆ ಮುಖ್ಯವಾಗಿ ಬುದ್ಧಿಯನ್ನು ಜೀವಿಗೆ ಹತ್ತಿರವಾಗಿ ದೇವರು ಇಡುವುದು ನಡೆದಿದೆ. ಹಾಗೆ ತನ್ನ (ಜೀವಿಯ) ಧರ್ಮದ ಪ್ರಕಾರ ಮೊದಲು ಬುದ್ಧಿ ನಂತರ ಚಿತ್ತವು ಆ ನಂತರ ಅಹಂ ಎನ್ನುವ ಮೂರು ಅಂತಃಕರಣಗಳನ್ನು ಅವುಗಳನ್ನು ಜೀವಿಯ ಸುತ್ತಾ ಇಟ್ಟಾಗ ಶೂನ್ಯವಾಗಿರುವ ಜೀವಿಗೆ ಒಂದು ಆಕಾರ ಬಂದಿದೆ. ಜೀವಿಯ ಆಕಾರವನ್ನು ಕೆಳಗೆ ಚಿತ್ರಪಟದಲ್ಲಿ ನೋಡಬಹುದು.

ಸಾಧ್ಯವಿರುವವರೆಗು ಜೀವಿಗೆ ಸಂಬಂಧಿಸಿದ ವಿಷಯವನ್ನು ತಿಳಿಸಿದ್ದೇವೆ. ಇನ್ನೂ ಯಾವಾದರೂ ತಿಳಿಸದ ವಿಷಯಗಳಿದ್ದರೆ ಸಂದರ್ಭಾನುಸಾರ ಹೇಳುತ್ತೇವೆ. ಈ ಚಿತ್ರಪಟವನ್ನು ನೋಡುವುದರಿಂದ ಜೀವಿಗೆ ಬುದ್ಧಿ, ಚಿತ್ತ, ಅಹಮ್ ಅವಯವಗಳಂತೆ ಇವೆ. ಆ ಮೂರರಲ್ಲಿ ಬುದ್ಧಿ ಜೀವಿಗೆ ಹೊರಗೆ ಸಮಾಚಾರಗಳೆಲ್ಲವೂ ತಿಳಿಸುತ್ತಿರುತ್ತದೆ. ಜೀವಿಯು ನಪುಂಸಕನು ಆಗಿರುವು ದರಿಂದ ಜೀವಿಗೆ ಸಂತಾನ ಇರುವುದಿಲ್ಲ. ಆದರೇ ಹುಟ್ಟುವ ಮಕ್ಕಳೆಲ್ಲರೂ ಯಾರ ಸಂತತಿ? ಎಂದು ಪ್ರಶ್ನೆ ಬರುತ್ತದೆ. ಆ ವಿಷಯವಾಗಿ ಹೇಳಿದರೆ




**ಜೀವಿಯ ಚಿತ್ರಪಟ**

ಶರೀರದಲ್ಲಿನ ಆತ್ಮವೇ ಸರ್ವ ಜೀವರಾಶಿಗಳಿಗು ಬೀಜದಾತನಾಗಿದೆ. ಪ್ರಕೃತಿಯಿಂದ ಶರೀರವನ್ನು ತಯಾರುಮಾಡಿ ಜೀವಿಗೆ ನಿವಾಸಯೋಗ್ಯವಾಗಿ ತಯಾರಾದ ನಂತರ ಆತ್ಮವೇ ಶರೀರವನ್ನು ತಾಯಿಗರ್ಭದಿಂದ ಹೊರಗೆ ತೆಗೆದುಕೊಂಡು ಬಂದಾಗ ಅದರೊಳಗೆ ಜೀವಿಯು ಸೇರುತ್ತಿದ್ದಾನೆ. (ಸೇರಿಸಲ್ಪಡುತ್ತಿದ್ದಾನೆ). ಹೀಗೆ ಜೀವಿಯು ಹೊಸ ಶರೀರವನ್ನು ಆತ್ಮದ ಮೂಲಕ ಹೊಂದುತ್ತಿದ್ದಾನೆ. ಜೀವಿಯ ಶರೀರಕ್ಕೆ ಆತ್ಮವೇ ಬೀಜದಾತ ಆಗಿರುವುದರಿಂದ ಪ್ರಕೃತಿ ತಾಯಿಯಾಗಿದೆ. ಆತ್ಮ ತಂದೆಯಾಗಿ ಇದೆಯೆಂದು ಹೇಳಬಹುದು. ಈ ವಿಷಯವನ್ನು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗದಲ್ಲಿ ಮೂರು, ನಾಲ್ಕು ಶ್ಲೋಕಗಳಲ್ಲಿ ನೋಡಬಹುದು.

**ಶ್ಲೋ॥ 3. ಮಮಯೋನಿ ರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**

**ಸಂಭವ ಸ್ಸರ್ವ ಭೂತಾನಾಂ ತತೋ ಭವತಿ ಭಾರತ ॥**

**ಶ್ಲೋ॥ 4. ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ।**

**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜ ಪ್ರದಃ ಪಿತಾ॥**

**ಭಾವಾರ್ಥ :- "ಬದಲಾಗುವ ಪ್ರಕೃತಿ ನನ್ನೊಂದರ ಯೋನಿ (ಗರ್ಭ) ಅದಕ್ಕೆ ನಾನು ಬೀಜದಾತನಾಗಿದ್ದೇನೆ. ಇದೇ ಕಾರಣದಿಂದ ಪ್ರಪಂಚದಲ್ಲಿ ಸಕಲ ಜೀವರಾಶಿಗಳು ಉದ್ಭವಿಸುತ್ತಿವೆಯೆಂದು ತಿಳಿಯಿರಿ."**

**"ಸರ್ವ ಯೋನಿಗಳಲ್ಲಿ ಜನ್ಮಿಸುವ ಸಕಲ ಜೀವರಾಶಿಗಳಿಗು ಪ್ರಕೃತಿ ತಾಯಿಯಾದರೆ ಆತ್ಮನಾದ ನಾನು ತಂದೆಯಾಗಿದ್ದೇನೆ. ಶರೀರದಲ್ಲಿ ಬೀಜದಾತನಾಗಿ ನಾನೇ ಇರುವುದರಿಂದ ನಾನೇ ಜೀವಿಗಳಿಗೆ ತಂದೆ."**

ಈ ವಿಧವಾಗಿ ಶರೀರದಲ್ಲಿನ ಆತ್ಮ ಕಾರ್ಯಕರ್ತನಾಗಿರುತ್ತಾ ಶರೀರದಲ್ಲಿ ಜೀವಿಗಳ ಶರೀರಗಳು ತಯಾರಾಗುವುದಕ್ಕೆ ಬೇಕಾದ ಬೀಜವನ್ನು ಆತ್ಮವೇ ಒದಗಿಸುತ್ತಿದೆ. ಆದ್ದರಿಂದ ಆತ್ಮವನ್ನು ಬೀಜದಾತಯೆಂದು ಹೇಳಿದ್ದೇವೆ. ಆತ್ಮ

ದೇವರಾಗಿ ಇರುತ್ತಾ ಮತ್ತೊಂದುಕಡೆ ಕಾರ್ಯಕರ್ತನಾಗಿ ಕೂಡಾ ಇದ್ದಾನೆ. ಈ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಸೂರಾ ಆರು, ಆಯತ್ 102ರಲ್ಲಿ ಹೇಳುವುದಾಗಿದೆ.

**(6–102) "ಅಲ್ಲಾಹ್‌ನೇ ನಿಮಗೆ ನಿಜವಾದ ಆರಾಧ್ಯದೈವ. ಸಮಸ್ತ ಜೀವಿಗಳನ್ನು ಸೃಷ್ಟಿಸಿದವನು ಆತನೇ. ಆತನು ಕಾರ್ಯಕರ್ತನಾಗಿ ಕೂಡಾ ಇದ್ದಾನೆ."**

ಈ ವಿಧವಾಗಿ ಹೇಳಿರುವುದರಿಂದ ಮೇಲಿನ ವಿಷಯಕ್ಕೆ ಸಾಕ್ಷಿಯಾಗಿ ಖುರ್‌ಆನ್‌ನಲ್ಲಿನ ಈ ವಾಕ್ಯ ಕಾಣಿಸುತ್ತಿದೆ. ಈ ವಾಕ್ಯದಿಂದ ಮೂಡು ಗ್ರಂಥಗಳಲ್ಲಿಯೂ ದೇವರನ್ನು ಕುರಿತಾದ ಸತ್ಯ ಇದೆಯೆಂದು ತಿಳಿಯುತ್ತಿದೆ. ಆತ್ಮ ಶರೀರದಲ್ಲಿ ದೇವರಾಗಿದ್ದೂ ಮತ್ತು ಕಾರ್ಯಕರ್ತನಾಗಿ ಇದೆಯೆನ್ನುವ ಮಾತನ್ನು ಸ್ವಲ್ಪ ಅರ್ಥ ಮಾಡಿಕೊಳ್ಳಬೇಕಾಗಿದೆ. ಏಕೆಂದರೆ! ರಾಜ್ಯದಲ್ಲಿ ರಾಜನಾಗಿ ಇರುವವನೇ ಕೂಲಿ ಕೆಲಸ ಮಾಡುತ್ತಿದ್ದಾನೆಂದರೇ ಅದನ್ನು ಯಾರೂ ಒಪ್ಪಿಕೊಳ್ಳುವುದಿಲ್ಲ. ರಾಜನಾಗಿರುವವನು ಪ್ರಜೆಗಳೆಲ್ಲರಿಗೂ ಅಧಿಪತಿ ಯಾಗಿರುತ್ತಾನೆ. ಅಂತಹವನು ತನ್ನ ಘನತೆಯನ್ನು ಮರೆತು ಕೂಲಿ ಕೆಲಸಕ್ಕೆ ಏಕೆ ಹೋಗುತ್ತಾನೆ? ಎನ್ನುವ ಪ್ರಶ್ನೆ ಬರುತ್ತದೆ. ಅದು ಅಸತ್ಯವೆಂದು ಹೇಳುವುದಕ್ಕೆ ಅವಕಾಶವಿದೆ. ಆದರೇ ಶರೀರದಲ್ಲಿ ಆತ್ಮ ದೇವರಾಗಿ, ಕಾರ್ಯಕರ್ತನಾಗಿ ಎರಡು ವಿಧಗಳ ಕೆಲಸ ಮಾಡುವುದು ವಾಸ್ತವವೇಯೆಂದು ಹೇಳುವುದಕ್ಕೆ ಖುರ್‌ಆನ್ ಗ್ರಂಥದಲ್ಲಿನ (6–102) ನೇ ವಾಕ್ಯ ಕೂಡಾ ಅದೇ ವಿಷಯವನ್ನೇ ಹೇಳುತ್ತಿದೆ. ಆದ್ದರಿಂದ ಇಲ್ಲಿ ಎಲ್ಲರೂ ಜಾಗ್ರತೆಯಾಗಿ ಆತ್ಮವನ್ನು ಅರ್ಥ ಮಾಡಿಕೊಳ್ಳಬೇಕೆಂದು ಹೇಳಿದ್ದೇವೆ. ಆತ್ಮವನ್ನು ಅರ್ಥ ಮಾಡುವುದಕ್ಕೆ ನಾವು ಕೆಲವುಕಡೆ ಅಸತ್ಯವನ್ನು ಕೂಡಾ ಹೇಳಬೇಕಾಗಿ ಬಂದಿದೆ. ಕೆಲವು ಸಲ ಅಸತ್ಯ, ಕೆಲವುಸಲ ಸತ್ಯವನ್ನು ಸ್ವತಃವಾಗಿ ನಾವೇ ತಿಳಿದು ಹೇಳುವುದರಿಂದ ಕೆಲವರು ಸ್ವಲ್ಪ ಅಯೋಮಯ ಸ್ಥಿತಿಗೆ ಗುರಿಯಾಗಿ ಕೊನೆಗೆ ಪ್ರಶ್ನಿಸುವುದಕ್ಕೆ ಶುರು

ಮಾಡುತ್ತಾರೆ. ಯಾವಾಗಾದರೆ ಪ್ರಶ್ನಿಸುವುದಕ್ಕೆ ಶುರುಮಾಡುತ್ತಾರೊ ಆಗ ಸತ್ಯವನ್ನು ಗ್ರಹಿಸುವ ಶಕ್ತಿ ಬರುತ್ತದೆ. ಆತ್ಮ ವಿಷಯದಲ್ಲಿ ಕೆಲವುಕಡೆ ಅದೇ ನಡೆದಿದೆ. ಆತ್ಮವನ್ನು ಕುರಿತು ಹೇಳಿದರೂ, ಪರಮಾತ್ಮನನ್ನು ಕುರಿತು ಹೇಳಿದರೂ ಭಗವದ್ಗೀತೆಯಲ್ಲಿ **'ಆತ್ಮ'**ಯೆಂದು ಸಂಬೋಧಿಸಿ ಹೇಳಿರುತ್ತಾರೆ. ಹಾಗೇ ಆತ್ಮವನ್ನು ಕುರಿತು ಹೇಳಿದರೂ, ಪರಮಾತ್ಮನನ್ನು ಕುರಿತು ಹೇಳಿದರೂ ವಾಕ್ಯದಲ್ಲಿ ಆಯತ್‌ನಲ್ಲಿ **'ಅಲ್ಲಾಹ್'** ಎಂದು ಒಂದೇ ಹೆಸರು ಹೇಳಲ್ಪಟ್ಟಿದೆ. ಹಾಗೆಯೇ ಬೈಬಲ್ ಗ್ರಂಥದಲ್ಲಿ ಯಾವ ವಾಕ್ಯ ಯಾರಿಗೆ ಹೇಳುತ್ತಿದ್ದೇವೆಂದು ವಿವರವಾಗಿ ಹೇಳದಂತೆ ಆತ್ಮನನ್ನಾಗಲಿ, ಪರಮಾತ್ಮನನ್ನಾಗಲಿ ಇಬ್ಬರನ್ನು **'ತಂದೆ'** ಎಂದು ಹೇಳುವುದಾಗಿದೆ.

ಭಗವದ್ಗೀತೆ ಗ್ರಂಥದಲ್ಲಿ ಇಬ್ಬರನ್ನು ಸೇರಿಸಿ 'ಆತ್ಮ' ಎಂದು ಹೇಳುವುದು, ಖುರ್‌ಆನ್ ಗ್ರಂಥದಲ್ಲಿ ಇಬ್ಬರನ್ನು ಸೇರಿಸಿ ಅಲ್ಲಾಹ್ ಎಂದು ಹೇಳುವುದು, ಬೈಬಲ್ ಗ್ರಂಥದಲ್ಲಿ ಇಬ್ಬರನ್ನು ಸೇರಿಸಿ 'ತಂದೆ'ಯೆಂದು ಹೇಳುವುದು ಪ್ರತ್ಯಕ್ಷವಾಗಿದೆ. ಆದರೇ ಆ ವಿಷಯ ಮೂರು ಗ್ರಂಥಗಳನ್ನು ಓದುತ್ತಿರುವ ಮೂರು ಮತದವರಿಗೆ ಸ್ವಲ್ಪವೂ ಸಹ ತಿಳಿದಿಲ್ಲ. ಅಲ್ಲಾಹ್ ಎಂದರೆ 'ಒಬ್ಬನೇ ಅಲ್ಲಾಹ್'ಯೆಂದು ಮುಸ್ಲಿಮ್‌ರು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆಯೇ ತಂದೆಯೆಂದರೆ ದೇವರೇಯೆಂದು ಕ್ರೈಸ್ಥರು ಅಂದುಕೊಳ್ಳುವುದು ನಡೆಯುತ್ತದೆ. ಅದೇ ವಿಧವಾಗಿ ಭಗವದ್ಗೀತೆಯಲ್ಲಿ ಆತ್ಮ ಎನ್ನುವಕಡೆಯಲ್ಲೆಲ್ಲಾ ಹಿಂದೂಗಳು ಒಂದೇ ಆತ್ಮ ಇದೆಯೆಂದು ಅಂದುಕೊಳ್ಳುತ್ತಿದ್ದಾರೆ. ಆತ್ಮ ಎರಡು ವಿಧಗಳಲ್ಲಿ ಇದೆಯೆಂದು ಒಂದು ಆತ್ಮ ಮತ್ತೊಂದು ಪರಮಾತ್ಮಯೆಂದು ತಿಳಿದಿಲ್ಲ. ಹಾಗೆ ಬೈಬಲ್‌ನಲ್ಲಿ ತಂದೆ ಎಂದರೆ ಇಬ್ಬರು ಇದ್ದಾರೆಂದು ಕ್ರೈಸ್ಥರಿಗೆ ತಿಳಿದಿಲ್ಲ. ಹಾಗೆ ಖುರ್‌ಆನ್ ಗ್ರಂಥದಲ್ಲಿ ಅಲ್ಲಾಹ್ ಎಂದರೆ ಒಂದೇ ಪದ ಇಬ್ಬರನ್ನು ಕುರಿತು ಹೇಳಿದೆಯೆಂದು ಮುಸ್ಲಿಮ್‌ರು ತಿಳಿಯದೆ ಹೋಗಿದ್ದಾರೆ. ಈ ವಿಧವಾಗಿ ಮೂರು ಮತಗಳಲ್ಲಿನ ಪ್ರಜೆಗಳು ತಮ್ಮ ಗ್ರಂಥಗಳೆಂದು ಹೇಳಿಕೊಳ್ಳುವವುಗಳಲ್ಲಿರುವ ಸತ್ಯವೇನೊ ತಿಳಿಯದೆ ಒಂದೇ ಹೆಸರಿನಿಂದ ಹೇಳಲ್ಪಟ್ಟ ಇಬ್ಬರನ್ನು ಒಬ್ಬರ

ನ್ನಾಗಿಯೇ ಅಂದುಕೊಳ್ಳುತ್ತಿದ್ದಾರೆ. ಆತ್ಮ ಎಂದರೂ, ತಂದೆ ಎಂದರೂ, ಅಲ್ಲಾಹ್ ಎಂದರೂ ಇಬ್ಬರಿದ್ದಾರೆಂದು ಅಂದುಕೊಳ್ಳುವ ಅವಕಾಶವೇ ಇಲ್ಲ. ಏಕೆಂದರೆ! ದೇವರೆ ಹಾಗೆ ಮಾಡಿದ್ದಾನೆ. 'ಯಾರನ್ನು ಯಾವ ಮಾರ್ಗದಲ್ಲಿ ಕಳುಹಿಸಬೇಕೊ ಆ ಮಾರ್ಗದಲ್ಲಿಯೇ ಕಳುಹಿಸುತ್ತೇನೆ' ಎಂದು ಖುರ್‌ಆನ್ ಗ್ರಂಥದಲ್ಲಿ ಸೂರಾ ಆರು, ಆಯತ್ 110, 111ರಲ್ಲಿ ಹೇಳಿದಂತೆ **ದೇವರು ಮನುಷ್ಯರನ್ನು ಅಜ್ಞಾನ ಮಾರ್ಗದಲ್ಲಿ ಆದರೂ ಕಳುಹಿಸುತ್ತಾನೆ, ಇಲ್ಲವೆ ಜ್ಞಾನಮಾರ್ಗದಲ್ಲಾದರೂ ಕಳುಹಿಸುತ್ತಾನೆ.** ಅದು ಎಲ್ಲವೂ ಮನುಷ್ಯನ ವಿಧಾನವನ್ನು ಅನುಸರಿಸಿ ದೇವರು ನಿರ್ಣಯಿಸುತ್ತಾನೆ ಎಂದು ಹೇಳಿಕೊಂಡಿದ್ದೇವೆ.

"ಅಲ್ಲಾಹ್ ಒಬ್ಬರೇ ನಿಮ್ಮ ಆರಾಧ್ಯ ದೈವ, ಆತನು ಹೊರತು ಇತರರು ಯಾರೂ ಇಲ್ಲ" ಎಂದು ಖುರ್‌ಆನ್ ಗ್ರಂಥದಲ್ಲಿ (6–102) ವಾಕ್ಯದಲ್ಲಿ ಇದೆ. ಅಲ್ಲಿ ಹೇಳಿರುವುದು ಪೂರ್ತಿ ಸತ್ಯ. ಮನುಷ್ಯನಿಗೆ ಆರಾಧ್ಯದೈವ ಒಬ್ಬನೆ. ಇಬ್ಬರು ಎಲ್ಲಿಯೂ ಇಲ್ಲ. ಇಬ್ಬರು ಇದ್ದಾರೆಂದು ಯಾವ ದೈವ ಗ್ರಂಥದಲ್ಲಿ ಹೇಳಲಿಲ್ಲ. ಆದರೇ ನಮ್ಮ ಪ್ರಶ್ನೆ ಏನೆಂದರೇ 112ನೇ ಸೂರಾದಲ್ಲಿ ಬರೆದಂತೆ **"ದೇವರು ಯಾರ ಅಕ್ಕರೆ ಇಲ್ಲದವನು"** ಎಂದು ಇದೆ. ಎಂದರೇ ಆರಾಧನೆ ಅಕ್ಕರೆ ಕೂಡಾ ಇಲ್ಲದವನು ಎಂದು ಅರ್ಥ. ಅಲ್ಲಿ ಹೇಳಿದ ವಾಕ್ಯದಲ್ಲಿ ಅಲ್ಲಾಹ್‌ಗೆ ಯಾವ ಆರಾಧನೆ ಅಕ್ಕರೆ ಸಹ ಇಲ್ಲವೆಂದು ಅರ್ಥ. ಅಷ್ಟೇ ಅಲ್ಲದೆ 112ನೇ ಸೂರಾದಲ್ಲಿ ಹೇಳಿದ ಮತ್ತೊಂದು ವಾಕ್ಯದ ಪ್ರಕಾರ **"ಅಲ್ಲಾಹ್‌ಗೆ ಯಾರೂ ಸಂತಾನ ಅಲ್ಲ"** ಎಂದು ಇದೆ. ಕೆಲವುಕಡೆ **"ಅಲ್ಲಾಹ್ ಸರ್ವವನ್ನು, ಸರ್ವಮಾನವರನ್ನು ಸೃಷ್ಟಿಸಿದನು"** ಎಂದು ಇದೆ. ಇದರ ಪ್ರಕಾರ ಎಲ್ಲರನ್ನು ಸೃಷ್ಟಿಸಿದ ದೇವರು ಒಬ್ಬನಿರುವಾಗ, ಯಾರನ್ನು ಸೃಷ್ಟಿಸಿದರೂ, ಯಾರಿಗೂ ತಂದೆಯಲ್ಲದ ದೇವರು, ಯಾರಿಗೂ ಹುಟ್ಟದ ದೇವರು ಮತ್ತೊಬ್ಬನು ಇದ್ದಾನೆಂದು 112ನೇ ಸೂರಾದಲ್ಲಿನ ಎರಡು ಮೂರು ವಾಕ್ಯಗಳ ಮೂಲಕ ತಿಳಿಯುತ್ತಿದೆ. ಇಲ್ಲಿ ಸೃಷ್ಟಿ ಪೂರ್ವದಲ್ಲಿರುವ ದೇವರನ್ನು ಕುರಿತು ಹೇಳಿದ್ದಾರೆಂದು, ಆಗ ಆತನು ಒಬ್ಬನು ಹೊರತು ಯಾರೂ ಇಲ್ಲವೆಂದು ಕೂಡಾ ಮೊದಲನೆ

ವಾಕ್ಯದಲ್ಲಿಯೇ ಇದೆ. ಸೃಷ್ಠಿ ನಂತರ ದೇವರು, ಜೀವರಾಶಿಗಳು ಎಲ್ಲಾ ಇವೆ. ಸೃಷ್ಠಿ ಪೂರ್ವದಲ್ಲಿ ದೇವರು ಒಬ್ಬನೇ ಇದ್ದಾನೆ. ದೇವರು ಹೊರತು ಯಾವ ಮಾನವನು ಇಲ್ಲ. ಹೀಗೆ ಭಗವದ್ಗೀತೆಯಲ್ಲಿನ ಆತ್ಮ ಪರಮಾತ್ಮರನ್ನು, ಬೈಬಲ್‌ನಲ್ಲಿನ ತಂದೆ, ಪರಿಶುದ್ಧಾತ್ಮಗಳನ್ನು ಕುರಿತು ಮನುಷ್ಯ ಆಲೋಚಿಸಿ ಜ್ಞಾನವನ್ನು ತಿಳಿಯಬೇಕಾಗಿದೆ. ಗ್ರಂಥದಲ್ಲಿ ಏನು ಹೇಳಿದ್ದಾರೊ ತಿಳಿಯದೇ ಯಾರೂ ಜ್ಞಾನಿಗಳು ಆಗಲಾರರು.

**ಪ್ರಶ್ನೆ :– ದೈವಗ್ರಂಥಗಳಲ್ಲಿ ಇಬ್ಬರನ್ನುಸೇರಿಸಿ ಒಂದೇ ಹೆಸರಿನಿಂದ ಏಕೆ ಹೇಳಿದ್ದಾರೆ? ಹಾಗೆ ಹೇಳುವುದರಿಂದ ಯಾರಾದರೂ ತಿಳಿದ ಹೆಸರು ಒಬ್ಬನ ಹೆಸರೇಯೆಂದು ಅಂದುಕೊಳ್ಳುತ್ತಾರೆ ಹೊರತು ಒಂದೇ ಹೆಸರಿನಲ್ಲಿ ಇಬ್ಬರಿದ್ದಾರೆಂದು ಅಂದುಕೊಳ್ಳುವುದಿಲ್ಲ. ಹಾಗಲ್ಲದೆ ದೈವ ಗ್ರಂಥಗಳಲ್ಲಿ ಒಂದೇ ಹೆಸರನ್ನು ಏಕೆ ಹೇಳಲಿಲ್ಲ? ಆತ್ಮವನ್ನು ಆತ್ಮಯೆಂದು, ಪರಮಾತ್ಮನನ್ನು ಪರಮಾತ್ಮಯೆಂದು ಹೇಳಿದ್ದರೆ ಗೊಂದಲ ಪಡುವುದಕ್ಕೆ ಅವಕಾಶ ಇರುವುದಿಲ್ಲ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ದೇವರ ಜ್ಞಾನ ಸ್ಥೂಲವಾಗಿ ಬಹಿರ್ಗತವಾಗಿ ಎಲ್ಲಿಯೂ ಹೇಳಿಲಿಲ್ಲ. ಮೂರು ಗ್ರಂಥಗಳಲ್ಲಿಯೂ ಸೂಕ್ಷ್ಮ ಜ್ಞಾನ ಹೇಳಲ್ಪಟ್ಟಿದೆ, ಸೂಕ್ಷ್ಮ ಜ್ಞಾನ ಸಾಮಾನ್ಯವಾಗಿ ಯಾರಿಗೂ ಅರ್ಥವಾಗುವುದಿಲ್ಲ. ದೇವರು ತನ್ನ ವಿಷಯದಲ್ಲಿ ಎಂದರೆ ತನ್ನ ಹೆಸರು ವಿಷಯದಲ್ಲಿ ವಿವರಿಸಿ ಹೇಳದೆ ಇಬ್ಬರನ್ನು ಸೇರಿಸಿ ಒಂದೇ ಹೆಸರಿನಿಂದ ಹೇಳಿದಂತೆ ದೈವಗ್ರಂಥಗಳಲ್ಲಿ ಇದೆ. ದೇವರು ಅರ್ಥ ಆಗಬಾರದೆಂದೇ ಹಾಗೆ ಹೇಳಿದ್ದಾನೆ. ತನ್ನ ಜ್ಞಾನದ ಮೇಲೆ ಆಸಕ್ತಿ ಇರುವವನಿಗೆ ಮಾತ್ರವೇ ಅರ್ಥವಾಗುವಂತೆ ಉಳಿದ ಯಾರಿಗೂ ಅರ್ಥವಾಗದಂತೆ ಇರಬೇಕೆನ್ನುವ ಉದ್ದೇಶದಿಂದಲೇ ಹಾಗೆ ಮಾಡಿದ್ದಾನೆ. ಯಾರಿಗಾದರೆ ದೇವರ ಮೇಲೆ, ದೇವರ ಜ್ಞಾನದ ಮೇಲೆ ಆಸಕ್ತಿ ಇರುತ್ತದೊ ಅವನು ಸತ್ಯವನ್ನು ತಿಳಿಯಬೇಕೆಂದು ಪ್ರಯತ್ನ ಮಾಡುತ್ತಾನೆ. ಅಂತಹವನಿಗೆ ದೇವರು ಸ್ವತಃವಾಗಿ ಅವನ ಅಂತರಂಗದಲ್ಲಿಯೇ ಸತ್ಯ ಅರ್ಥವಾಗುವಂತೆ ಮಾಡುತ್ತಾನೆ. ದೇವರ ಮೇಲೆ ಪೂರ್ತಿ ಧ್ಯಾಸ ಇಲ್ಲದವರು ತಾವು ಎಷ್ಟು ಜ್ಞಾನಿಗಳಂತೆ ನಟಿಸಿದರೂ

ಅವರಿಗೆ ದೇವರು ಸತ್ಯವನ್ನು ತಿಳಿಯಪಡಿಸುವುದಿಲ್ಲ. ತನ್ನ ಮೇಲೆ ಧ್ಯಾಸ ಇಲ್ಲದಿದ್ದರೂ, ಇರುವಂತೆ ನಟಿಸುವವರಿಗೆ ತನ್ನ ವಿಧಾನ ತಿಳಿಯಬಾರದೆಂದು, ದೇವರು ಉದ್ದೇಶಪೂರ್ವಕವಾಗಿ ಒಂದೇ ಹೆಸರಿನಲ್ಲಿಯೇ ಇಬ್ಬರನ್ನು ಹೇಳಿದ್ದಾನೆ. ದೇವರು ಎಲ್ಲಾ ತಿಳಿದೇ ಮಾಡಿದ್ದಾನೆ. ಆದ್ದರಿಂದ ಆತನನ್ನು **"ವಿವೇಕವಂತನು"** ಎಂದು ಹೇಳಬಹುದು. ದೇವರು ನೇರವಾಗಿ ತನ್ನ ಜ್ಞಾನವನ್ನು ತಿಳಿಯುವಂತೆ ಇಡದೆ ಅನೇಕ ತಿರುವುಗಳು ತಿರುಗಿಸಿರುತ್ತಾನೆಂದು ತಿಳಿಯುತ್ತಿದೆ.

**ಪ್ರಶ್ನೆ :– ದೇವರ ವಿಷಯ ಪಕ್ಕಕ್ಕಿಟ್ಟು ನಿಮ್ಮ ವಿಷಯ ಕೇಳುತ್ತೇವೆ ಸಮಾಧಾನ ಹೇಳಿರಿ. ನೀವು ಇದೇ ವರ್ಷ ಹತ್ತು ತಿಂಗಳ ಕೆಳಗೆ ಬರೆದ "ತೆಲುಗು" ಎನ್ನುವ ಚಿಕ್ಕ ಗ್ರಂಥದಲ್ಲಿ 29ನೇ ಪುಟದಲ್ಲಿ ಹೀಗೆ ಬರೆದಿದ್ದೀರ. "ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಆತ್ಮ ಧರ್ಮಗಳನ್ನು ಕುರಿತು ಹುಡುಕಿದರೂ ಯಾವ ಪುಟದಲ್ಲಿ ಸಿಗುವುದಿಲ್ಲ. ದೇವರಿಗೆ ಧರ್ಮಗಳಿವೆಯೆಂದು ಹೇಳಬಹುದು. ಆದರೇ ಆತ್ಮಗೆ ಧರ್ಮಗಳಿವೆ ಯೆಂದು ಪ್ರಪಂಚದಲ್ಲಿ ಯಾರೂ ಹೇಳಲಾರನು. ಏಕೆಂದರೆ! ಆತ್ಮಗೆ ಧರ್ಮಗಳು ಇಲ್ಲ. ಆತ್ಮ ಧರ್ಮಗಳಿಗೆ ಅತೀತವಾಗಿದೆ." ಎಂದು ಬರೆಯುವುದು ನಡೆದಿದೆ. ಈ ಗ್ರಂಥದಲ್ಲಿ ಪ್ರಾರಂಭದಲ್ಲಿಯೇ ದೇವರಿಗೆ ಧರ್ಮಗಳು ಇಲ್ಲ ಎಂದು, ಆತ್ಮಗೆ ಧರ್ಮಗಳಿವೆಯೆಂದು ಹೇಳಿದ್ದೀರ. ತೆಲುಗು ಗ್ರಂಥದಲ್ಲಿ ಅದಕ್ಕೆ ವಿರುದ್ಧವಾಗಿ "ದೇವರಿಗೆ ಧರ್ಮಗಳಿವೆ, ಆತ್ಮಗೆ ಧರ್ಮಗಳು ಇಲ್ಲ" ಎಂದು ಹೇಳಿದ್ದೀರ. ನೀವು ಆ ಗ್ರಂಥದಲ್ಲಿ ಹೇಳಿದ ಮಾತಿಗು ಈ ಗ್ರಂಥದಲ್ಲಿ ಹೇಳಿದ ಮಾತಿಗು ಪೂರ್ತಿ ವಿರುದ್ಧವಾಗಿ ಹೇಳಿದ್ದೀರ. ಎರಡುಕಡೆ ಹೊಂದಿಕೆ ಇಲ್ಲದೆ ಎರಡು ವಿಧಗಳು ಏಕೆ ಹೇಳಿದ್ದೀರ? ಇದಕ್ಕೆ ಉತ್ತರ ಏನು ಹೇಳುತ್ತೀರ?**

**ಉತ್ತರ :–** ನೀವು ಕೇಳಿರುವುದರ ಪ್ರಕಾರವೇ ನಾನು ಎರಡು ವಿಧಗಳು ಕಾಣಿಸುವಂತೆ ಬರೆದಿದ್ದೇನೆ. ನಾನು 29ನೇ ಪುಟದಲ್ಲಿ ಆ ವಿಷಯವನ್ನು ಬರೆಯದೆ ಮೊದಲೇ 28ನೇ ಪುಟದಲ್ಲಿ ಭಗವದ್ಗೀತೆಯಲ್ಲಿನ ಎರಡು ಶ್ಲೋಕಗಳಿಗು ಅರ್ಥ ನನಗೆ ತಿಳಿದು ಮನುಷ್ಯರ ದೃಷ್ಟಿಯನ್ನು ಮರಳಿಸಿ ಶ್ಲೋಕಗಳ ಭಾವನೆಯನ್ನು ಅದೇ ಕೆಲಸವಾಗಿ ದಾರಿ ತಪ್ಪಿಸಿ ಬರೆದಿದ್ದೇವೆ.

ಅದರಲ್ಲಿ ಸತ್ಯವನ್ನು ಸ್ವಲ್ಪ ಮಾತ್ರ ಹೇಳಿ ಉಳಿದ ಭಾವವೆಲ್ಲವನ್ನು ಪರಮಾತ್ಮ ಮೇಲೆ ಮರಳಿಸಿ ಬರೆದಿದ್ದೇವೆ. ಅಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿನ 61, 62 ಶ್ಲೋಕಗಳ ಹತ್ತಿರ ಎಷ್ಟೋ ಜಾಗ್ರತೆಯಿಂದ ಬರೆಯಬೇಕಾಗಿ ಬಂದಿದೆ. ಹಾಗೇ 65, 66ನೇ ಶ್ಲೋಕಗಳಿಗೆ ಭಾವನೆಯನ್ನು ಬರೆಯುವಾಗ ಮೂರು ಪಾಲು ಸತ್ಯ, ಒಂದು ಪಾಲು ಅಸತ್ಯವನ್ನು ಅಳತೆಮಾಡಿ ಹೇಳಿದ್ದೇವೆ. ಅಲ್ಲಿ ನಾಲ್ಕು ಶ್ಲೋಕಗಳಿಗೆ ಅಸಲಾದ ಭಾವನೆಯನ್ನು ತಿಳಿದು ಮನುಷ್ಯನನ್ನು ಇನ್ನೂ ಮುಂದಕ್ಕೆ ತೆಗೆದುಕೊಂಡು ಹೋಗುವುದಕ್ಕೆ, ಜ್ಞಾನಮಾರ್ಗದಲ್ಲಿ ಯಾವ ಆತಂಕಗಳು ನಂತರ ಕಾಲದಲ್ಲಿ ಉಂಟಾಗದಂತಿರಲು ಯೋಚಿಸಿ ಹಾಗೆ ಹೇಳಬೇಕಾಗಿ ಬಂದಿದೆ. ನಿಜ ಭಾವನೆಯನ್ನು ದಾರಿಮರಳಿಸಿ ಅಲ್ಲಿ ಸತ್ಯವನ್ನು ಹೇಳದೆ ಅಸತ್ಯವನ್ನು ತಿಳಿದೇ ಹೇಳಿದ್ದೇನೆ ಎಂದು ಅಲ್ಲಿಯೇ 28ನೇ ಪುಟದಲ್ಲಿ ಬರೆದಿರುವುದು ನೋಡಿದರೆ 29ನೇ ಪುಟದಲ್ಲಿ ಬರೆದಿರುವುದು ಅತಿಶಯೋಕ್ತಿ ಅಲ್ಲ.

ಈಗ ನಾನು ಪ್ರಶ್ನಿಸುತ್ತೇನೆ, ನೀವು ಉತ್ತರ ಹೇಳುತ್ತೀರಾ? ನಾನು 29ನೇ ಪುಟದಲ್ಲಿ ದೇವರು, ಆತ್ಮಯೆಂದು ಎರಡು ಹೆಸರುಗಳು ಹೇಳಿದ್ದೇನೆ. ಆತ್ಮವನ್ನು ದೇವರೆಂದು ಕೂಡಾ ಕರೆಯಬಹುದೆಂದು ಗ್ರಂಥದ ಪ್ರಾರಂಭದಲ್ಲಿಯೇ ಹೇಳಿದ್ದೇನೆ. ನಾನು ಅಲ್ಲಿ ದೇವರಿಗೆ ಧರ್ಮಗಳಿವೆ ಎಂದಾಗ **'ದೇವರು'** ಎನ್ನುವ ಪದವನ್ನು ಆತ್ಮವೆಂದು ಅರ್ಥ ಮಾಡಿಕೊಳ್ಳಬಹುದು ಅಲ್ಲವೆ! ಹಾಗೆ ಆತ್ಮಗೆ ಧರ್ಮಗಳಿಲ್ಲ ಎಂದಾಗ **'ಆತ್ಮ'**ನನ್ನು ದೇವರೆಂದು ಅರ್ಥಮಾಡಿಕೊಳ್ಳ ಬಹುದು ಅಲ್ಲವೆ! ಆತ್ಮವನ್ನು ದೇವರಾಗಿ, ದೇವರನ್ನು ಆತ್ಮವಾಗಿ ಹೇಳಿಕೊಂಡರೆ ಧರ್ಮಗಳಿರುವುದು, ಇಲ್ಲದೇ ಹೋಗುವುದು ಸರಿಹೋಗುತ್ತದೆ ಅಲ್ಲವೆ! ಆತ್ಮಗು, ದೇವರಿಗು ತಾರತಮ್ಯ ತಿಳಿಯದಿರುವಾಗ ಆತ್ಮವನ್ನು ದೇವರಾಗಿ ದೇವರನ್ನು ಆತ್ಮವಾಗಿ ಹೇಳಬಹುದು. ಯಾವಾಗಾದರೆ ಅವುಗಳೆರಡರ ಭೇದ ತಿಳಿದಿದೆಯೊ, ಆಗ ಬೇರೆಬೇರೆಯಾಗಿ ವಿಂಗಡಿಸಿ ಹೇಳಿಕೊಳ್ಳಬೇಕಾಗಿ ಬರುತ್ತದೆ. ಆಗಲೂ ಕೂಡಾ ಧರ್ಮಗಳಿರುವವನು, ಧರ್ಮಗಳು ಇಲ್ಲದವನೆಂದು ವಿಂಗಡಿಸಿ

ಹೇಳಬಹುದು ಆದರೆ, ಆತ್ಮ ದೇವರು ಎನ್ನುವ ಪದಗಳನ್ನು ಬೇರೆಮಾಡಿ ಹೇಳಲಾರೆವು. ಎರಡು ಹೆಸರುಗಳು ಇಬ್ಬರಿಗು ಅನ್ವಯಿಸುವವಾಗಿವೆ. ಆದರೇ ನಮಗೆ ತಿಳಿದ ಸತ್ಯದ ಪ್ರಕಾರ ಸೃಷ್ಠಿಕರ್ತನಾದವನು ಪರಮಾತ್ಮಯೆಂದು, ಸೃಷ್ಠಿಸಲ್ಪಟ್ಟವನು ಆತ್ಮಯೆಂದು ಹೇಳುತ್ತಿದ್ದೇವೆ. ಆತ್ಮಗಿಂತ ಬೇರೆಯಾದುದು ಪರಮಾತ್ಮಯೆನ್ನುವ ಅರ್ಥದಿಂದ ಕರೆಯುತ್ತಿದ್ದೇವೆ. ಸೃಷ್ಠಿಕರ್ತನಾದ ಪರಮಾತ್ಮಗೆ ಧರ್ಮಗಳು ಇಲ್ಲ. ಹಾಗೇ ಸೃಷ್ಠಿಸಲ್ಪಟ್ಟ ಆತ್ಮಗೆ ಧರ್ಮಗಳು ಇವೆ. ತೆಲುಗು ಗ್ರಂಥದಲ್ಲಿ 29ನೇ ಪುಟದಲ್ಲಿ ನಾನು ಹೇಳಿದ ಆತ್ಮವೇ ದೇವರು ಎಂದು ತಿಳಿಯಬಹುದು ಅಲ್ಲವೆ!

ಭಗವದ್ಗೀತಾ ಗ್ರಂಥದಲ್ಲಿ ಆತ್ಮವನ್ನು ಪರಮಾತ್ಮನನ್ನು ಇಬ್ಬರನ್ನು ಸೇರಿಸಿ ಆತ್ಮವೆಂದು ಹೇಳಿದ್ದಾರೆ. ನೀವು ಗಮನಿಸಬೇಕಾದ ವಿಷಯವೇನೆಂದರೇ! ಈಗ ನಾನು ಹೇಳುವವರೆಗು ಎಲ್ಲಿ ಪರಮಾತ್ಮನನ್ನು ಹೇಳಿದ್ದಾರೊ, ಎಲ್ಲಿ ಆತ್ಮವನ್ನು ಕುರಿತು ಹೇಳಿದ್ದಾರೊ ಭಗವದ್ಗೀತೆಯಲ್ಲಿ ತೀರ್ಮಾನಿಸಿ ಹೇಳಲಿಲ್ಲ. ಅನುವಾದಕರು ಕೂಡಾ ಅದನ್ನು ತೀರ್ಮಾನಿಸಿ ಇಲ್ಲಿ ಆತ್ಮವನ್ನು ಕುರಿತು ಹೇಳಿದ್ದಾರೆಂದು, ಅಲ್ಲಿ ಪರಮಾತ್ಮನನ್ನು ಕುರಿತು ಹೇಳಿದ್ದಾರೆಂದು ವಿಂಗಡಿಸಿ ಬರೆಯಲಿಲ್ಲ. ವಿವರಿಸಿ ಅರ್ಥವನ್ನು ಹೇಳಲಿಲ್ಲ. ಹಾಗೇ ಬೈಬಲ್ ಗ್ರಂಥದಲ್ಲಿ ತಂದೆಯೆಂದು ಹೇಳಿದ ಪದ ಆತ್ಮಗೆ ಹೇಳಲ್ಪಟ್ಟಿದೆ, ಹಾಗೇ ಪರಮಾತ್ಮಗೆ ಹೇಳಲ್ಪಟ್ಟಿದೆ. ಇನ್ನು ಖುರ್‌ಆನ್ ಗ್ರಂಥದಲ್ಲಿನ ಜ್ಞಾನವನ್ನು ನೋಡಿದರೆ ಅಲ್ಲಾಹ್ ಎನ್ನುವ ಪದವನ್ನು ಹೇಳಿದ್ದರೂ, ಅಲ್ಲಾಹ್ ಒಬ್ಬನೇಯೆಂದು ಮುಸ್ಲಿಮ್‌ರು ಎಲ್ಲರೂ ಏಕಕಂಠದಿಂದ ಹೇಳಿದರೂ ಅದರಲ್ಲಿ ಧರ್ಮಗಳಿರುವ ಶರೀರದಲ್ಲಿನ ಆತ್ಮವನ್ನು, ಧರ್ಮಗಳು ಇಲ್ಲದ ಪರಮಾತ್ಮನನ್ನು ಸೃಷ್ಠಿ ಪೂರ್ವದಲ್ಲಿ ಯಾವ ಅಕ್ಕರೆ ಇಲ್ಲದವನು ನಿಜವಾದ ಅಲ್ಲಾಹ್‌ನಾ, ಅಥವಾ ಮನುಷ್ಯರನ್ನು ಸೃಷ್ಠಿಸಿದ ಎಲ್ಲರ ಆರಾಧನೆಗಳಿಂದ ಅಕ್ಕರೆ ಇರುವವನು ಅಲ್ಲಾಹ್‌ನಾ? ಎನ್ನುವ ಪ್ರಶ್ನೆ ಬರಬಹುದು. ಗ್ರಂಥದಲ್ಲಿ ಧರ್ಮಗಳಿರುವ, ಧರ್ಮಗಳು ಇಲ್ಲದ ದೇವರುಗಳು ಇಬ್ಬರು ಇರುವುದರಿಂದ ಅವರಿಬ್ಬರಲ್ಲಿ ನಿಜವಾದ ಅಲ್ಲಾಹ್ ಯಾರು? ಎನ್ನುವ

ಸಂಶಯ ಏರ್ಪಡುತ್ತದೆ. ಈ ಎರಡು ವಿಧಾನಗಳನ್ನು ಮೂರು ಗ್ರಂಥಗಳಲ್ಲಿ ಇಲ್ಲಿಯವರೆಗು ತೀರ್ಮಾನಿಸಿ ಯಾರೂ ಹೇಳಲಿಲ್ಲ. ದೈವ ಗ್ರಂಥಗಳು ಅವರನ್ನು ವಿಂಗಡಿಸಿ ತೋರಿಸದಿರುವುದರಿಂದ ಮನುಷ್ಯ ಕೊನೆಗೆ ದೇವರ ಮೇಲೆಯೇ ಆಧಾರಪಡಬೇಕಾಗಿದೆ. ಕೊನೆಗೆ ತೀರ್ಮಾನಿಸಿ ಹೇಳುವವನು ದೇವರೇಯೆಂದು ಎದುರು ನೋಡಬೇಕಾಗಿದ್ದೆ!

ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 7, 8 ಶ್ಲೋಕಗಳಲ್ಲಿ ಹೇಳಿದಂತೆ ದೇವರು ಮನುಷ್ಯನಾಗಿ ಹುಟ್ಟಿಬಂದು ಕ್ಷೀಣಿಸಿ ಹೋದ ದೈವ ಧರ್ಮಗಳನ್ನು ತಿಳಿಸಿಹೋಗುತ್ತಾನೆ. ಆಗ ಮನುಷ್ಯ ಧರ್ಮಗಳ ಪ್ರಕಾರ ನಡೆಯುವುದಕ್ಕೆ ಶುರುಮಾಡುತ್ತಾನೆ. ನಂತರ ಸ್ವಲ್ಪ ಕಾಲಕ್ಕೆ ಶರೀರದಲ್ಲಿನ ದೇವರಾದ ಆತ್ಮ ಅಧರ್ಮಗಳನ್ನು ಪುನರುದ್ಧರಿಸುತ್ತಾನೆ. ಅದರಿಂದ ಕಾಲ ಕಳೆದಂತೆಲ್ಲ ಅಧರ್ಮ ಗಳು ಒಂದೊಂದಾಗಿ ಹೊರಗೆ ಬಲವಾಗಿಹೋಗುತ್ತವೆ. ಸೃಷ್ಠಿ ಆದಿಯಿಂದ ಧರ್ಮಗಳು ಇವೆ. ಹಾಗೇ ಸೃಷ್ಠಿ ಆದಿಯಿಂದ ಅಧರ್ಮಗಳು ಇವೆ. ಆದರೇ ಸ್ವಲ್ಪಕಾಲ ಅಧರ್ಮಗಳು ವೃದ್ಧಿಹೊಂದಿದಾಗ ನಂತರ ಪರಮಾತ್ಮ ಭೂಮಿಮೇಲೆ ಮನುಷ್ಯನಂತೆ ಅವತರಿಸಿ ಪುನಃ ಧರ್ಮಗಳನ್ನು ತಿಳಿಸಿಹೋ ಗುತ್ತಾನೆ. ಈ ವಿಧಾನ ಸೃಷ್ಠಿ ಆದಿಯಿಂದ ಇಲ್ಲಿಯವರೆಗು ಚಕ್ರದಂತೆ ನಡೆಯುತ್ತಾ, ತಿರುಗುತ್ತಾ ಬರುತ್ತಿದೆ. ಇದರಿಂದ ಧರ್ಮಗಳು ತಿಳಿಸುವವನು ಹೊರಗಿನ ದೇವರು, ಅಧರ್ಮಗಳನ್ನು ವೃದ್ಧಿ ಮಾಡುವವನು ಒಳಗಿನ ದೇವರು ಎಂದು ಹೇಳಬಹುದು.

ಶರೀರದೊಳಗಿರುವ ಮೂರು ಆತ್ಮಗಳಲ್ಲಿ ಮಧ್ಯಾತ್ಮ ಜೀವಿಗೆ ದೇವರಾಗಿದ್ದು ಮತ್ತು ಕಾರ್ಯಕರ್ತನಾಗಿ ಇರುವುದರಿಂದ, ದೇವರಾಗಿ ಮನುಷ್ಯ ಜೀವನವನ್ನು ಸಾಗಿಸುತ್ತಿದೆ. ಮನುಷ್ಯನಲ್ಲಿ ಕಾರ್ಯಕರ್ತನಾಗಿದ್ದು ಶರೀರದಲ್ಲಿನ ಎಲ್ಲಾ ಕಾರ್ಯಗಳನ್ನು ಮಾಡುವುದರಿಂದ ಜೀವಿಯು ಬದುಕುತ್ತಿದ್ದಾನೆ. ಆತ್ಮ ಮನುಷ್ಯನೊಂದರ ಭಾವನೆಯನ್ನನುಸರಿಸಿ ಅವನಿಗೆ ಕರ್ಮವನ್ನು, ಶ್ರದ್ಧೆಯನ್ನನು ಸರಿಸಿ ಜ್ಞಾನವನ್ನು ಒದಗಿಸುತ್ತಿರುತ್ತಾನೆ. ಅಜ್ಞಾನ ಶ್ರದ್ಧೆ ಇರುವವನಿಗೆ ಅಜ್ಞಾನವನ್ನು, ಅಧರ್ಮಗಳನ್ನು ಆತ್ಮವೇ ಬೋಧಿಸುತ್ತದೆ. ಸೃಷ್ಠಿ ಆದಿಯಲ್ಲಿ ದೇವರು ಆತ್ಮವನ್ನು

ಸೃಷ್ಠಿಸಿ, ಆತ್ಮಗೆ ಕೆಲಸವನ್ನು ಕಲ್ಪಿಸಿದ್ದಾನೆ. ಸೃಷ್ಠಿ ಆದಿಯಲ್ಲಿ ದೇವರು ಆತ್ಮವನ್ನು ತಯಾರು ಮಾಡಿ ಆತ್ಮಗಿಂತ ತಾನು ಬೇರೆಯಾಗಿದ್ದೂ ಪರಮಾತ್ಮಯೆಂದು ಕರೆಯಲ್ಪಡುತ್ತಿದ್ದಾನೆ. ಪರಮಾತ್ಮ ಆತ್ಮನನ್ನು ಶರೀರದಲ್ಲಿ ದೇವರಾಗಿ ನೇಮಿಸಿದೆ. ಹಾಗೇ ಕಾರ್ಯಗಳನ್ನು ಮಾಡುವಂತೆ ಕೂಡಾ ನೇಮಿಸಿದೆ. ಪರಮಾತ್ಮ ಆಜ್ಞೆ ಪ್ರಕಾರ ಆತ್ಮ ಮನುಷ್ಯನಿಗೆ ಜ್ಞಾನವನ್ನಾಗಲಿ, ಅಜ್ಞಾನವನ್ನಾಗಲಿ ನೀಡುತ್ತಾನೆ. ಆತ್ಮ ಶರೀರದಲ್ಲಿ ದೇವರಾಗಿದ್ದೂ ತನ್ನ ತಂದೆಯಾದ ಪರಮಾತ್ಮ ಕೊಟ್ಟ ಆಜ್ಞೆಯ ಪ್ರಕಾರ ದೇವರಾಗಿ ಇರುತ್ತಿದೆ. ಆತ್ಮನನ್ನು ದೇವರನ್ನಾಗಿ ಮಾಡಿ ಪರಮಾತ್ಮ ಯಾರಿಗೂ ತಿಳಿಯದಂತೆ ಹೋಗಿದ್ದಾನೆ. ದೈವಗ್ರಂಥಗಳಲ್ಲಿ ಆತ್ಮಜ್ಞಾನ ವಿಶೇಷವಾಗಿ ಇದೆ ಆದರೆ, ಪರಮಾತ್ಮ ಜ್ಞಾನ ಬಹಳ ಕಡಿಮೆ ಇದೆ.

ಪರಮಾತ್ಮ ಸೃಷ್ಠಿ ಆದಿಯಲ್ಲಿ ಮಾಡಬೇಕಾಗಿರುವುದೆಲ್ಲಾ ಮಾಡಿ ನಂತರ ತಾನು ಏನು ಮಾಡದಂತೆ, ಯಾರಿಗೂ ತಿಳಿಯದಂತೆ, ಧರ್ಮಗಳಿಗೆ ದೊರೆಯದಂತೆ ಸ್ಥಬ್ದತೆಯಾಗಿ ಇದ್ದು ಹೋಗಿದ್ದಾನೆ. ಆಗಿನಿಂದ ಶರೀರದಲ್ಲಿ ಆತ್ಮವೇ ಜೀವಿಗೆ ದೇವರಾಗಿದ್ದೂ ಅವನ ಶ್ರದ್ಧೆಯನ್ನನುಸರಿಸಿ ಅವನಿಗೆ ಜ್ಞಾನವನ್ನು, ಮತ್ತು ಅಜ್ಞಾನವನ್ನು ಒದಗಿಸುತ್ತಿರುವುದರಿಂದ, ಮನುಷ್ಯರ ಶ್ರದ್ಧೆ ಅಜ್ಞಾನದ ಮೇಲೆ ಇರುವುದರಿಂದ, ಶರೀರದಲ್ಲಿನ ದೇವರು ಅಧರ್ಮಗಳನ್ನು ಕೂಡಾ ಬೋಧಿಸಿ ಬೆಳೆಸಿ ಪೋಷಿಸುತ್ತಿದ್ದಾನೆ. ಅಂತಹ ಸ್ಥಿತಿಯಿಂದ ಮಾನವನು ಹೊರಬಿದ್ದು, ಪುನಃ ಧರ್ಮಗಳ ಕಡೆ ಹೋಗುವುದಕ್ಕೆ ಪರಮಾತ್ಮ ಅಂಶದಿಂದ ಮಾನವ ಅವತಾರ ಹುಟ್ಟಿಬರುತ್ತಿದೆ. ಆತನನ್ನೇ **"ಭಗವಂತ"** ಎಂದು ಕರೆಯುತ್ತಿದ್ದೇವೆ. ಹಾಗೆ ಬಂದವನು ಮನುಷ್ಯನಾದರೂ ಆತನಲ್ಲಿ ದೈವ ಅಂಶ ಇರುವುದರಿಂದ ದೇವದೂತರಾದ ದೇವರ ಪಾಲಕರೆಲ್ಲರೂ ಆತನಿಗೆ ನಮಸ್ಕರಿಸುತ್ತಿದ್ದಾರೆ. ಭಗವಂತನು ಎಂದರೆ ದೇವರು ಪ್ರತ್ಯೇಕವಾಗಿ ಕಳುಹಿಸಿದ ಮಾನವನು ಎಂದು ತಿಳಿಯಬೇಕು. ಭಗವಂತನು ಕೆಲವು ಸಾವಿರ ವರ್ಷಗಳಿಗೊ, ಅಥವಾ ಲಕ್ಷಗಳ ವರ್ಷಗಳಿಗೊ ಭೂಮಿಮೇಲಕ್ಕೆ ಬರುವುದು ನಡೆಯುತ್ತಿದೆ. ಆಗ ಶರೀರದಲ್ಲಿ ಆತ್ಮದೇವರು, ಶರೀರದೊಂದಿಗೆ ಬಂದ ದೇವರು, ಸೃಷ್ಠಿ ಆದಿಯಿಂದ ತಿಳಿಯದೆ ಇರುವ ಪರಮಾತ್ಮ **ಮೂವರು** ದೇವರುಗಳಾಗಿ ಇದ್ದಾರೆ.

ಭಗವಂತನಾಗಿ ಬಂದವನು ಮನುಷ್ಯನೇ ಆದರೂ ಆತನನ್ನು 'ತಾತ್ಕಾಲಿಕ ದೇವರು' ಎಂದು ಹೇಳಬಹುದು. ಭಗವಂತನಾಗಿ ಬಂದವನು ಯಾರೊ ಯಾರಿಗೂ ತಿಳಿದಿಲ್ಲ. ಭಗವಂತನಾಗಿ ಬಂದವನು ಹೊರಗಿನ ದೇವರು ಆಗಿರುವುದರಿಂದ ಇಂತಹವನು ಭಗವಂತನೆಂದು ತಿಳಿದರು ಕೂಡಾ ಮೋಕ್ಷ ಲಭ್ಯವಾಗುತ್ತದೆ. ಇದೇ ವಿಷಯವನ್ನೇ ಭಗವದ್ಗೀತೆ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ ಒಂಭತ್ತನೆ ಶ್ಲೋಕದಲ್ಲಿ ಹೇಳಿದ್ದಾರೆ ಒಂದುಸಲ ನೋಡಿರಿ.

**ಶ್ಲೋ॥ ೯. ಜನ್ಮ ಕರ್ಮಚ ಮೇ ದಿವ್ಯ ಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮನೈತಿ ಮಾಮೇತಿ ಸೋಽರ್ಜುನ! ॥**

**ಭಾವಾರ್ಥ :– "ಸ್ವಲ್ಪಮಟ್ಟಿಗೆ ನಾನು ಇಂತಹ ಕಡೆ ಹುಟ್ಟಿದ್ದೇನೆಂದು ನನ್ನ ಜನ್ಮವನ್ನು, ನಾನು ಇಂತಹ ಕೆಲಸಗಳು ಮಾಡುತ್ತಿದ್ದೇನೆಂದು ತಿಳಿದ ಮನುಷ್ಯ ಮರಣಿಸಿದ ನಂತರ ಬೇರೆ ಜನ್ಮದಲ್ಲಿ ಹುಟ್ಟುವುದಿಲ್ಲ. ಆತನು ನೇರವಾಗಿ ನನ್ನೊಳಗೆ ಐಕ್ಯವಾಗುತ್ತಾನೆ."**

ಒಬ್ಬ ಮನುಷ್ಯ ಮೋಕ್ಷ ಹೊಂದುವುದಕ್ಕೆ ಮೊದಲು ಅವನು ಮಾಡಿಕೊಂಡ ಕರ್ಮಗಳೆಲ್ಲ ಇಲ್ಲದಂತೆ ಹೋಗಬೇಕು. ಮನುಷ್ಯ ಹೊಸ ಕರ್ಮಗಳಲ್ಲದೆ ಹಳೆ ಕರ್ಮಗಳನ್ನೇ ಅನುಭವಿಸಿದರೂ ಅವು ಇನ್ನೂ ಕೆಲವು ಜನ್ಮಗಳಿಗೆ ಸರಿಹೋಗುವ ಕರ್ಮಗಳನ್ನು ಮನುಷ್ಯ ಸಂಪಾದಿಸಿಕೊಂಡಿದ್ದಾನೆ. ಮನುಷ್ಯ ತನ್ನ ಕರ್ಮಗಳೆಲ್ಲವನ್ನು ಇಲ್ಲದಂತೆ ಮಾಡಿಕೊಂಡಾಗ ಮುಕ್ತಿ (ಮೋಕ್ಷ) ಲಭಿಸುತ್ತದೆ. ಕರ್ಮಗಳೆಲ್ಲ ಹೋಗುವುದಕ್ಕೆ ಎರಡೇ ಅವಕಾಶಗಳು ಇವೆ. ಒಂದು ಕರ್ಮಗಳನ್ನು ಹೊಸದಾಗಿ ಬಾರದಂತೆ ಮಾಡಿಕೊಂಡು ಹಳೆಯವು ಅನುಭವಿಸಿದರೇ, ಅವು ಯಾವಾಗ ಮುಗಿದುಹೋದರೆ ಆಗ ಮನುಷ್ಯನಿಗೆ ಮುಕ್ತಿ ಬರುತ್ತದೆ. ಮನುಷ್ಯ ಕರ್ಮಯೋಗದ ಮೂಲಕ ಕರ್ಮಗಳನ್ನು ಅಂಟದಂತೆ ಮಾಡಿಕೊಳ್ಳಬಹುದು. ಆದರೇ ಮನುಷ್ಯನಿಗೆ ಕರ್ಮಯೋಗ ಎಂದರೆ ಏನೋ ತಿಳಿದಿಲ್ಲ. ಮನುಷ್ಯ ಎಷ್ಟು ಜ್ಞಾನ ತಿಳಿದರೂ ಯೋಗ ಎಂದರೆ ಏನೋ, ಹೇಗೆ

ಆಚರಿಸಬೇಕೋ ತಿಳಿಯದ ಸ್ಥಿತಿಯಲ್ಲಿ ಇದ್ದಾನೆ. ಆಗ ಒಳ್ಳೆಯ ಗುರು ಲಭಿಸಿ ಕರ್ಮಯೋಗ ತಿಳಿದು, ಕರ್ಮಯೋಗಿಯಾಗಿ ಬದಲಾದರೆ ಸ್ವಲ್ಪ ಕಾಲಕ್ಕಾದರೂ, ಕೆಲವು ಜನ್ಮಗಳಿಗಾದರೂ ಅವನ ಕರ್ಮ ಮುಗಿದು ಹೋಗುತ್ತದೆ. ಆಗ ಅವನು ಮುಕ್ತಿ ಹೊಂದುವುದಕ್ಕೆ ಅವಕಾಶವಿರುತ್ತದೆ.

ಭಗವದ್ಗೀತೆಯಲ್ಲಿ ದೇವರು ಎರಡು ಯೋಗಗಳನ್ನು ಹೇಳಿದ್ದಾನೆ. ಆತ್ಮ ಧರ್ಮಗಳ ಪ್ರಕಾರ ಅಥವಾ ದೈವ ಧರ್ಮಗಳ ಪ್ರಕಾರ ಕರ್ಮಯೋಗ, ಬ್ರಹ್ಮಯೋಗ ಎಂದು ಎರಡು ಯೋಗಗಳು ಇವೆ. ಮೂರನೆಯದು ಭಕ್ತಿಯೋಗ ಎನ್ನುವುದು ಇದೆ. ಅದು ಧರ್ಮಗಳಿಗೆ ಅತೀತವಾದುದು. ಭಕ್ತಿಯೋಗ ಬಹಳ ಪ್ರತ್ಯೇಕವಾದುದು. ಏಕೆಂದರೆ! ಕರ್ಮಯೋಗದಲ್ಲಿ ಒಂದು ವರ್ಷ ಕಾಲದಲ್ಲಿ ಸುಟ್ಟುಹೋಗುವ ಕರ್ಮ **ಭಕ್ತಿಯೋಗದಲ್ಲಿ** ಒಂದೇ ದಿನ ಸುಟ್ಟುಹೋಗುತ್ತದೆ. ಬಹಳ ವೇಗವಾಗಿ ಕರ್ಮನಾಶವಾಗುವ ಯೋಗ ಭಕ್ತಿಯೋಗ. ನಮ್ಮ ಶರೀರದಲ್ಲಿನ ಮನಸ್ಸನ್ನು ಅಡಗಿಸಿಹಾಕಿದರೆ ಮನಸ್ಸು ಕೆಲಸ ಮಾಡದ ಕಾಲದಲ್ಲಿ ಬ್ರಹ್ಮಯೋಗ ಆಗುತ್ತದೆ. ಮನಸ್ಸನ್ನು ಕೆಲಸ ಮಾಡದಂತೆ ಮಾಡುವುದು ಬಹಳ ಕಷ್ಟವಾದುದು. ಏಕೆಂದರೆ! ಮನಸ್ಸು ಬಹಳ ಬಲವಾದುದು, ಅದು ಮನುಷ್ಯನ ಪ್ರಯತ್ನಕ್ಕೆ ಒಳಗಾಗದೆ ತೊಂದರೆಕೊಡುತ್ತದೆ. ಆದ್ದರಿಂದ ವೇಮನಯೋಗಿ ತನ್ನ ಪದ್ಯಗಳಲ್ಲಿ ಮನಸ್ಸನ್ನು ಕುರಿತು ಒಂದು ಪದ್ಯದಲ್ಲಿ ಹೇಳಿದ್ದಾನೆ. ಆ ಪದ್ಯವನ್ನು ಅದರ ಭಾವನೆಯನ್ನು ಕೆಳಗೆ ನೋಡಿರಿ.

***ನಾಯಿಯನ್ನು ತಿಂದವನು ಗುರುಲಿಂಗ ಜಂಗಮ***
***ಹಂದಿಯನ್ನು ತಿಂದವನು ಪರಮಯೋಗಿ***
***ಆನೆಯನ್ನು ತಿಂದವನು ಎಷ್ಟು ಸುಜ್ಞಾನಿಯೋ***
***ವಿಶ್ವದಾಭಿರಾಮ ಕೇಳೋ ವೇಮಾ.***

**ಭಾವಾರ್ಥ :–** ನಮ್ಮ ಶರೀರದಲ್ಲಿ ಮನಸ್ಸು ನಾಯಿಯಂತೆ ಅತಿ ಚಂಚಲವಾದುದು. ಒಂದು ಕ್ಷಣ ಕೂಡಾ ಸ್ಥಿರವಾಗಿರದೆ ನಾಯಿ ಮನೆಮನೆ ತಿರುಗಿದಂತೆ ಮನಸ್ಸು ಕೂಡಾ ವಿಷಯಗಳ ಮೇಲೆ ಚಲಿಸುತ್ತಿರುತ್ತದೆ. ನಾಯಿಯಂತೆ ಚಂಚಲವಾದ ಮನಸ್ಸನ್ನು ಯಾರು ಜಯಿಸುತ್ತಾರೊ ಅವರು ನಿಜವಾಗಲೂ ಗುರುವಿಗೆ ಸಮಾನ. ಗುರುವು ಮನಸ್ಸನ್ನು ಜಯಿಸಿ ಇರುವವನೆನ್ನುವ ವಿಷಯವನ್ನು 'ನಾಯಿಯನ್ನು ತಿಂದವನು ಗುರುಲಿಂಗನೆಂದು' ಮೇಲಿನ ಪದ್ಯದಲ್ಲಿ ಹೇಳಿದ್ದಾರೆ.

ಮನಸ್ಸು ಚಂಚಲವಾದುದೇ ಅಲ್ಲದೆ ಪರಮನೀಚವಾದ ವಿಷಯಗಳ ಮೇಲಕ್ಕೆ ಕೂಡಾ ಹೋಗುತ್ತಿರುತ್ತದೆ. ಆದ್ದರಿಂದ ಇದನ್ನು ಹಂದಿಗೆ ಸಮಾನವಾಗಿ ಹೋಲಿಸಿ ಅದನ್ನು ಜಯಿಸಿದ ಪರಮಯೋಗಿ ಎಂದು ತಿಳಿಸುತ್ತಾ 'ಹಂದಿಯನ್ನು ತಿಂದವನು ಪರಮಯೋಗಿ' ಎಂದು ವರ್ಣಿಸಿದ್ದಾರೆ.

ಮನಸ್ಸು ಚಂಚಲವಾದುದು, ನೀಚವಾದುದೇ ಅಲ್ಲದೆ ದೃಢವಾದುದು, ಬಲವಾದುದಾಗಿ ಕೂಡಾ ಇದೆ. ಅದನ್ನು ಜಯಿಸಬೇಕೆಂದು ಪ್ರಯತ್ನ ಮಾಡಿದವರಿಗೆ ಸುಲಭವಾಗಿ ಒಳಗಾಗುವುದಿಲ್ಲ. ಎಷ್ಟು ಬಲವಾಗಿ ಮನಸ್ಸನ್ನು ನಿಲ್ಲಿಸಬೇಕೆಂದು ಪ್ರಯತ್ನ ಮಾಡಿದರೂ ಅದು ಬಲವಾದುದು ಆದ್ದರಿಂದ ಹೋಗುತ್ತಲೇ ಇರುತ್ತದೆ. ಪ್ರಯತ್ನವೆನ್ನುವ ಹಗ್ಗಗಳಿಗೆ ನಿಲ್ಲದೆ ನಮ್ಮನ್ನು ಸುಲಭವಾಗಿ ಸೆಳೆದುಕೊಂಡು ಹೋಗುವ ಮನಸ್ಸು ಬಲವಾದುದಾಗಿ ವರ್ಣಿಸುತ್ತಾ ಅದನ್ನು ಆನೆಗೆ ಹೋಲಿಸಿ ಹೇಳಿದ್ದಾರೆ. ಅಂತಹ ಬಲವಾದ ಮನಸ್ಸನ್ನು ಜಯಿಸಿದವನು ಸುಜ್ಞಾನಿ ಎಂದು ಹೇಳುತ್ತಾ 'ಆನೆಯನ್ನು ತಿಂದವನು ಎಷ್ಟೋ ಸುಜ್ಞಾನಿ' ಎಂದು ಹೇಳಿದ್ದಾರೆ.

ಮನಸ್ಸು ಚಂಚಲವಾದುದು ಆದ್ದರಿಂದ ನಾಯಿಯಾಗಿಯೂ, ನೀಚವಾದುದು ಆದ್ದರಿಂದ ಹಂದಿಯಾಗಿಯೂ, ಬಲವಾದುದು ಆದ್ದರಿಂದ ಆನೆಯಾಗಿ ವರ್ಣಿಸಿ ಅದನ್ನು ಜಯಿಸುವುದನ್ನು ತಿಂದು ಇಲ್ಲದಂತೆ ಮಾಡುವುದೆಂದು ವರ್ಣಿಸಿ ಹೇಳಿದ್ದಾರೆ.

ಮನುಷ್ಯನ ಶರೀರದಲ್ಲಿ ಅಂತಃಕರಣಗಳಲ್ಲಿ ಒಂದಾದ ಅಹಮ್‌ನನ್ನು ಅಡಗಿಸಿಹಾಕಿದರೆ ಆಗ ಕರ್ಮಯೋಗವಾಗುತ್ತದೆ. ಕರ್ಮಯೋಗ ಮನುಷ್ಯರಿಗೆ ತಿಳಿಯದೆ ಬಹಳಜನ ಸನ್ಯಾಸತ್ವವನ್ನು ತೆಗೆದುಕೊಂಡು ಕಾಷಾಯ (ಕಾವಿ) ವಸ್ತ್ರಗಳನ್ನು ಧರಿಸಿದ್ದಾರೆ. ಕರ್ಮಯೋಗ ಕೆಲಸಗಳನ್ನು ಮಾಡುವುದರಲ್ಲಿಯೇ ಇದೆ. ಪ್ರಪಂಚದಲ್ಲಿ ಕಾರ್ಯಗಳನ್ನು ಮಾಡುತ್ತಾ ಯೋಗ ಮಾಡುವ ವಿಧಾನ ಬಹಳಜನ ಜ್ಞಾನಿಗಳಿಗೆ ತಿಳಿದಿಲ್ಲ. ಕರ್ಮಯೋಗ ಆದರೂ, ಬ್ರಹ್ಮಯೋಗ ಆದರೂ ಎರಡೂ ನಿಯಮಗಳಿಂದ ಕೂಡಿಕೊಂಡಿರುವವಾಗಿ ಇರುತ್ತವೆ. ಭಕ್ತಿಯೋಗ ನಿಯಮಗಳು ಇಲ್ಲದ್ದಾಗಿರುತ್ತದೆ. ಮನುಷ್ಯ ಭಕ್ತಿಯೋಗದಲ್ಲಿ ಜೀವನವೆಲ್ಲ ಅನುಭವಿಸಬೇಕಾದ ಕರ್ಮವನ್ನು ಕೆಲವು ದಿನಗಳಲ್ಲಿಯೇ ಇಲ್ಲದಂತೆ ಮಾಡಿಕೊಳ್ಳಬಲ್ಲನು. ಅವನು ಮಾಡಿಕೊಳ್ಳುವುದು ಏನೂ ಇಲ್ಲ ಅದೇ ಭಸ್ಮವಾಗಿಹೋಗುತ್ತದೆ. ಅಂತಹ ಭಕ್ತಿ ಯೋಗದಿಂದ ಸುಲಭವಾಗಿ ಮುಕ್ತಿ ಹೊಂದಬಹುದು. ಪರಮಾತ್ಮ ಧರ್ಮಸಂಸ್ಥಾಪನೆಗಾಗಿ ಭೂಮಿಮೇಲೆ ಮನುಷ್ಯನ ಅವತಾರದಲ್ಲಿ ಬಂದಾಗ ಆತನು ಯಾರಿಗೂ ತಿಳಿಯದೇ ಇರುತ್ತಾನೆ. ಆದರೇ ಆತನು ಬೋಧಿಸುವ ಧರ್ಮಗಳನ್ನನುಸರಿಸಿ, ಜ್ಞಾನವನ್ನನುಸರಿಸಿ ಆತನು ಇಂತಹವನೆಂದು ಗುರುತಿಸುವುದಕ್ಕೆ ಅವಕಾಶವಿದೆ. ಜ್ಞಾನ, ಧರ್ಮಗಳ ಆಧಾರದಿಂದಲೇ ಆತನನ್ನು ಗುರುತಿಸಬಹುದು. ಆದರೇ ನಮಗೆ ತಿಳಿದು ಭಾರತದೇಶದಲ್ಲಿ ಐದುಸಾವಿರ ವರ್ಷಗಳ ಪೂರ್ವದಲ್ಲಿ ಒಂದುಸಲ, ಇಜ್ರಯೇಲ್ ದೇಶದಲ್ಲಿ ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಒಂದುಸಲ ದೇವರು ಭಗವಂತನಾಗಿ ಬಂದು ಹೋದಂತೆ ಕೆಲವು ಆಧಾರಗಳು ಲಭಿಸಿವೆ. ಆದರೇ ಆತನು ಬಂದುಹೋದ ನಂತರ ಇಂತಹವನು ಭಗವಂತನು ಎಂದು ತಿಳಿದರೂ ಪ್ರಯೋಜನೆಯಿಲ್ಲ. ಪ್ರಸ್ತುತ ಕಾಲದಲ್ಲಿ ಎಂದರೇ ವ್ಯಕ್ತಮಾನ ಕಾಲದಲ್ಲಿ (ವರ್ತಮಾನ ಕಾಲದಲ್ಲಿ) ಭಗವಂತನ ಜನ್ಮವನ್ನು ಕುರಿತು ತಿಳಿದರೆ ಅಂತಹವನ ಜನ್ಮ ಸಾರ್ಥಕವಾದಂತೆ. ಅವನು ಸುಲಭವಾಗಿ ಮೋಕ್ಷ ಹೊಂದುತ್ತಾನೆ. ಅವನಿಗಿಂತ ಅದೃಷ್ಟವಂತನು ಇನ್ನೊಬ್ಬನಿರುವುದಿಲ್ಲ.

ನನಗೆ ತಿಳಿದು ಐದುಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು ಭಗವಂತನಾಗಿ ಭೂಮಿಮೇಲಕ್ಕೆ ಬಂದಿದ್ದಾನೆ. ಆಗ 126 ವರ್ಷಗಳು ಬದುಕಿದರೂ ಎಂದೂ ಆತನು ಜ್ಞಾನವನ್ನು ಹೊರಗೆ ಹೇಳಲಿಲ್ಲ. ಆತನು ಜೀವನದಲ್ಲಿ ಒಳ್ಳೆಯ ಕೆಟ್ಟ ಕಾರ್ಯಗಳು ಮಾಡುತ್ತಾ ಜೀವಿಸಿದ್ದಾನೆ. ಆತನ ಜೀವನವನ್ನು ನೋಡಿದರೆ ಆತನನ್ನು ಭಗವಂತನು ಎನ್ನುವುದಕ್ಕೆ ಯಾವ ಅವಕಾಶವು ಇಲ್ಲ. ಹೇಗೆ ಬದುಕಿದರೂ ಅದನ್ನು ಬಿಟ್ಟು ನೋಡಿದರೆ ಆತನು ತನ್ನ ಜೀವನದಲ್ಲಿ ಒಂದುಸಲ ಹೊರತುಪಡಿಸಿ ಯಾವಾಗಲೂ ದೈವಜ್ಞಾನವನ್ನು ಹೇಳಲಿಲ್ಲ. ಅದೂ ಆತನು ಹೇಳಿದಂತೆ ಅರ್ಜುನನು ಹೇಳಿದರೆ ಕೇಳಿದ್ದೇವೆ, ಅಷ್ಟೇಹೊರತು ಆತನು ಜ್ಞಾನ ಹೇಳಿರುವುದು ಮನುಷ್ಯರು ಯಾರೂ ನೋಡಲಿಲ್ಲ. ಆತನು ಇರುವ ದಿನಗಳಲ್ಲಿ ಕೃಷ್ಣನು ಯುದ್ಧರಂಗದಲ್ಲಿ ಅರ್ಜುನನಿಗೆ ಜ್ಞಾನ ಹೇಳಿದ್ದಾನೆಂದು ಕೂಡಾ ಯಾರಿಗೂ ಗೊತ್ತಿಲ್ಲ. ನಂತರ ಸ್ವಲ್ಪ ಕಾಲಕ್ಕೆ ವ್ಯಾಸನು ಭಗವದ್ಗೀತೆಯನ್ನು ಗ್ರಂಥರೂಪವಾಗಿ ಬರೆದಾಗ ಅದು ಕೃಷ್ಣನು ಹೇಳಿದ ಜ್ಞಾನವೆಂದು ತಿಳಿದಿದೆ. ಅಲ್ಲಿಗೆ ಕೃಷ್ಣನು ಮರಣಿಸಿದ್ದಾನೆ ಆದ್ದರಿಂದ ಆತನನ್ನು ಕುರಿತು ನಂತರ ತಿಳಿದುಕೊಂಡರೂ ಪ್ರಯೋಜನವಿಲ್ಲ. ಆತನು ಬದುಕಿರುವಾಗ ಕೃಷ್ಣನನ್ನು ಕುರಿತು ತಿಳಿಯುವುದಕ್ಕೆ ಆತನ ಜೀವನದಲ್ಲಿ ಜ್ಞಾನ ಯಾವ ಕೋನದಲ್ಲಿ ನೋಡಿದರೂ ಯಾರಿಗೂ ಕಾಣಿಸಲಿಲ್ಲ. ಆತನು ಜ್ಞಾನ ಹೇಳಿದ್ದಾನೆಂದು ಕೇಳಿದ್ದೇವೆ ಹೊರತು ನೋಡಿರುವುದು ಇಲ್ಲ. ಅಷ್ಟೇಅಲ್ಲದೆ ಆತನು ಇತರರಿಗೆ ಯಾರಿಗೂ ಹೇಳಲಿಲ್ಲ ತನಗೆ ಬಂಧುವಾದ ಅರ್ಜುನನಿಗೆ ಮಾತ್ರವೇ ಹೇಳಿದ್ದಾನೆ. ಯಾರಿಗೂ ತಿಳಿಯದಂತೆ ರಹಸ್ಯವಾಗಿ ಎರಡನೆ ಮನುಷ್ಯನಿಗು ಕೂಡಾ ತಿಳಿಯದಂತೆ ಹೇಳಿದ್ದಾನೆ. ಇದೆಲ್ಲವೂ ನೋಡಿದರೆ ಆತನು ಹೇಳಿದ್ದಾನೊ ಇಲ್ಲವೊ ಅರ್ಜುನನು, ವ್ಯಾಸನು ಇಬ್ಬರು ಸೇರಿ ಕೃಷ್ಣನು ಹೇಳಿದ್ದಾನೆಂದು ಪುಕಾರು ಎಬ್ಬಿಸಿದ್ದಾರೋ ಎಂದು ಅನುಮಾನ ಬರೆದೆಇರುವುದಿಲ್ಲ. ಭಗವದ್ಗೀತೆ ಯನ್ನು ಕೃಷ್ಣನು ಹೇಳಿದ್ದಾನಾ? ಅಥವಾ ಕೃಷ್ಣನು ಹೇಳಿದ್ದಾನೆಂದು ಅರ್ಜುನನೇ ಹೇಳಿದ್ದಾನಾ? ಇದೆಲ್ಲವೂ ಅಲ್ಲದೆ ವ್ಯಾಸನೇ ಜ್ಞಾನವನ್ನು ಹೇಳಿ ಅರ್ಜುನನ

ಮೇಲೆ, ಕೃಷ್ಣನ ಮೇಲೆ ಹೇಳುತ್ತಿದ್ದಾನಾ? ಎಂದು ಅನುಮಾನ ಬರುವುದಕ್ಕೆ ಅವಕಾಶ ಇದೆ. ಇವು ಅನುಮಾನಗಳೇ ಹೊರತು ವಾಸ್ತವಗಳು ಅಲ್ಲ.

ಕೃಷ್ಣನು ಬಂದಾಗ ಆತನ ವಯಸ್ಸು ಸುಮಾರು 90 ವರ್ಷಗಳ ನಂತರ ಜ್ಞಾನವನ್ನು ಅರ್ಜುನನಿಗೆ ಹೇಳುವುದು ನಡೆದಿದೆ. ಹೇಳಿದರೂ ಕೂಡಾ ತಿಂಗಳಲ್ಲೋ, ವರ್ಷದಲ್ಲೋ ಅಲ್ಲ ಕೇವಲ ಹತ್ತು ನಿಮಿಷಗಳ ಒಳಗೇ ಐದು ಅಥವಾ ಆರು ನಿಮಿಷಗಳಲ್ಲಿ ಹೇಳುವುದು ನಡೆದಿದೆ. ಕೃಷ್ಣನು ಹೇಳಿದರೂ ಅರ್ಜುನನ ಮುಖಾಂತರ ಕೇಳಿದ ವ್ಯಾಸನು ಅದನ್ನು ಗ್ರಂಥ ರೂಪದಲ್ಲಿ ಬರೆದು 'ಭಗವದ್ಗೀತೆ' ಎಂದು ಹೆಸರು ಇಟ್ಟಿದ್ದಾನೆ. ಹಾಗೆ ಹೆಸರು ಇಡುವುದರಿಂದ ಕೃಷ್ಣನು ಭಗವಂತನೆಂದು ತಿಳಿಯುವುದಕ್ಕೆ ಅವಕಾಶವಿದೆ. ಅದು ಕೃಷ್ಣನಿಗೆ ಇಷ್ಟವಿಲ್ಲ. ಭಗವದ್ಗೀತೆ ಗ್ರಂಥರೂಪವಾಗಿ ಕೃಷ್ಣನು ಹೇಳಿದ ಎರಡು ವರ್ಷಗಳಿಗೇ ತಯಾರಾಗಿದೆ. ಆಗ ಇತರ ದೇಶದಲ್ಲಿರುವ 'ಮೋಷೇ' ಎನ್ನುವ ಪ್ರವಕ್ತರಿಗೆ ಕೃಷ್ಣನು ಸ್ವಪ್ನದಲ್ಲಿ ಕಾಣಿಸಿ ತನ್ನ ಗ್ರಂಥವನ್ನು ಆತನಿಗೆ ಕೊಟ್ಟು ಅದರ ಹೆಸರು "ತೌರಾತ್" ಎಂದು ಹೇಳುವುದು ನಡೆದಿದೆ. ಈ ವಿಧವಾಗಿ ಭಗವದ್ಗೀತೆ ಹೆಸರನ್ನು ಸ್ವತಃವಾಗಿ ಕೃಷ್ಣನೇ ಭಗವದ್ಗೀತೆ ಎಂದು ಹೇಳದೆ ತೌರಾತ್ ಎಂದು ಅರ್ಥದಿಂದ ಕೂಡಿಕೊಂಡ ಹೆಸರನ್ನು ಹೇಳುವುದಾಗಿದೆ. ಭಗವದ್ಗೀತೆಯಲ್ಲಿ ಭಗವಂತನು ಎಂದು ಇರುವುದರಿಂದ ಭಗವಂತನು ಹೇಳಿರುವುದು ಭಗವದ್ಗೀತೆಯೆಂದು ಎಲ್ಲರೂ ಅನ್ನುವುದರಿಂದ ತನ್ನ ವಿಷಯ ಹೊರಗೆ ಬರುವ ಅವಕಾಶ ಇದೆಯೆಂದು ಇತರ ದೇಶಗಳಲ್ಲಿ ಅದೇ ಭಗವದ್ಗೀತೆಯನ್ನೇ ಇತರೆ ಹೆಸರುಗಳಿಂದ ಕರೆಯುವಂತೆ ಮಾಡಿದ್ದಾನೆ. ಅದು ದೇವರ ಸಂಕಲ್ಪವಾದ್ದರಿಂದ ತೌರಾತ್ ಎಂದರೇ ಭಗವದ್ಗೀತೆಯೆಂದು ಇಲ್ಲಿಯವರೆಗು ನಮಗೆ ಹೊರತುಪಡಿಸಿ ಯಾರಿಗೂ ತಿಳಿದಿಲ್ಲ. ಮೋಷೇ ಆದಿನ ಭಗವದೀತೆ (ತೌರಾತ್) ಗ್ರಂಥದಲ್ಲಿನ ಜ್ಞಾನವನ್ನು ಹೊರಗೆ ಹೇಳಿದರೂ ಅದು ಭಗವದ್ಗೀತೆ ಜ್ಞಾನವೆಂದು ಯಾರಿಗೂ ತಿಳಿದಿಲ್ಲ. ಆದಿನ ಮೋಷೇ ಹೇಳಿದ ಜ್ಞಾನವನ್ನು ಧರ್ಮಶಾಸ್ತ್ರದೊಳಗಿನದ್ದು ಎಂದು ಹೇಳಿದ್ದಾರೆ ಹೊರತು ಅದು ಭಗವದ್ಗೀತೆ

ಯೆಂದು ತಿಳಿದಿಲ್ಲ. ಈ ದಿನ ಕ್ರೈಸ್ಥವ ಮತದವರಿಗೆ ಮೋಷೇ ಹೆಸರು ಪರಿಚಯವಾದುದೇ ಆದರೇ ಅವರು ಮೋಷೇ ಹೇಳಿರುವುದನ್ನು 'ಮೋಷೇ ಧರ್ಮಶಾಸ್ತ್ರ' ಎಂದು ಹೇಳುತ್ತಿದ್ದಾರೆ ಹೊರತು ಅದು ಮೋಷೇಗಿಂತ ಮೊದಲು ಯಾರಿಂದ ಬಂದಿದೆಯೆಂದು ತಿಳಿದಿಲ್ಲ. ಮೋಷೇ ಧರ್ಮಶಾಸ್ತ್ರವೇ ತೌರಾತ್ ಯೆಂದು, ತೌರಾತ್‌ಯೇ ಭಗವದ್ಗೀತೆಯೆಂದು ತಿಳಿಯುವುದಕ್ಕೆ ಅವಕಾಶವಿರುವು ದರಿಂದ ಮೋಷೇ ನಂತರ ತೌರಾತ್‌ಅನ್ನು ಯಾರೂ ನೋಡಲಿಲ್ಲ. ಮೋಷೇ ಇದ್ದಾಗ ಕೂಡಾ ಮೋಷೇ ಹೊರತು ತೌರಾತ್ ಗ್ರಂಥವನ್ನು ಯಾರೂ ನೋಡಲಿಲ್ಲ. ಆದ್ದರಿಂದ ಭಗವದ್ಗೀತೆ ತೌರಾತ್‌ಯೆಂದು, ತೌರಾತ್‌ಯೇ ಮೋಷೇ ಧರ್ಮಶಾಸ್ತ್ರವೆಂದು ತಿಳಿಯುವುದಕ್ಕೆ ಅವಕಾಶವೇ ಇಲ್ಲದಂತೆ ಹೋಗಿದೆ. ಮೋಷೇ ಧರ್ಮಶಾಸ್ತ್ರ ಎನ್ನುವ ಹೆಸರು ಹೊರತು ಅದು ಯಾವುದೊ ಕ್ರೈಸ್ಥರಿಗೆ ತಿಳಿದಿಲ್ಲ. ಹಾಗೇ ತಮಗೆ ಪರಿಚಯವಿರುವ ಹೆಸರು ತೌರಾತ್‌ಯೆಂದು ಮುಸ್ಲಿಮರು ಹೇಳಿದರೂ ಅದು ಏನೋ ಮುಸ್ಲಿಮ್‌ರಿಗೆ ಯಾರಿಗೂ ತಿಳಿದಿಲ್ಲ. ಆದ್ದರಿಂದ ಭಗವದ್ಗೀತೆ ಜ್ಞಾನ ಎಲ್ಲಾ ಮತಗಳವರೆಗು ಹರಡಿದರೂ ಭಗವದ್ಗೀತೆ ಹೆಸರು ಮಾತ್ರ ಹಿಂದೂಗಳ ಹತ್ತಿರವೇ ನಿಂತುಹೋಗಿದೆ. ಹಿಂದೂಗಳಿಗೆ ಕೂಡಾ ತೌರಾತ್ ಎಂದರೆ ಭಗವದ್ಗೀತೆಯೆಂದು ತಿಳಿದಿಲ್ಲ.

**ಪ್ರಶ್ನೆ :– ಭಗವದ್ಗೀತೆ ಜ್ಞಾನ ಇತರ ದೇಶಗಳಲ್ಲಿ ಕೆಲವರಿಗೆ ಅವರ ಗ್ರಂಥಗಳು ಹೊರಗೆ ಬಾರದೆಯೇ ಧರ್ಮಶಾಸ್ತ್ರವಾಗಿ ತಿಳಿದಿದ್ದರೆ ಆ ಕಾಲದಲ್ಲಿ ಜ್ಞಾನಿಗಳಾ ದವರಲ್ಲಿ ಕೂಡಾ ಭಗವದ್ಗೀತೆ ಜ್ಞಾನ ಕಾಣಿಸಲಿಲ್ಲ. ಯೇಸು ದೇವರನ್ನು ಭಗವದ್ಗೀತೆ ಪ್ರಕಾರ ಆತ್ಮನನ್ನೊ, ಪರಮಾತ್ಮನನ್ನೊ ಹೇಳದೆ ಆತ್ಮವನ್ನು ತಂದೆಯೆಂದು, ದೇವರನ್ನು ಪರಿಶುದ್ಧಾತ್ಮಯೆಂದು ಏಕೆ ಹೇಳಿದ್ದಾನೆ? ಇದಕ್ಕೆ ಉತ್ತರ ಹೇಳಿರಿ.**

**ಉತ್ತರ :–** ಮೋಷೇ ಯೇಸು ಹುಟ್ಟುವುದಕ್ಕಿಂತ ಮೊದಲೆ ತನಗೆ ತಿಳಿದ ತೌರಾತ್ ಗ್ರಂಥವೊಂದರ ಜ್ಞಾನವನ್ನು ಹೇಳಿದ್ದಾನೆ. ಯೇಸುಗಿಂತ ಮೂರುಸಾವಿರ ವರ್ಷಗಳ ಹಿಂದೆ ಮೋಷೇ ಹೇಳಿದ ಧರ್ಮಶಾಸ್ತ್ರ ಬೆಳಕಿಗೆ ಬಂದಿದೆ. ಯೇಸು ಹುಟ್ಟಿದ ನಂತರ ಯೇಸು ಜೀವನ ಬಡತನದಲ್ಲಿಯೇ ಕಳೆದಿದೆ. ಯೇಸುಗೆ

ಮೂವತ್ತು ವರ್ಷಗಳ ವಯಸ್ಸು ಬರುವವರೆಗು ತಾಯಿ ಹತ್ತಿರವೇ ತನ್ನ ಕುಟುಂಬದಲ್ಲಿ ಬೆರೆತಿದ್ದಾನೆ. ಮೂವತ್ತು ವರ್ಷಗಳ ನಂತರ ಯೇಸು ಮನೆಬಿಟ್ಟು ಬಂದು ಪ್ರಜೆಗಳ ಮಧ್ಯದಲ್ಲಿ ಮೂರು ವರ್ಷಗಳಿಂದ ಜ್ಞಾನವನ್ನು ಬೋಧಿಸಿದ್ದಾನೆ. ಯೇಸು ತನ್ನ ಮೂವತ್ತು ವರ್ಷಗಳ ಜೀವನದಲ್ಲಿ ಯಾವಾಗ ಜ್ಞಾನವನ್ನು ಕುರಿತು ಕಲಿಯಲಿಲ್ಲ. ಯೇಸು ತಾಯಿಯನ್ನು ಸೋದರರನ್ನು ಬಿಟ್ಟು ಹೊರಗೆ ಬಂದು ಸ್ವತಃವಾಗಿ ದೇವರ ಜ್ಞಾನವನ್ನು ಪ್ರಜೆಗಳಿಗೆ ಬೋಧಿಸುವುದು ಆರಂಭಮಾಡಿದ್ದಾನೆ. ಆತನು ಬೋಧಿಸಿದ ಜ್ಞಾನ ಆತನು ಕಲಿತಿರುವುದು ಅಲ್ಲ. ಆತನು ಹುಟ್ಟುವುದಕ್ಕಿಂತ ಮೊದಲೇ ಆತನಿಗೆ ಜ್ಞಾನ ತಿಳಿದಿದೆ. ಆತನು ಬೋಧಿಸಿದ ಜ್ಞಾನ ಭಗವದ್ಗೀತೆ ಜ್ಞಾನಕ್ಕೆ ಸಮಾನವಾದುದು. ಕೃಷ್ಣನು ಹೇಳಿದ ಭಾಷೆಗು, ಯೇಸು ಹೇಳಿದ ಭಾಷೆಗು ವ್ಯತ್ಯಾಸ ಇರಬಹುದು ಆದರೆ ಜ್ಞಾನದಲ್ಲಿ ಯಾವ ವ್ಯತ್ಯಾಸವಿಲ್ಲ. ಹೇಳಿದ ಜ್ಞಾನ ಬೇರೆಯಾಗಿರುವಂತೆ ಕಾಣಿಸಿದರೂ ಎರಡು ಜ್ಞಾನಗಳ ಭಾವ ಮಾತ್ರ ಒಂದೇ ಇರುತ್ತದೆ.

ಉದಾಹರಣೆಗೆ ಹೇಳಿದರೆ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ **ಕ್ಷರನು, ಅಕ್ಷರನು, ಪುರುಷೋತ್ತಮನು** ಎಂದು ಮೂರು ಹೆಸರುಗಳು ಹೇಳಿದ್ದಾನೆ. ದೇವರು ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ವಿಭಜನೆಯಲ್ಲಿನ ಮೂರು ಆತ್ಮಗಳ ಹೆಸರುಗಳನ್ನು ಕ್ಷರ, ಅಕ್ಷರ, ಪುರುಶೋತ್ತಮರಾಗಿ ಹೇಳಿದ್ದಾನೆ. ಅದೇ ವಿಷಯವನ್ನೇ ಯೇಸು ಕೂಡಾ ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ **"ತಂದೆ, ಕುಮಾರನು, ಪರಿಶುದ್ಧಾತ್ಮ"** ಎಂದು ಮೂರು ಹೆಸರುಗಳನ್ನು ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿದ ಮೂರು ಆತ್ಮಗಳ ಹೆಸರುಗಳು ಬೇರೆ ಇರುವಾಗ ಅದೇ ಮೂರು ಆತ್ಮಗಳನ್ನೇ ಯೇಸು ಹೇಳಿದ್ದಾನೆ. ಆದರೇ ಭಾಷೆ ಬೇರೆಬೇರೆಯಾಗಿ ಇರುವುದರಿಂದ ಭಗವದ್ಗೀತೆಯಲ್ಲಿನದೇ ಬೈಬಲ್‌ನಲ್ಲಿ ಇದೆಯೆಂದು, ಕೃಷ್ಣನು ಹೇಳಿರುವುದೇ ಯೇಸು ಹೇಳಿದ್ದಾನೆಂದು ಪ್ರಜೆಗಳು ಗ್ರಹಿಸದಂತಿದ್ದಾರೆ. ಕೃಷ್ಣನು ಹೇಳಿರುವುದು ಕ್ರಮವಾಗಿ ಕ್ಷರನು, ಅಕ್ಷರನು,

ಪುರುಷೋತ್ತಮನು ಎಂದು ಇದೆ. ಆದರೇ ಯೇಸು ಹೇಳಿರುವುದು ವರಸೆ ಕ್ರಮದಲ್ಲಿ ಮುಂದೆ ಹಿಂದೆ ಇರುವುದು ಹೊರತು ಬೇರೆ ಏನು ಇಲ್ಲ. **ಕ್ಷರನು** ಎನ್ನುವ ಪದಕ್ಕೆ ಸಮಾನವಾದುದು **ಕುಮಾರನು**. ಹಾಗೆ **ಅಕ್ಷರನು** ಎನ್ನುವ ಪದಕ್ಕೆ ಸಮಾನವಾದುದು **ತಂದೆ. ಪುರುಷೋತ್ತಮನು** ಎನ್ನುವ ಪದಕ್ಕೆ ಸಮಾನವಾದುದು **ಪರಿಶುದ್ಧಾತ್ಮಯೆಂದು** ಹೇಳಬಹುದು. ಭಗವದ್ಗೀತೆ ಪ್ರಕಾರವಾದರೆ ಮೊದಲು ಕುಮಾರನು, ತಂದೆ ನಂತರ ಪರಿಶುದ್ಧಾತ್ಮಯೆಂದು ಹೇಳಬೇಕು. ಆದರೇ ಮೊದಲು ತಂದೆಯೆಂದು ಹೇಳಿ ನಂತರ ಕುಮಾರನೆಂದು ಹೇಳುವುದಾಗಿದೆ. ಹೇಗೆ ಹೇಳಿದರೂ ಕುಮಾರನಿಗಿಂತ ತಂದೆ ದೊಡ್ಡವನು, ತಂದೆಗಿಂತ ದೊಡ್ಡವನು ಪರಿಶುದ್ಧಾತ್ಮಯೆಂದು ಹೇಳಬಹುದು. ವರಸೆ ಕ್ರಮದಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮಯೆಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೇ ನಾವು ಜ್ಞಾನರೀತಿ ಕುಮಾರನು, ತಂದೆ, ಪರಿಶುದ್ಧಾತ್ಮಯೆಂದು ಅರ್ಥ ಮಾಡಿಕೊಳ್ಳಬೇಕು.

ಭಗವದ್ಗೀತೆಯಲ್ಲಿ ಹೇಳಿದಂತೆ ಕ್ಷರನು ಎಂದರೆ ನಾಶವಾಗುವವನೆಂದು ಅರ್ಥ. ನಾಶವಾಗುವವನು ಶರೀರದಲ್ಲಿನ ಜೀವಾತ್ಮನೇ. ಬೈಬಲ್‌ನಲ್ಲಿ ಹೇಳಿದ ಕುಮಾರನು ಕೂಡ ಜೀವಾತ್ಮನೇ. ಅಕ್ಷರನು ಎಂದರೇ ನಾಶ ಆಗದವನು. ನಾಶಹೊಂದದವನು ಆತ್ಮಯೆಂದು ತಿಳಿಯಬೇಕು. ಶರೀರದಲ್ಲಿನ ದೇವರಾಗಿರುವ ಆತ್ಮ ನಾಶವಾಗುವುದಿಲ್ಲ. ಹಾಗೆಯೇ ಬೈಬಲ್‌ನಲ್ಲಿ ಶರೀರದಲ್ಲಿನ ಆತ್ಮದೇವರನ್ನು ತಂದೆಯೆಂದು ಹೇಳಿದ್ದಾರೆ. ಜೀವಿಯು ನಾಶವಾದರೂ ದೇವರು ನಾಶವಾಗದವ ನೆಂದು ಕ್ಷರ, ಅಕ್ಷರರೆಂದು ಜೀವಾತ್ಮ, ಆತ್ಮಗಳನ್ನು ಉದ್ದೇಶಿಸಿ ಹೇಳಿದ್ದಾರೆ. ಅದೇ ವಿಧವಾಗಿ ಕುಮಾರನು ನಾಶವಾದರೂ ತಂದೆ ದೇವರಾಗಿ ಇರುವುದರಿಂದ ನಾಶವಾಗದವನೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಹೇಳಿದಂತೆ ಪರಮಾತ್ಮ ಸೃಷ್ಠಿ ಆದಿ ದೇವರೆಂದು, ಸೃಷ್ಠಿ ನಂತರ ಸೃಷ್ಠಿಸಲ್ಪಟ್ಟ ದೇವರು ಆತ್ಮಯೆಂದು, ಆತ್ಮವೇ ಶರೀರದಲ್ಲಿ ದೇವರಾಗಿ ನೇಮಿಸಲ್ಪಟ್ಟಿದ್ದಾನೆಂದು ತಿಳಿದುಕೊಂಡಿದ್ದೇವೆ. ಪರಮಾತ್ಮನಾದ ಸೃಷ್ಠಿ ಆದಿ ದೇವರು ಸೃಷ್ಠಿ ನಂತರ ಆತ್ಮಯೆನ್ನುವ ದೇವರಾಗಿ

ನೇಮಿಸಿ ತನಗಿರುವ ಅಧಿಕಾರಗಳೆಲ್ಲ ಆತ್ಮಗೆ ಕೊಟ್ಟಿದ್ದಾನೆಂದು ಹೇಳಿದಂತೆ ಪರಿಶುದ್ಧಾತ್ಮ ತನ್ನ ಕುಮಾರನಾದ ಆತ್ಮಗೆ ಅಧಿಕಾರಗಳನ್ನು ಕೊಟ್ಟನು ಎಂದು ಯೋಹಾನ ಸುವಾರ್ತೆ ಐದನೆ ಅಧ್ಯಾಯದಲ್ಲಿ 21 ರಿಂದ 28ನೇ ವಾಕ್ಯದವರೆಗು ಹೇಳಿದ್ದಾರೆ.

ಪರಮಾತ್ಮ ಪ್ರಪಂಚವನ್ನು ಸೃಷ್ಠಿಸಿದ ನಂತರ ಆತ್ಮವನ್ನು ಸೃಷ್ಠಿಸಿ ತನಗೆ ಕೆಲಸವಿಲ್ಲದಂತೆ ಸೃಷ್ಠಿ ವಿಧಾನವೆಲ್ಲವನ್ನು ಆತ್ಮಗೆ ಒಪ್ಪಿಸಿ ತಾನು ಸುಮ್ಮನೆ ಇದ್ದುಹೋಗಿ ಆತ್ಮ ಜೀವಿಯನ್ನು ಮನುಷ್ಯನಾಗಿ ಸೃಷ್ಠಿಸಿ ಒಟ್ಟಾರೆ ಪ್ರಪಂಚವನ್ನು ತಯಾರು ಮಾಡಿದೆ. ಆತ್ಮವನ್ನು ಸ್ತ್ರೀ ಲಿಂಗವಾಗಿ, ಪುಲಿಂಗವಾಗಿ ಎರಡು ವಿಧಗಳು ಹೇಳಬಹುದು. ಆದ್ದರಿಂದ ಮಾಡಿರುವುದು ಎಂದು ಹೇಳಿದ್ದಾರೆ. ಇನ್ನೂ ಹೇಳಿದರೆ ಮಾಡಿದ್ದಾನೆ ಎಂದು ಹೇಳಬಹುದು. ಜೀವಿಗಳನ್ನು ಶರೀರಗಳೊಂದಿಗೆ ಸೃಷ್ಠಿಸಿರುವುದು ಆತ್ಮನಾಗಿರುವುದರಿಂದ ಆತ್ಮವನ್ನು ತಂದೆಯೆಂದು ಹೇಳಬಹುದು. ಇದಕ್ಕು ಮೊದಲು ಕೂಡಾ ಬಹಳಸಲ ಎಲ್ಲರಿಗೂ ತಂದೆ ಆತ್ಮವೇಯೆಂದು, ಆತನೇ ಎಲ್ಲರಿಗೂ ಬೀಜದಾತನೆಂದು ಆದ್ದರಿಂದ ಕಾಣಿಸುವ ಭೌತಿಕ ತಂದೆಯಿಂದ ಯಾರೂ ಹುಟ್ಟಲಿಲ್ಲವೆಂದು ಬಹಳಸಲ ಹೇಳಿದ್ದೇವೆ. ಆದ್ದರಿಂದ ಜೀವಿಗಳಿಗೆ ತಂದೆ ಆತ್ಮಯೆಂದು ಹೇಳಬಹುದು. ಮನುಷ್ಯನಿಗೆ ಬೀಜದಾತ ಆತ್ಮ ಆಗುವುದರಿಂದ ಮನುಷ್ಯ ಆತ್ಮವನ್ನು ತಂದೆ ಎನ್ನಬಹುದು. ಆತ್ಮವನ್ನು ಪರಮಾತ್ಮ ಸೃಷ್ಠಿಸಿರುವುದರಿಂದ ಆತ್ಮಗೆ ತಂದೆ ಪರಮಾತ್ಮಯೆಂದು ಹೇಳಬಹುದು. ಆದರೇ ಅವರಲ್ಲಿ ದೇವರು ಯಾರು? ಎನ್ನುವ ಪ್ರಶ್ನೆ ಬರುತ್ತಿದೆ. ಸೃಷ್ಠಿಗೆ ಪೂರ್ವದಲ್ಲಿ ಸೃಷ್ಠಿಕರ್ತನಾದವನು ನಿಜವಾದ ದೇವರಾದರೂ ಆತನು ಸೃಷ್ಠಿ ನಂತರ ತನ್ನ ಪದವಿಗೆ ರಾಜೀನಾಮೆ ಕೊಟ್ಟಂತೆ ತಾನು ದೇವರಾಗಿ ಇರದೆ ತನ್ನಿಂದ ಸೃಷ್ಠಿಸಲ್ಪಟ್ಟ ಆತ್ಮವನ್ನು ದೇವರಾಗಿ ನೇಮಿಸಿ ತನ್ನ ಅಧಿಕಾರಗಳೆಲ್ಲವನ್ನು ತನ್ನ ಕುಮಾರನಾದ ಆತ್ಮಗೆ ಒಪ್ಪಿಸಿ, ತನ್ನ ಕುಮಾರನು ಒಬ್ಬನೇ ನಿಮಗೆ ಆರಾಧ್ಯದೈವ ಎಂದೂ, ತನ್ನ ಕುಮಾರನೇ ದೇವರೆಂದು, ಆತನು ಹೊರತುಪಡಿಸಿ ಭೂಮಿಮೇಲೆ ಇನ್ನೊಂದು ಆರಾಧ್ಯ ದೈವ ಇಲ್ಲವೆಂದು

ಇಂಜೀಲು ಗ್ರಂಥದಲ್ಲಿಯೂ (ಬೈಬಲ್‌ನಲ್ಲಿಯೂ), ಖುರ್‌ಆನ್ ಗ್ರಂಥದಲ್ಲಿಯೂ ಹೇಳಿದ್ದಾನೆ. ಈ ವಿಷಯಗಳು ಇದಕ್ಕುಮುನ್ನವೇ ಹೇಳಿದ್ದೇವೆ. ದೇವರು ತನ್ನ ಕುಮಾರನಾದ ಆತ್ಮವನ್ನು ದೇವರಾಗಿ ಪ್ರಕಟಿಸಿದ ನಂತರ ತನ್ನನ್ನು ಆರಾಧಿಸದೆ ತನ್ನ ಕುಮಾರನನ್ನೇ ಆರಾಧಿಸಿರೆಂದು ಎಂದಿಗಾದರೂ ಮನುಷ್ಯರೆಲ್ಲರಿಗೂ ಆರಾಧ್ಯ ದೈವ ಒಬ್ಬನೇ ಇರಬೇಕೆಂದು, ತನ್ನ ಕುಮಾರನನ್ನು ಆರಾಧಿಸಿದರೆ ತನ್ನನ್ನು ಆರಾಧಿಸಿದಂತೆಯೆಂದು, ತನ್ನ ಕುಮಾರನನ್ನು ಆರಾಧಿಸದೆಹೋದರೆ ತನ್ನನ್ನು ಆರಾಧಿಸದಂತೆಯೆಂದು ಹೇಳಿದ್ದಾನೆ.

ಇದರಿಂದ ದೇವರು ಒಬ್ಬನೇಯೆಂದು ಆತನೇ ಶರೀರದೊಳಗೆ ಇರುವ ಆತ್ಮಯೆಂದು ಭಗವದ್ಗೀತೆಯಲ್ಲಿ ಕೂಡಾ ಹೇಳಲ್ಪಟ್ಟಿದೆ. ಯಾವ ಮನುಷ್ಯನಾದರೂ ದೇವರು ಒಬ್ಬನೇಯೆಂದು ಹೇಳಬೇಕು. ಒಬ್ಬ ದೇವರನ್ನೇ ಆರಾಧಿಸಬೇಕು. ಮಾನವರೆಲ್ಲರಿಗೂ ದೇವರು ಮತ್ತು ತಂದೆ ಶರೀರದಲ್ಲಿನ ಆತ್ಮವೇ ಆಗಿದ್ದು, ಶರೀರದಲ್ಲಿನ ಆತ್ಮಗೆ ತಂದೆ ಪರಮಾತ್ಮಯೆಂದು ಹೇಳಬಹುದು. ಬೈಬಲ್ ಗ್ರಂಥದಲ್ಲಿ ಪರಮಾತ್ಮನನ್ನು ಪರಿಶುದ್ಧಾತ್ಮಯೆಂದು ಅನ್ನುತ್ತಿದ್ದಾರೆಂದು ಕೂಡಾ ಹೇಳಿದ್ದೇವೆ. ಪರಮಾತ್ಮ ಪರಿಶುದ್ಧಾತ್ಮನಾಗಿ ಕರೆಯಲ್ಪಟ್ಟಾಗ ಆತ್ಮವನ್ನು ತಂದೆಯೆಂದು ಕೂಡಾ ಕರೆಯುತ್ತಿದ್ದೇವೆ. ಚೆನ್ನಾಗಿ ಗಮನಿಸಿದರೆ ಮನುಷ್ಯನಿಗೆ ಆತ್ಮ ತಂದೆಯಾಗಿದ್ದು, ಆತ್ಮಗೆ ತಂದೆ ಪರಮಾತ್ಮನಾಗಿದ್ದು, ಮನುಷ್ಯನಿಗೆ ಪರಮಾತ್ಮ ತಾತನಾಗುತ್ತಿದ್ದಾನೆಂದು ಕೂಡಾ ಮೊದಲೇ ಹೇಳಿದ್ದೇವೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 17ನೇ ಶ್ಲೋಕದಲ್ಲಿ ನೋಡಿರಿ.

**ಶ್ಲೋ॥ 17. ಪಿತಾಹ ಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ।**

**ವೇದ್ಯಂ ಪವಿತ್ರ ಮೋಂಕಾರ ಋಕ್ಸಾಮ ಯಜುರೇವಚ ॥**

**ಭಾವಾರ್ಥ :– "ಪ್ರಪಂಚಕ್ಕೆ ಆತ್ಮ ರೂಪದಲ್ಲಿ ನಾನೇ ತಾಯಿ, ತಂದೆಯಾಗಿ ಇದ್ದೇನೆ. ಪರಮಾತ್ಮ ರೂಪದಲ್ಲಿ ತಾತನಾಗಿದ್ದೇನೆ."**

ಹೀಗೆ ಭಗವದ್ಗೀತೆಯಲ್ಲಿ ಹೇಳಿದಂತೆ ಪರಮಾತ್ಮ ಜೀವಿಗಳಿಗೆ ತಾತನಾಗಿದ್ದಾನೆ. ಆತ್ಮ ತಂದೆಯಾಗಿರುವುದರಿಂದ ಹುಟ್ಟಿದ ಪ್ರತಿ ಜೀವಿ ಆತ್ಮವನ್ನು ತಂದೆಯೆಂದು ಹೇಳಬೇಕಾಗಿದೆ. ಆದರೇ ಜ್ಞಾನ ತಿಳಿಯದ ಮನುಷ್ಯರು ಆತ್ಮದೊಂದಿಗೆ ತಮಗಿರುವ ಸಂಬಂಧ ತಿಳಿಯದವರಾಗಿ ಆತ್ಮವನ್ನು ದೇವರಾಗಾಗಲಿ, ತಂದೆಯಾಗಾಗಲಿ ಹೇಳಿಕೊಳ್ಳುವುದು ಇಲ್ಲ. ಹಿಂದೂಗಳು ದೇವರ್‍ಯಾರೊ ತಿಳಿಯದವರಾಗಿ ಪ್ರಕೃತಿಯಾದ ಗಿಡಕ್ಕು, ಕಲ್ಲಿಗು ಕೈಮುಗಿ ಯುತ್ತಿದ್ದಾರೆ. ಉಳಿದ ಮತಗಳ ವಿಷಯಕ್ಕೆ ಬಂದರೆ ಅವರು ದೇವರು ಒಬ್ಬನೆಯೆಂದು ಅನ್ನುತ್ತಿದ್ದಾರೆ ಆದರೆ ಆ ಒಬ್ಬನು ಯಾರೊ ಖಚಿತವಾಗಿ ಹೇಳದಿದ್ದಾರೆ. ಕ್ರೈಸ್ಥರನ್ನು ಕೇಳಿದರೆ ತಂದೆಯಾದ ಆತ್ಮ ದೇವರಾ? ಅಥವಾ ತಾತನಾದ ಪರಿಶುದ್ಧಾತ್ಮ ದೇವರಾ? ಎಂದು ತೀರ್ಮಾನಿಸಿ ಹೇಳದಿದ್ದಾರೆ. ಹಾಗೆಯೇ ಮುಸ್ಲಿಮ್‌ರನ್ನು ಕೇಳಿದರೆ ಅಲ್ಲಾಹ್ ಒಬ್ಬನೇ ದೇವರು ಅನ್ನುತ್ತಿದ್ದಾರೆ. ಆ ಒಬ್ಬನು ಸೃಷ್ಠಿ ಪೂರ್ವದಲ್ಲಿರುವವನಾ? ಅಥವಾ ಸೃಷ್ಠಿ ನಂತರ ಇರುವವನಾ? ಎಂದು ಕೇಳಿದರೆ ಇಬ್ಬರು ಎಲ್ಲಿದ್ದಾರೆ? ಇರುವುದು ಒಬ್ಬನೇ ಅಲ್ಲವೆ! ಎಂದು ಹೇಳುತ್ತಿದ್ದಾರೆ. ತಮ್ಮ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ (3–18) ನೇ ಆಯತ್‌ನಲ್ಲಿಯೂ, (6–102), (2–255) ಆಯತ್‌ಗಳಲ್ಲಿಯೂ ಸೃಷ್ಠಿ ನಂತರ ದೇವರಿದ್ದಾನೆಂದು. 112ನೇ ಸೂರಾದಲ್ಲಿನ ನಾಲ್ಕು ಆಯತ್‌ಗಳಲ್ಲಿಯೂ ಸೃಷ್ಠಿ ಪೂರ್ವದಲ್ಲಿರುವ ದೇವರು ಇದ್ದಾನೆಂದು ಅವರಿಗೆ ತಿಳಿಯದಂತೆ ಹೋಗಿದೆ. ಸೃಷ್ಠಿ ಪೂರ್ವದಲ್ಲಿದ್ದ, ಸೃಷ್ಠಿ ನಂತರ ಇರುವ ದೇವರುಗಳಿಗೆ ಇರುವ ವ್ಯತ್ಯಾಸವನ್ನೇ ಗ್ರಂಥದಲ್ಲಿ ಹೇಳಿದ್ದರೂ ಗ್ರಹಿಸಲಾರದೆ ಹೋಗುತ್ತಿದ್ದಾರೆ. ಅಂತಿಮ ದೈವಗ್ರಂಥದಲ್ಲಿ ಸೃಷ್ಠಿ ನಂತರ ದೇವರೊಬ್ಬನೇ ಎಂದು ಸ್ವತಃವಾಗಿ ಸೃಷ್ಠಿ ಪೂರ್ವದಲ್ಲಿರುವ ದೇವರು ನಿರ್ಣಯಿಸಿ ಹೇಳಿದ ಮಾತು (3–18) ರಲ್ಲಿ ಇದ್ದರೂ ಅದನ್ನು ತಿಳಿಯದಿದ್ದಾರೆ. ಅದೇ ವಿಷಯವನ್ನೇ ಅದಕ್ಕು ಮೊದಲು ಬಂದಿರುವ ದೈವಗ್ರಂಥವಾದ ಇಂಜೀಲು ಗ್ರಂಥದಲ್ಲಿ (ಯೋಹಾನ್ 5–21 ರಿಂದ 26) ವಾಕ್ಯಗಳಲ್ಲಿರುವಂತೆ ಹೇಳಿದರೂ ಕೂಡಾ ಅರ್ಥಮಾಡಿಕೊಳ್ಳದಿದ್ದಾರೆ. ಎಲ್ಲರಿಗೂ

ಅಲ್ಲಾಹ್ ಒಬ್ಬನೇ ದೇವರೆಂದು, ಆತನನ್ನು ಸೃಷ್ಠಿ ನಂತರ ಬಂದಿರುವವನೆಂದು, ಸೃಷ್ಠಿ ಪೂರ್ವದಲ್ಲಿರುವ ದೇವರಿಂದ ಈತನೇ ನಿಮ್ಮ ದೇವರು ಎಂದು ಹೇಳಲ್ಪಟ್ಟವನೆಂದು ಗ್ರಂಥದಲ್ಲಿ ಇರುವ ಜ್ಞಾನವನ್ನು ಗ್ರಹಿಸಲಾರದೆ ಹೋಗುತ್ತಿದ್ದಾರೆ. (2–117) ದೇವರು ಕೆಲಸ ಮಾಡುವುದಿಲ್ಲವೆಂದು, ಆತನು ತಯಾರಾಗು ಎಂದರೇ ತಯಾರಾಗುತ್ತದೆಂದು ಹೇಳಿದ್ದಾರೆ. ಕೆಲಸ ಮಾಡದ ದೇವರು ಕೆಲಸ ಮಾಡುವ ದೇವರನ್ನು ಸೃಷ್ಠಿಸಿ ನಮಗೆ ಈತನನ್ನೇ ಆರಾಧಿಸಿರೆಂದು ಹೇಳಿದ್ದಾನೆಂದು (3–18) ರಲ್ಲಿ ಹೇಳಿದ್ದಾನೆ. ದೇವರು ಕೆಲಸ ಮಾಡುವವನೆಂದು ಆತನು ಎಂದಿಗೂ ಧಣಿಯುವುದಿಲ್ಲವೆಂದು ನಿದ್ದೆ, ತೂಗು ಇಲ್ಲದೆ ಕೆಲಸ ಮಾಡುತ್ತಿದ್ದಾನೆಂದು (2–255) ರಲ್ಲಿ ಹೇಳಿದ್ದಾರೆ. ದೈವಗ್ರಂಥಗಳಲ್ಲಿ ಇಬ್ಬರು ದೇವರುಗಳಿದ್ದಾರೆಂದು ಅದರಲ್ಲಿ ನಾವು ಆರಾಧಿಸಬೇಕಾದ ದೇವರು ಗ್ರಂಥದ ಸಾಕ್ಷಿಯಾಗಿ ಒಬ್ಬನೇ ಇದ್ದಾನೆಂದು ಮುಸ್ಲಿಮ್‌ರು ತಿಳಿದಯದೆ ಪೂರ್ತಿ ಜ್ಞಾನವನ್ನು ತಿಳಿಯದೆ ಕುರುಡರಂತೆ ಒಬ್ಬನೇ ದೇವರೆಂದು ರೂಢಿ ಪದದಂತೆ ಹೇಳುತ್ತಿದ್ದಾರೆ. ಒಬ್ಬನೇ ದೇವರೆಂದು ಹೇಳುವುದಕ್ಕೆ ಶಾಸ್ತ್ರಬದ್ಧತೆ ಹೀಗಿದೆಯೆಂದು ಇರುವ ವಿಷಯವನ್ನು ಸಹ ಹೇಳಲಾರದೆ ಹೋಗುತ್ತಿದ್ದಾರೆ. ಮೂರು ದೈವ ಗ್ರಂಥಗಳಲ್ಲಿಯೂ ಒಬ್ಬನೇ ದೇವರೆಂದು, ಒಬ್ಬ ದೇವರನ್ನೇ ಆರಾಧಿಸಬೇಕೆಂದು ಹೇಳಿದ್ದರೂ ಆ ವಿಷಯವನ್ನು ವಿವರವಾಗಿ ಗ್ರಹಿಸಲಾರದಿದ್ದಾರೆ. ಯಾರ ಗ್ರಂಥ ಅವರದ್ದೇ, ಯಾರ ಜ್ಞಾನ ಅವರದ್ದೇ, ಯಾರ ಮತ ಅವರದ್ದೇ, ಯಾರ ದೇವರು ಅವರಿಗೇ ಎನ್ನುವ ಬೇದಾಭಿಪ್ರಾಯ ಹೊಂದಿದ್ದಾರೆ. ಮೂರು ಗ್ರಂಥಗಳಲ್ಲಿನ ಸತ್ಯವನ್ನು ತಿಳಿಯದಂತಿದ್ದಾರೆ.

ಇಲ್ಲಿಯವರೆಗು ಮನುಷ್ಯರಿಗು ದೇವರಿಗು ಇರುವ ಸಂಬಂಧವನ್ನು ಕುರಿತು ಹೇಳಿದ್ದೇವೆ. ದೇವರು ತನ್ನನ್ನು ಸೃಷ್ಠಿಸಿರುವುದಕ್ಕೆ ಮನುಷ್ಯ ದೇವರನ್ನು ತಂದೆಯೆಂದು ಕರೆಯಬಹುದು. ಹಾಗೇ ಸೃಷ್ಠಿ ಪೂರ್ವದಲ್ಲಿರುವ ದೇವರನ್ನು ತಾತಯೆಂದು ಕರೆಯಬಹುದು. ಆದರೇ ಮನುಷ್ಯನನ್ನು ಪಾಲಿಸುತ್ತಿರುವ ಮನುಷ್ಯನಿಗೆ ದೇವರಾದ ಆತ್ಮ ಶರೀರದಲ್ಲಿ ಮನುಷ್ಯನ ಕರ್ಮವನ್ನನುಸರಿಸಿ

ಪಾಲಿಸುತ್ತಾ, ಭಾವವನ್ನನುಸರಿಸಿ ಕರ್ಮಗಳನ್ನು ಅಂಟಿಸುತ್ತಾ ಶ್ರದ್ಧೆಯನ್ನನುಸರಿಸಿ ಧರ್ಮಗಳನ್ನೂ ಅಧರ್ಮಗಳನ್ನೂ ಉಂಟುಮಾಡುತ್ತಾ ಜ್ಞಾನದಲ್ಲಿಯೋ, ಅಜ್ಞಾನದಲ್ಲಿಯೋ ಪ್ರಯಾಣಿಸುವಂತೆ ಮಾಡುತ್ತಿರುತ್ತದೆ. ಆ ವಿಧಾನದಲ್ಲಿ ಶರೀರದಲ್ಲಿನ ಆತ್ಮವೇ ಅಧರ್ಮಗಳನ್ನು ಅಭಿವೃದ್ಧಿ ಆಗುವಂತೆ ಮಾಡುತ್ತಿದೆ. ಶರೀರದಲ್ಲಿನ ದೇವರಿಂದ ಅಧರ್ಮಗಳು, ಅಜ್ಞಾನ ಅಭಿವೃದ್ಧಿಯಾಗಿ ಅದಕ್ಕು ಮೊದಲಿರುವ ಜ್ಞಾನ, ಧರ್ಮಗಳು ತಿಳಿಯದಂತೆ ಹೋಗುತ್ತಿವೆ. ಅಧರ್ಮಗಳು ಮನುಷ್ಯರಲ್ಲಿ ಅಭಿವೃದ್ಧಿಯಾದಂತೆಲ್ಲಾ ಧರ್ಮಗಳು ಇಲ್ಲದಂತೆ ಹೋಗುತ್ತಿರುತ್ತವೆ. ಶರೀರದಲ್ಲಿ ದೇವರು ತನ್ನ ನಿಯಮದ ಪ್ರಕಾರ ಜೀವಿಯನ್ನು ನಡೆಸುತ್ತಾ ತನ್ನ ಧರ್ಮದ ಪ್ರಕಾರ ತಾನು ನಡೆಯುತ್ತಿರುತ್ತಾನೆ. ಧರ್ಮಗಳು ತಳಸೇರಿಹೋದರೂ ಅಧರ್ಮಗಳು ವಿಜೃಂಭಿಸಿದರೂ ಶರೀರದಲ್ಲಿನ ಆತ್ಮ ಏನು ಮಾಡುವುದಕ್ಕೆ ಅವಕಾಶವಾಗಲಿ, ಅಧಿಕಾರವಾಗಲಿ ಇಲ್ಲ. ಶರೀರದಲ್ಲಿ ಒಂದು ದೇವರಾಗಿ, ಎರಡು ಕಾರ್ಯಕರ್ತನಾಗಿ ಇರುವಂತೆ ಸೃಷ್ಟಿ ಆದಿಯಲ್ಲಿಯೇ ತನ್ನನ್ನು ಸೃಷ್ಟಿಸಿದ ದೇವರು ನೇಮಿಸಿರುವುದರಿಂದ ಆ ನಿಯಮದ ಪ್ರಕಾರವೇ ಆತ್ಮ ಕೆಲಸ ಮಾಡುತ್ತಿದೆ.

ಅಧರ್ಮಗಳು ಹೆಚ್ಚಾಗಿ ಹೋದಾಗ ಧರ್ಮಗಳಿಗೆ ಹಾನಿ ಉಂಟಾದಾಗ ಪುನಃ ಧರ್ಮಗಳನ್ನು ಪ್ರತಿಷ್ಠಿಸಬೇಕಾದ ಜವಾಬ್ದಾರಿ ವಿಶ್ವವನ್ನು ಸೃಷ್ಟಿಸಿದ ಸೃಷ್ಟಿಕರ್ತನಾದ ಮೊದಲ ದೇವರಿಗೆ ಇದೆ. ಸೃಷ್ಟಿ ನಂತರ ವಿಶ್ರಾಂತಿ ತೆಗೆದುಕೊಳ್ಳುತ್ತಿರುವ ದೇವರು ಅಧರ್ಮಗಳನ್ನು ಅಡಗಿಸಿ ಧರ್ಮಗಳನ್ನು ಪುನಃ ಪ್ರತಿಷ್ಠಿಸಬೇಕಾಗಿದೆ. ಆ ಕೆಲಸ ಮಾಡುವುದು ನಮಗೆ ತಾತನಾದ ಪರಮಾತ್ಮನಿಗೇ ಸಂಬಂಧವಾಗಿದೆ. ಆದರೆ ಸೃಷ್ಟಿಕರ್ತನಾದ ಪರಮಾತ್ಮ ಯಾರಿಗೂ ತಿಳಿಯದಂತೆ ರೂಪವಿಲ್ಲದವನಾಗಿ, ಕೆಲಸ ಮಾಡದವನಾಗಿ ಹೆಸರಿಲ್ಲದವನಾಗಿ ಇರುವುದರಿಂದ ಧರ್ಮ ಪ್ರತಿಷ್ಠಾಪನೆಗೆ ತಾನೇ ಮಾನವ ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ. ಈ ವಿಷಯವನ್ನು ಭಗವದ್ಗೀತೆ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 6. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿಸನ್ ।**

**ಪ್ರಕೃತಿಂ ಸ್ವಾಮಾಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥**

**ಭಾವಾರ್ಥ :– "ಸಾವು ಹುಟ್ಟುಗಳು ಇಲ್ಲದವನು ಆಗಿದ್ದು ಸರ್ವಜೀವರಾಶಿಗಳಿಗು ಈಶ್ವರನಾಗಿದ್ದು ಪ್ರಕೃತಿಯಿಂದ ಕೂಡಿದ ಭೌತಿಕ ಶರೀರವನ್ನು ಧರಿಸಿ ಸೃಷ್ಟಿ ಆದಿಯಲ್ಲಿನ ದೇವರು ಮನುಷ್ಯನಂತೆ ಹುಟ್ಟುತ್ತಿದ್ದಾನೆ."**

ಈ ವಿಷಯವನ್ನು ಇದಕ್ಕೂ ಮೊದಲು ಕೂಡಾ ಹೇಳಿದ್ದೇವೆ. ಪರಮಾತ್ಮನಾದ ದೇವರು ಮಾನವ ಶರೀರದೊಂದಿಗೆ ಹುಟ್ಟಿದಾಗ ಎಲ್ಲರಂತೆ ಪ್ರಸವಿಸಲ್ಪಟ್ಟ ಶರೀರದಲ್ಲಿ ಜೀವಾತ್ಮ ಸೇರಿದಂತೆ ಸೇರದೆ ತಾಯಿ ಶರೀರದಲ್ಲಿನ ಶಿಶುವಿನಲ್ಲಿಯೇ ಜೀವಹೊಂದಿ ಪ್ರಾಣದೊಂದಿಗೆ ಸಹ ಹುಟ್ಟುತ್ತಾನೆ. ಹಾಗೆ ಹುಟ್ಟುವುದು ಒಬ್ಬ ದೇವರಿಗೇ (ಪರಮಾತ್ಮಗೆ) ಸಾಧ್ಯವಾಗುತ್ತದೆ. ಪರಮಾತ್ಮನಾದ ದೇವರು ಮನುಷ್ಯರ ಆರಾಧ್ಯ ದೈವವಲ್ಲದಿದ್ದರೂ ನಾವು ಆತನನ್ನು ದೇವರೆಂದೇ ಕರೆಯಬಹುದು. ಪರಮಾತ್ಮ ಮೊದಲಿನಿಂದ ದೇವರೇ ಆದರೆ ಆರಾಧ್ಯದೈವ ಮಾತ್ರ ಸೃಷ್ಟಿಸಲ್ಪಟ್ಟ ದೇವರಾದ ಆತ್ಮಯೆಂದು ತಿಳಿಯಬೇಕು. ಪರಮಾತ್ಮ ಶಿಶುವಾಗಿ ಹುಟ್ಟಿ ಸಾಧಾರಣ ಮನುಷ್ಯ ಬೆಳೆದಂತೇ ಬೆಳೆಯುತ್ತಾನೆ. ದೇವರಾದ ಪರಮಾತ್ಮ ಧರ್ಮಪ್ರತಿಷ್ಠಾಪನೆಗೆ ಅವತರಿಸಿದರೂ ಆತನು ಸಾಧಾರಣ ಮನುಷ್ಯನಂತೆ ಜೀವನವನ್ನು ನಡೆಸಬೇಕಾಗಿರುತ್ತದೆ. ಮನುಷ್ಯನ ಜೀವನ ಕಳೆಯುವುದಕ್ಕೆ ಕರ್ಮಯೆನ್ನುವ ಗಣಿತ ಅಗತ್ಯ. ಪ್ರತಿ ಮನುಷ್ಯ ಕರ್ಮ ಪ್ರಕಾರವೇ ಜೀವನವನ್ನು ಕಳೆಯಬೇಕಾಗಿರುತ್ತದೆ. ಆದ್ದರಿಂದ ತಾನು ನೇಮಿಸಿದ ನಿಯಮಗಳ ಪ್ರಕಾರ ದೇವರು ಮನುಷ್ಯನಾಗಿ ಬಂದರೂ ಜೀವಿಸಬೇಕಾಗಿದೆ. ಆದ್ದರಿಂದ ತಾನು ಹುಟ್ಟಿದ ಜೀವನ ಕಳೆಯುವುದಕ್ಕೆ ಸೃಷ್ಟಿಕರ್ತನಾದ ದೇವರೇ ಕರ್ಮವನ್ನು ಸೃಷ್ಟಿಸಿಕೊಂಡು ತಾನು ಬದುಕಬೇಕಾದ ವಿಧಾನವನ್ನು ನಿರ್ಣಯಿಸಿಕೊಂಡು ಹುಟ್ಟುತ್ತಿದ್ದಾನೆ.

ಸರ್ವ ಲೋಕಗಳನ್ನು ಸೃಷ್ಟಿಸಿದ ದೇವರು ತಾನೇ ತನ್ನ ಸಂಕಲ್ಪದಿಂದ ಸಾಮಾನ್ಯ ಮಾನವನಂತೆ ಸೃಷ್ಟಿಸಲ್ಪಟ್ಟಿದ್ದಾನೆ. ಮನುಷ್ಯರಿಗೆ ಧರ್ಮಗಳನ್ನು

ತಿಳಿಸುವ ಸಲುವಾಗಿ ತಾತನಾದ ದೇವರು ಮೊಮ್ಮಗನ ವೇಷದಲ್ಲಿ ಹುಟ್ಟಿ ಮೊಮ್ಮಗ ಅತ್ತಂತೇ ಅತ್ತು. ಮೊಮ್ಮಗ ಆಡಿಕೊಂಡಂತೆ ಆಡಿಕೊಂಡು, ಮೊಮ್ಮಗ ಹಾಲು ಕುಡಿದಂತೆ ಹಾಲು ಕುಡಿಯುತ್ತಾ ಜೀವನವನ್ನು ಕಳೆಯುತ್ತಿದ್ದಾನೆ. ಯಾವಾಗಲೋ ಕೆಲವು ವರ್ಷಗಳ ನಂತರ ಹೇಳಬೇಕಾದ ಜ್ಞಾನಕ್ಕಾಗಿ ಪ್ರತಿ ದಿನ ಮನುಷ್ಯನಂತೆ ದೇವರು ಜೀವಿಸುತ್ತಿದ್ದಾನೆ. ಕೃಷ್ಣನು ಹತ್ತು ನಿಮಿಷಗಳು ಹೇಳುವ ಜ್ಞಾನಕ್ಕಾಗಿ ಸುಖದುಃಖಮಯವಾದ ಎಷ್ಟೋ ದೊಡ್ಡದಾದ ಜೀವನವನ್ನು 90 ವರ್ಷಗಳು ಕಳೆದು ತನ್ನ ಕಾರ್ಯ ಮುಗಿದುಹೋಗುತ್ತಲೇ ಹೋದರೆ ಆ ಕೆಲಸಕ್ಕಾಗಿಯೇ ಬಂದಂತೆ ಇತರರು ಅನುಮಾನ ಬೀಳದಂತೆ ನಂತರ ಕೂಡಾ 36 ವರ್ಷಗಳು ಬದುಕಿ ಅಸಾಧಾರಣ ಮರಣ ಹೊಂದಿದ್ದಾನೆ. ಕೊನೆಯಲ್ಲಿ ತನ್ನ ಮರಣ ಲೋಕಕ್ಕೆ ಕಣ್ತೆರೆಸುವಂತೆ ಸಂಚಲನ ವಾಕ್ಯಗಳನ್ನು ಹೇಳಿ ಮರಣಿಸಿದ್ದಾನೆ. ಆತನ ಮರಣ ನಂತರ ಕೃಷ್ಣನು ಸಾಧಾರಣ ಮನುಷ್ಯ ಅಲ್ಲವೆಂದು ಅನುಮಾನ ಬಂದಿದೆ. ಬಂದವನು ರಾಜನಾದರೂ ಕೂಲಿಯವನ ವೇಷದಲ್ಲಿ ನಮಗಾಗಿ ಬಂದುಹೋಗುವುದು ನೋಡಿದರೆ ದೇವರು ಮನುಷ್ಯರ ಮೇಲೆ ಎಷ್ಟೋ ಶ್ರದ್ಧೆಹೊಂದಿದ್ದಾನೆಂದು ತಿಳಿಯುತ್ತಿದೆ. ದೇವರು ನಮ್ಮಮೇಲೆ ಶ್ರದ್ಧೆಯಿಂದ ನಮಗಾಗಿ, ನಮಗೆ ಧರ್ಮಗಳನ್ನು ತಿಳಿಸುವ ಸಲುವಾಗಿ ಸಾಧಾರಣ ಮನುಷ್ಯನಂತೆ ಬಂದು ಜೀವಿಸುವುದು ಎಷ್ಟೋ ಕಷ್ಟಕರವಾದ ವಿಷಯವಾದರೂ ನಾವು ಮಾತ್ರ ದೇವರಮೇಲೆ ಶ್ರದ್ಧೆ ತೋರಿಸದಂತಿದ್ದೇವೆ. ಆತನು ಮಾಡಿದ ಒಳ್ಳೆಯದನ್ನು ಮರೆತವರಾಗಿ ದೇವರೆಂದರೇ ಕೀಳು ಭಾವನೆ ಹೊಂದಿದ್ದಾರೆ.

ಸೃಷ್ಠಿ ಆದಿ ದೇವರು ಸರ್ವ ಪ್ರಪಂಚವನ್ನು ಸೃಷ್ಠಿಸಿದ ದೇವರು ಪ್ರಕೃತಿ ಯೆನ್ನುವ ಮುಸುಗು ಹೊದ್ದುಕೊಂಡು ಮಾರುವೇಷದಲ್ಲಿ ತನ್ನನ್ನು ಯಾರೂ ಗುರುತಿಸದಂತೆ ಶರೀರವನ್ನು ಧರಿಸಿ ಬರುತ್ತಿದ್ದಾನೆ. ಶರೀರವನ್ನು ಧರಿಸಿದರೇ ಸಜೀವವಾದ ಶರೀರದಲ್ಲಿ ಏನು ಇರುತ್ತದೊ ಅವೆಲ್ಲವೂ ದೇವರು ಧರಿಸಿದ ಶರೀರದಲ್ಲಿ ಕೂಡಾ ಇರುತ್ತದೆ. ಸರ್ವವೂ ವ್ಯಾಪಿಸಿ, ಸರ್ವವನ್ನು ನೋಡುವಂತಹ ದೇವರು ಸಾಧಾರಣ ಕಣ್ಣುಗಳಿಂದ ನೋಡುತ್ತಿದ್ದಾನೆ ಎಂದರೇ

ಯಾರಾದರೂ ನಂಬುತ್ತಾರಾ? ನಂಬಬಾರದೆಂದೇ, ತಾನು ಯಾರಾಗಿರುವುದು ತಿಳಿಯಬಾರದೆಂದೇ ದೇವರ ಉದ್ದೇಶ. ಹಾಗೆ ಏಕೆ ಎಂದರೆ ಆತನನ್ನು ಗುರುತಿಸಿದರೆ, ಆತನ ಜನ್ಮವನ್ನಾಗಲಿ, ಕೆಲಸಗಳನ್ನಾಗಲಿ ಗುರುತುಹಿಡಿದರೆ ಹುಟ್ಟಿದವನು ದೇವರೇಯೆಂದು ತಿಳಿದರೆ ಅವನು ಪುನಃ ಹುಟ್ಟುವುದಿಲ್ಲ, ಅವನಿಗೆ ಯಾವ ಯೋಗ ತಿಳಿಯದಿದ್ದರೂ ಸುಲಭವಾಗಿ ಮೋಕ್ಷ ಲಭಿಸುತ್ತದೆ. ಅಷ್ಟು ಸುಲಭವಾಗಿ ಮೋಕ್ಷ ಲಭಿಸುವುದಕ್ಕೆ ದೇವರಿಗೆ ಇಷ್ಟವಿಲ್ಲ. ಮನುಷ್ಯ ತನ್ನ ಧರ್ಮಗಳನ್ನು ತಿಳಿದು ಹಾಗೆಯೇ ದೇವರ ಧರ್ಮಗಳನ್ನು ತಿಳಿದುಕೊಂಡಾಗ ಧರ್ಮಗಳಿಲ್ಲದ ದೇವರಲ್ಲಿ ಐಕ್ಯವಾಗುವಂತೆ ದೇವರು ಮೋಕ್ಷವನ್ನು ನಿರ್ಮಿಸಿದ್ದಾನೆ. ಧರ್ಮಗಳ ಪ್ರಕಾರವೇ ಮೋಕ್ಷವನ್ನು ಹೊಂದಬೇಕೆಂದು ದೇವರು ಅಂದುಕೊಳ್ಳುವುದರಿಂದ ತನ್ನನ್ನು, ತನ್ನ ಜನ್ಮವನ್ನು ರಹಸ್ಯವಾಗಿಯೇ ಇಟ್ಟುಕೊಂಡಿದ್ದಾನೆ. ಆದ್ದರಿಂದ ದೇವರು ಕೃಷ್ಣನಾಗಿ ಮನುಷ್ಯರ ಮಧ್ಯದೊಳಗೆ ಬಂದರೂ ಯಾರೂ ಆತನನ್ನು ಗುರುತಿಸಲಿಲ್ಲ. ಅಷ್ಟೇಅಲ್ಲದೆ ಆತನು ಮನುಷ್ಯರಿಂದ ಜಾರನು, ಚೋರನು ಎಂದು ಆರೋಪಿಸಲ್ಪಟ್ಟಿದ್ದಾನೆ. ಹಾಗೆ ಆರೋಪಣೆಗಳು ಹೊಂದುವುದರಿಂದ ಕೃಷ್ಣನು ದೇವರೆಂದು ನಾವು ಹೇಳಿದರೂ ಯಾರೂ ನಂಬದ ಸ್ಥಿತಿ ಏರ್ಪಟ್ಟಿದೆ.

ಸೃಷ್ಟಿಕರ್ತನಾದ ದೇವರು ಧರ್ಮಗಳು ಇಲ್ಲದವನಾದರೂ, ಧರ್ಮಗಳಿಗೆ ಅತೀತನಾದರೂ ತಾನು ಧರ್ಮಚಕ್ರವಾದ ದೇಹವನ್ನು ಧರಿಸಿ ಬರುವುದು ನಡೆಯುತ್ತಿದೆ. ಮನುಷ್ಯನ ಶರೀರದಲ್ಲಿ ನಿವಾಸಿಸುತ್ತಾ ಸ್ವಲ್ಪಕಾಲ ಧರ್ಮಗಳನ್ನು, ಸ್ವಲ್ಪ ಕಾಲ ಅಧರ್ಮಗಳನ್ನು ಹೊಂದುತ್ತಿರುವುದರಿಂದ ಶರೀರವನ್ನು ಧರ್ಮಚಕ್ರವೆಂದು ಹೆಸರಿಟ್ಟು ಹೇಳಬೇಕಾಗಿ ಬಂದಿದೆ. ಕಾಣಿಸುವ ಶರೀರವನ್ನು ಯಂತ್ರರೂಪವಾಗಿ ಶರೀರದಲ್ಲಿನ ಪ್ರತಿಭಾಗವನ್ನು ಗುರುತಿಸಿ ನೋಡಿದರೆ ಅದು ಒಂದು ಚಕ್ರದಂತೆ ಕಾಣಿಸುತ್ತಿದೆ. ಧರ್ಮಚಕ್ರವನ್ನು ಹಿಂದಿನ ಪುಟದಲ್ಲಿ ಚಿತ್ರಿಸಿ ನೋಡಿಕೊಂಡಿದ್ದೇವೆ. ಧರ್ಮಚಕ್ರದಲ್ಲಿರುವ ಕೆಟ್ಟಗುಣಗಳ ಕಡೆ ಇರುವ ಅಧರ್ಮಗಳನ್ನು ಶರೀರದಲ್ಲಿಯೇ ಅಡಗಿಸಿ, ಒಳ್ಳೆಯ ಗುಣಗಳ

ಕಡೆ ಇರುವ ಧರ್ಮಗಳನ್ನು ಒಳ್ಳೆಯ ಗುಣಗಳ ಸತ್‌ಪ್ರವರ್ತನೆ ಮೂಲಕ ಅಭಿವೃದ್ಧಿಯಾಗುವಂತೆ ದೇವರೇ ಮಾಡುತ್ತಿದ್ದಾನೆ. ದೇವರು ತಿಳಿಸುವ ಧರ್ಮಗಳು ಶರೀರದಲ್ಲಿ ಸಜೀವವಾಗಿ ಹೋಗುತ್ತಿವೆ. ಅದಕ್ಕು ಮೊದಲಿರುವ ಧರ್ಮಗಳು ನಿರ್ಜೀವಗಳಾಗಿ ಹೋಗುತ್ತಿವೆ. ಆಗ ಧರ್ಮಗಳ ಭಾರ ಹೆಚ್ಚಾಗುತ್ತದೆ. ಅಧರ್ಮ ಗಳ ಭಾರ ಕಡಿಮೆಯಾಗುತ್ತದೆ. ಹಾಗೆ ಧರ್ಮಗಳ ಭಾರ ಬದಲಾಗುವುದರಿಂದ ಭಾರವಿರುವ ಭಾಗ ಕೆಳಕ್ಕೆ, ಭಾರವಿಲ್ಲದ ಭಾಗ ಮೇಲಕ್ಕೆ ತಿರುಗುತ್ತಿದೆ. ಆದ್ದರಿಂದ ಶರೀರದಲ್ಲಿ ನಡೆಯುವ ಬದಲಾವಣೆಯನ್ನು ಅನುಸರಿಸಿ ಶರೀರವನ್ನು ಧರ್ಮಚಕ್ರ ಎಂದಿದ್ದೇವೆ.

ಧರ್ಮಚಕ್ರದಲ್ಲಿ ಶರೀರದಲ್ಲಿನ ಎಲ್ಲಾ ಭಾಗಗಳು ಇರುವುದೇ ಅಲ್ಲದೆ ಜೀವಾತ್ಮ, ಆತ್ಮ, ಪರಮಾತ್ಮ ಮೂವರು ಇದ್ದಾರೆ. ಶರೀರವೆನ್ನುವ ಧರ್ಮಚಕ್ರದಲ್ಲಿ ಆತ್ಮ ಶರೀರವೆಲ್ಲವೂ ಎಂದರೇ ಚಕ್ರವೆಲ್ಲವೂ ವ್ಯಾಪಿಸಿದೆ. ಆತ್ಮ ಸ್ಥಾನ ಚಕ್ರದಲ್ಲಿ ಒಂದುಕಡೆ ಇದ್ದರೂ ಚಕ್ರವೆಲ್ಲಾ ವ್ಯಾಪಿಸಿದೆ. ಶರೀರವೆಲ್ಲಾ ದೃಷ್ಠಿಹೊಂದಿದೆ. ಪರಮಾತ್ಮ ಚಕ್ರದಲ್ಲಿಯೂ, ಚಕ್ರದ ಹೊರಗೆ ಅಣುಅಣುವಿನಲ್ಲಿ ಇದೆ. ಆತ್ಮ ಚಕ್ರದಲ್ಲಿ ಮಾತ್ರವಿದೆ. ಉಳಿದ ಜೀವಿಯು ಒಂದುಕಡೆ ಇರುವ ತಾನು ಶರೀರವೆಲ್ಲಾ ಇರುವಂತೆ 24 ಭಾಗಗಳು ತನ್ನವೇ ಆದಂತೆ 24 ಭಾಗಗಳಾಗಿ ಶರೀರವೆಲ್ಲಾ ತಾನೇ ಇರುವಂತೆ ತಿಳಿಯುತ್ತಿದ್ದಾನೆ. ಸೃಷ್ಠಿಕರ್ತನಾದ ದೇವರು ತಾನು ಸೃಷ್ಠಿಸಿದ ಪ್ರಪಂಚದಲ್ಲಿ ತನ್ನ ಆತ್ಮ ಸೃಷ್ಠಿಸಿದ ಶರೀರದಲ್ಲಿ ಎಲ್ಲಕಡೆಯಿದ್ದು ತಾನು ಪ್ರಪಂಚ ಎಲ್ಲವನ್ನು ನೋಡುತ್ತಾ ಶರೀರದಲ್ಲಿನ ಆತ್ಮವನ್ನು, ಜೀವಾತ್ಮವನ್ನು ನೋಡುತ್ತಿದ್ದಾನೆ. ದೇವರು ನಿವಾಸಿಸುವ ಶರೀರದಲ್ಲಿ ಕೂಡಾ ಎಲ್ಲಾ ಶರೀರಗಳಲ್ಲಿರುವಂತೆ ಆತ್ಮ, ಜೀವಾತ್ಮ ಎರಡೂ ಇರುತ್ತವೆ. ದೇವರು ಶರೀರದಲ್ಲಿ ಕೆಲವು ವರ್ಷಗಳು ನಿವಾಸಿಸುತ್ತಾ ಸಮಯ ಸಂದರ್ಭವನ್ನನುಸರಿಸಿ ಮನುಷ್ಯರಿಗೆ ಧರ್ಮಗಳನ್ನು ತಿಳಿಸುವುದಕ್ಕೆ ಪ್ರಯತ್ನಿಸುತ್ತಾನೆ.

ಕೃಷ್ಣನಾಗಿ ಧರ್ಮಚಕ್ರವನ್ನು ಧರಿಸಿದಾಗ ಭಗವದ್ಗೀತೆಯನ್ನು ಹೇಳಿಹೋಗಿದ್ದಾನೆ, ಹಾಗೆಯೇ ಯೇಸು ಶರೀರವನ್ನು ಧರಿಸಿ ಬಂದಾಗ

ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳ ಜ್ಞಾನವನ್ನು ಹೇಳಿಹೋಗಿದ್ದಾನೆ. ಹಾಗೆಯೇ ಖುರ್‌ಆನ್ ಜ್ಞಾನ ಕೂಡಾ ಹೇಳಲ್ಪಟ್ಟಿದೆ. ಮೂರು ದೈವಗ್ರಂಥಗಳನ್ನು ಹೇಳಿದವರಲ್ಲಿ ಇಬ್ಬರು ಮಾತ್ರವೇ ಮಾನವ ಶರೀರವನ್ನು ಧರಿಸಿ ಬಂದ ಭಗವಂತರಾದರೆ ಖುರ್‌ಆನ್‌ನನ್ನು ಹೇಳಿದವನು 'ಜೀಬ್ರಯೇಲ್' ಎನ್ನುವ ಗ್ರಹ. ಜಿಬ್ರಯೇಲ್ ಗ್ರಹವೇ ಸೂರ್ಯ ಗ್ರಹವೆಂದು ಕೂಡಾ ಈ ಮಧ್ಯಕಾಲದಲ್ಲಿ ನಾವು ಹೇಳಿಕೊಂಡಿದ್ದೇವೆ. 'ಧರ್ಮಚಕ್ರ' ಎನ್ನುವ ಶರೀರವನ್ನು ಧರಿಸಿ ಬಂದವರು ಇಬ್ಬರು, ಆದರೂ ಮೂರು ದೈವಗ್ರಂಥಗಳು ಹೇಳಲ್ಪಟ್ಟಿವೆ. ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿನ ಜ್ಞಾನ ಅದಕ್ಕಿಂತ ಮೊದಲು ಬಂದಿರುವ ತೌರಾತ್, ಇಂಜೀಲ್ (ಭಗವದ್ಗೀತೆ, ಬೈಬಲ್) ಗ್ರಂಥಗಳಲ್ಲಿ ಇರುವುದೇ ಆದರೂ ಖುರ್‌ಆನ್ ಗ್ರಂಥದಲ್ಲಿನ ಜ್ಞಾನ ಬಹಳ ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ. ವಾಸ್ತವವಾಗಿ ಖುರ್‌ಆನ್ ಗ್ರಂಥದಲ್ಲಿನ ಜ್ಞಾನವೊಂದರ ರುಚಿಯನ್ನು ಮುಸ್ಲಿಮ್‌ರು ಗ್ರಹಿಸಲಿಲ್ಲವೆಂದು, ಅದರಲ್ಲಿನ ಜ್ಞಾನವೊಂದರ ವಿಶೇಷತೆಯನ್ನು ಮುಸ್ಲಿಮ್‌ರಿಗೆ ತಿಳಿದಿಲ್ಲವೆಂದೇ ಹೇಳಬಹುದು. ಅಷ್ಟು ವಿಶೇಷತೆ ಇರುವ ಜ್ಞಾನವಿರುವ ಗ್ರಂಥವನ್ನು ಜಿಬ್ರಯೇಲ್ ಎನ್ನುವಾತನು ಹೇಳುವುದು, ಭಗವಂತನು ಅದಕ್ಕಿಂತ ಮೊದಲು ಬಂದು ತೌರಾತ್, ಇಂಜೀಲ್‌ನ್ನು ಹೇಳಿರುವುದನ್ನು ಮರೆತುಹೋಗಬಾರದು.

ಒಂದೇ ದೇವರ ಜ್ಞಾನ ಮೂರು ದೈವಗ್ರಂಥಗಳಲ್ಲಿದ್ದರೂ ಮೊದಲ ದೈವಗ್ರಂಥದಲ್ಲಿ "ಯಾವಾಗ ಅಧರ್ಮಗಳು ಹೆಚ್ಚಾಗುತ್ತವೊ ಆಗ ಅವತರಿಸುತ್ತೇನೆ" ಎಂದು ಸ್ವತಃವಾಗಿ ಪರಮಾತ್ಮ ಹೇಳಿದಂತೆ ಇದೆ. ಹಾಗೆಯೇ ಎರಡನೆ ಗ್ರಂಥ ಹೇಳಿದ ನಂತರ ಎರಡು ಗ್ರಂಥಗಳಲ್ಲಿಯೂ ಸಂಪೂರ್ಣ ಜ್ಞಾನ ಇದ್ದರೂ, ಅದಕ್ಕಿಂತ ಉಳಿದಜ್ಞಾನ ಇಲ್ಲದಿದ್ದರೂ ನಂತರ ಬರುವ ಆದರಣಕರ್ತ ನಿಮಗೆ ಅರ್ಥವಾಗದ ಜ್ಞಾನ ಎಲ್ಲವನ್ನು ವಿಶಧವಾಗಿ ತಿಳಿಸುತ್ತಾನೆಂದು ಯೇಸು ಹೇಳಿದ್ದಾನೆ. ಪರಿಶುದ್ಧಾತ್ಮ ಆದರಣಕರ್ತನಾಗಿ ಬರುತ್ತಾನೆಂದು ಹೇಳುವುದಾಗಿದೆ. ಪರಿಶುದ್ಧಾತ್ಮ ಎಂದರೇ ಸೃಷ್ಠಿ ಆದಿಯಲ್ಲಿನ ದೇವರಾದ ಪರಮಾತ್ಮಯೆಂದು ಮರೆಯಬಾರದು. ಮೂರನೆಯವನು ತಮ್ಮಂತೆ ಬರುವ ಅವತಾರವೇ ಎಂದು

ಹೇಳಲ್ಪಟ್ಟಿದೆ. ಆ ಮಾತನ್ನು ನೋಡಿದ ನಂತರ ಭಗವದ್ಗೀತೆ, ಬೈಬಲ್ ಎನ್ನುವ ಎರಡು ಗ್ರಂಥಗಳಲ್ಲಿ ಇಲ್ಲದ ಜ್ಞಾನ ಇದ್ದಾಗಲೇ ಅಲ್ಲವೇ! ದೇವರು ಬಂದು ಹೇಳುವುದು ಎಂದು ಅಂದುಕೊಂಡಿದ್ದೇವೆ. ನಂತರ ಖುರ್‌ಆನ್ ಗ್ರಂಥ ಬಂದಿದೆ. ಅದರಲ್ಲಿ ಭಗವದ್ಗೀತೆಯನ್ನು ಬೈಬಲ್‌ನನ್ನು ದೃಢೀಕರಿಸುವುದಕ್ಕೇ ಎಂದು ಬರೆಯಲ್ಪಟ್ಟಿದೆ. ಅದು ದೈವಗ್ರಂಥಗಳಲ್ಲಿ ಕೊನೆಯ ಗ್ರಂಥವೆಂದು ಕೂಡಾ ಹೇಳಲ್ಪಟ್ಟಿದೆ. ಮೂರು ವಿಧಗಳಾಗಿ ದೇವರು ಜ್ಞಾನವನ್ನು ತಿಳಿಸುತ್ತೇನೆಂದು ಖುರ್‌ಆನ್ ಗ್ರಂಥದಲ್ಲಿ 42ನೇ ಸೂರಾ 51ನೇ ಆಯತ್‌ನಲ್ಲಿ ಹೇಳಿದ್ದಾನೆ. ಅದನ್ನು ಒಂದುಸಲ ನೋಡೋಣ.

**(42–51) "ದೇವರು ಯಾವ ಮಾನವನೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ ಮೂಲಕ (ವಹಿ ಮೂಲಕ) ಇಲ್ಲವೆ ತೆರೆಮರೆಯಿಂದ ಮನುಷ್ಯನಿಗೆ ಸೇರಿಸುತ್ತಾನೆ. ಇಲ್ಲವೆ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಹಿಸುತ್ತಾನೆ. ಆತನು ಮಹೋನ್ನತನು, ವಿವೇಕವಂತನು."**

ಈ ವಾಕ್ಯವನ್ನು ಅನುಸರಿಸಿ ಮನುಷ್ಯನಿಗೆ ದೇವರ ಜ್ಞಾನ ಮೂರು ವಿಧಗಳಲ್ಲಿ ತಿಳಿಸುತ್ತಾನೆಂದು ಅರ್ಥವಾಗುತ್ತಿದೆ. ಅದರ ಪ್ರಕಾರ ತಿಳಿಸಲ್ಪಟ್ಟ ವಿಧಾನಗಳನ್ನನುಸರಿಸಿ ದೈವಗ್ರಂಥಗಳು ಮೂರು ಎಂದು ಹೇಳಲ್ಪಟ್ಟಿವೆ. ಮೂರು ವಿಧಾನಗಳಲ್ಲಿ ಕೊನೆಯಲ್ಲಿ ಹೇಳಿರುವುದು ನೋಡಿದರೆ "ತಾನು ಕೋರಿದ ಜ್ಞಾನವನ್ನು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ. ಎಂದು ಇದೆ ಅಲ್ಲವೆ! ಆ ವಿಧಾನವನ್ನು ಅನುಸರಿಸಿ ದೇವರಾದ ಪರಮಾತ್ಮ ತನ್ನ ಪ್ರತಿನಿಧಿಗಳಾಗಿ ಒಂದುಸಲ ಕೃಷ್ಣನನ್ನು, ಮತ್ತೊಂದುಸಲ ಯೇಸುನನ್ನು ಕಳುಹಿಸಿ ತನ್ನ ಜ್ಞಾನವನ್ನು ಹೇಳಿಸುವುದು ನಡೆದಿದೆ. ಆಗ ಹೇಳಿದ ಜ್ಞಾನವೇ

ಒಂದು ಭಗವದ್ಗೀತೆಯಾಗಿ ಮತ್ತೊಂದು ಬೈಬಲ್ ಆಗಿ ತಯಾರಾಗಿದೆ. ನಂತರದ ಗ್ರಂಥ ಮನುಷ್ಯ ಜಾತಿಯಲ್ಲದವನು ಹೇಳಿರುವುದು. ದೇವರು ತಿಳಿಸಿದ ಮೂರು ವಿಧಾನಗಳಲ್ಲಿ ಖುರ್‌ಆನ್ ಗ್ರಂಥವು ತೆರೆಮರೆಯಿಂದ ಹೇಳಿರುವುದಾಗಿ ಲೆಕ್ಕಿಸಬೇಕು. ಹೇಗಾದರೇನು ವಹಿ ಮೂಲಕ ಹೇಳಿದ ವಿಧಾನ, ಪ್ರತಿನಿಧಿ ಮೂಲಕ ಹೇಳಿದ ವಿಧಾನ, ತೆರೆಮರೆಯಿಂದ ಹೇಳಿದ ವಿಧಾನ ನೆರವೇರಿದೆ. ಮೂರು ವಿಧಾನಗಳನ್ನು ಅನುಸರಿಸಿ ಮೂರು ಗ್ರಂಥಗಳು ತಯಾರಾಗಿವೆ. ಮೂರು ಗ್ರಂಥಗಳಲ್ಲಿಯೂ ಸಂಪೂರ್ಣವಾದ ಜ್ಞಾನ ಹೇಳಲ್ಪಟ್ಟಿದೆ. ಹಾಗಿರುವಾಗ ಬೈಬಲ್‌ನಲ್ಲಿ "ಪರಿಶುದ್ಧಾತ್ಮ ಆದರಣಕರ್ತನಾಗಿ ಆಗಮಿಸುತ್ತಾನೆ" ಎಂದು ಯೇಸು ಹೇಳಿದ ವಾಕ್ಯದ ಪ್ರಕಾರ ಮತ್ತೊಬ್ಬ ಮನುಷ್ಯನ ಅವತಾರ ಬರುತ್ತದೆಂದು ಅರ್ಥವಾಗುತ್ತಿದೆ. ಆದರೇ ಜ್ಞಾನವನ್ನು ಸಂಪೂರ್ಣವಾಗಿ ಹೇಳಲ್ಪಟ್ಟ ನಂತರ ಆದರಣಕರ್ತ (ಭಗವಂತನ) ಆಗಮನ ಏನು ಅಗತ್ಯವೆಂದು ಪ್ರಶ್ನೆ ಕೂಡಾ ಬರುತ್ತಿದೆ. ಈ ಪ್ರಶ್ನೆಗೆ ಉತ್ತರವನ್ನು ಹುಡುಕಬೇಕಾಗಿದೆ.

ಉತ್ತರ ಸಹ ದೇವರೇ ಒದಗಿಸಿದಾಗ ತಿಳಿಯುತ್ತಿರುವುದು ಏನೆಂದರೇ! ಪರಮಾತ್ಮ ಸ್ವತಃವಾಗಿ ಮಾನವನಾಗಿ ಬಂದು ಧರ್ಮಗಳನ್ನು ತಿಳಿಸಿ ಹೋಗಿದ್ದಾನೆ. ಅದು ಮೂರು ಗ್ರಂಥಗಳಾಗಿ ಈದಿನ ಭೂಮಿಮೇಲೆ ಇದೆ. ದೇವರು ಹೇಳಿರುವುದು ಒಂದೇ ದೇವರ ಜ್ಞಾನ. ಒಂದೇ ದೇವರು ಜ್ಞಾನ ಮೊದಲು ಆಕಾಶವಾಣಿ ಮೂಲಕ ಬಂದಿದೆ. ಅದೇ ಭಗವದ್ಗೀತೆಯಾಗಿ ತಯಾರಾಗಿದೆ. ವಾಣಿ ಮುಖಾಂತರ ಬಂದಿರುವ ಜ್ಞಾನವನ್ನು ಕೃಷ್ಣನು ಅರ್ಜುನನಿಗೆ ತಿಳಿಸಿದಾಗ ಭಗವದ್ಗೀತೆಯಾಗಿದೆ. ನಂತರ ಇತರ ದೇಶದಲ್ಲಿ ಹೇಳುವ ನಿಮಿತ್ತ ಯೇಸುವಾಗಿ ಬಂದು ಮೊದಲು ಹೇಳಿದ ಜ್ಞಾನವನ್ನೇ ಹೇಳಿದ್ದಾನೆ. ಆಗ ಅದನ್ನು ಬೈಬಲಾಗಿ ಬರೆದಿದ್ದಾರೆ. ನಂತರ ಮುಹಮ್ಮದ್ ಪ್ರವಕ್ತರಿಗೆ ಜಿಬ್ರಯೇಲ್ ಹೇಳಿರುವುದು ಖುರ್‌ಆನ್ ಗ್ರಂಥವಾಗಿ ತಯಾರಾಗಿದೆ. ಮೂರು ಗ್ರಂಥಗಳಲ್ಲಿ ಸಂಪೂರ್ಣ ಜ್ಞಾನವಿದೆಯೆಂದು ಹೇಳಿಕೊಂಡಿದ್ದೇವೆ. ಆದರೇ ಒಂದೇ ಜ್ಞಾನವೇ ಎಂದರೆ ಒಂದೇ ದೇವರ ಜ್ಞಾನ ಮೂರು ಗ್ರಂಥಗಳಾಗಿ ಇರುವುದರಿಂದ ಮನುಷ್ಯರಲ್ಲಿನ

ಮಾಯೆ ಪ್ರಭಾವದಿಂದ ಮನುಷ್ಯರು ಮೂರು ಗ್ರಂಥಗಳನ್ನು ಆಧಾರ ಮಾಡಿಕೊಂಡು ಮೂರು ಮತಗಳಾಗಿ ಬೇರ್ಪಟ್ಟಿದ್ದಾರೆ. ಮೂರು ಮತಗಳನ್ನು ಮುಖ್ಯವಾಗಿ ಇಟ್ಟುಕೊಂಡು ಒಬ್ಬ ದೇವರನ್ನು ಮೂರು ದೇವರುಗಳಾಗಿ, ಒಂದೇ ಜ್ಞಾನವನ್ನು ಮೂರು ಬೇರೆಬೇರೆ ಜ್ಞಾನಗಳಾಗಿ ಹೇಳಿಕೊಂಡು ನಮ್ಮ ಜ್ಞಾನ ದೊಡ್ಡದೆಂದು ನಮ್ಮ ದೇವರು ದೊಡ್ಡವನು ಎಂದು ಹೇಳುತ್ತಿದ್ದಾರೆ. ಒಬ್ಬ ದೇವರ ಜ್ಞಾನವನ್ನು ಮೂರು ಗ್ರಂಥಗಳಾಗಿ ಬೇರ್ಪಡಿಸಿಕೊಳ್ಳುವುದೆ ಅಲ್ಲದೆ, ದೇವರನ್ನು ಕೂಡಾ ಮೂವರಾಗಿ ಹೇಳಿಕೊಳ್ಳುವುದು ದೊಡ್ಡ ಅಜ್ಞಾನ. ದೇವರು ಮನುಷ್ಯರು ಜ್ಞಾನದಕಡೆ ಹೋಗಬೇಕೆಂದು ಮೂರು ವಿಧಗಳ ಜ್ಞಾನಹೇಳಿದರೆ ಅದನ್ನು ಮೂರಾಗಿ ಸೀಳಿಸಿದ್ದಾರೆ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ ಸೂರಾ ಆರು, ಆಯತ್ 91ರಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**(6–91) "ದೇವರು ಯಾವ ಮಾನವ ಮಾತ್ರನ ಮೇಲೆ ಎಂತಹ ಜ್ಞಾನ ವಿಷಯವನ್ನು ಅವತರಿಸುವಂತೆ ಮಾಡಲಿಲ್ಲವೆಂದು ಹೇಳಿದಾಗ ಈ ಅವಿಶ್ವಾಸ ಜನರು ದೇವರನ್ನು ಅರ್ಥಮಾಡಿಕೊಳ್ಳಬೇಕಾದ ವಿಧಾನದಲ್ಲಿ ಅರ್ಥಮಾಡಿಕೊಳ್ಳಲಿಲ್ಲ. ಅವರನ್ನು ಕೇಳು ಮೂಸ ತಂದ ತೌರಾತ್ ಗ್ರಂಥವನ್ನು ಯಾರೂ ಅವತರಿಸಲು ಮಾಡಿದಂತೆ? ಆ ಗ್ರಂಥ ಒಂದು ಜ್ಯೋತಿ, ಮಾನವನಿಗಾಗಿ ಮಾರ್ಗದರ್ಶಕತ್ವ. ಅದನ್ನು ನೀವು ಬೇರೆಬೇರೆ ಕಾಗಿದಗಳಾಗಿ (ಬೇರೆಬೇರೆ ಗ್ರಂಥಗಳಾಗಿ) ವಿಭಜಿಸಿ ನೋಡುತ್ತಿದ್ದೀರಾ. ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದೀರ. ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿಯದ ಎಷ್ಟೋ ವಿಷಯಗಳು ಇದರ ಮೂಲವಾಗಿ ನಿಮಗೆ ಕಲಿಸಲ್ಪಟ್ಟಿವೆ. ಅದನ್ನು (ತೌರಾತ್)ನನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ನೇ ಎಂದು ಹೇಳು. ಆ ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿಯೇ ಆಡಲುಬಿಡು."**

ಈ ವಾಕ್ಯದಲ್ಲಿ ದೇವರು ಹೇಳಿದ ಜ್ಞಾನವನ್ನು ಮೂರು ಕಾಗಿದಗಳಾಗಿ (ಮೂರು ಗ್ರಂಥಗಳಾಗಿ) ವಿಭಜಿಸಿ ನೋಡುತ್ತಿದ್ದಾರೆ ಎಂದು ಹೇಳಿರುವುದರಿಂದ ಅಲ್ಲಿ ಹೇಳಿರುವಂತೇ ಮೂರು ಗ್ರಂಥಗಳಾಗಿ ಬರೆದುಕೊಂಡು, ಅವುಗಳನ್ನು ಬೇರೆಬೇರೆ ಮತಗ್ರಂಥಗಳಾಗಿ ಹೇಳಿಕೊಳ್ಳುತ್ತಿದ್ದೇವೆ. ಈ ವಿಷಯವನ್ನು ದ್ವಿತೀಯ ದೈವಗ್ರಂಥ ಬಾರದಮುನ್ನವೇ ಯೇಸು ಹೇಳಿದಂತೆ ಇದೆ. ಅದನ್ನೇ ಬೈಬಲ್‌ನಲ್ಲಿ ಬರೆಯುವುದು ನಡೆದಿದೆ. ಹಾಗೇ ನಡೆಯುತ್ತಿದೆಯೆಂದು ಆ ಮಾತನ್ನು ಬಲಪಡಿಸುತ್ತಾ ಖುರ್‌ಆನ್ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಆದರಣಕರ್ತ ಬರುತ್ತಾನೆಂದು ಹೇಳುವುದಕ್ಕೂ ಈ ವಿಷಯಕ್ಕೂ ಸಂಬಂಧ ಇದೆಯೆಂದು ಅರ್ಥವಾಗುತ್ತಿದೆ. ಮೂರು ದೈವಗ್ರಂಥಗಳಲ್ಲಿ ಸಂಪೂರ್ಣ ಜ್ಞಾನವಿದ್ದರೂ, ಅದು ಚೂರು ಚೂರಾಗಿರುವುದರಿಂದ ಅಂದರೇ ಬೇರೆಬೇರೆ ಗ್ರಂಥಗಳಾಗಿ ಇರುವುದರಿಂದ ಮಾನವರು ಮೂರು ಗುಂಪುಗಳಾಗಿ ವಿಂಗಡಣೆಯಾಗುವುದು, ಗುಂಪುಗಳ ಮಧ್ಯ ಸಮನ್ವಯ ಸ್ವಲ್ಪವಾದರೂ ಇಲ್ಲದೇ ಹೋಗುವುದು ನಡೆಯುತ್ತಿದೆ. ಮೂರು ವರ್ಗದವರು ನಾವು ದೊಡ್ಡವರು ಎನ್ನುವ ಭಾವನೆಯಿಂದ ಇರುವುದೇ ಅಲ್ಲದೆ ಇತರರನ್ನು ಇಲ್ಲದಂತೆ ಮಾಡಬೇಕೆಂದು, ತಮ್ಮ ಗುಂಪು ಒಂದೇ ಅಭಿವೃದ್ಧಿಯಾಗಬೇಕೆಂದು, ಉಳಿದ ಗುಂಪಿನವರು ಇಲ್ಲದಂತೆ ಹೋಗಬೇಕೆಂಬ ಉದ್ದೇಶದಿಂದ ಒಬ್ಬರ ಮೇಲೆ ಮತ್ತೊಬ್ಬರು ಅಸೂಯೆ ಭಾವನೆ ಹೊಂದಿದ್ದಾರೆ.

ಅಸೂಯೆ ಒಂದು ಗುಣವಾಗಿರುವುದರಿಂದ ಅದೂ ಕೆಟ್ಟಗುಣ ವಾಗಿರುವುದರಿಂದ ಮನುಷ್ಯನನ್ನು ತಪ್ಪು ದಾರಿಯಲ್ಲಿ ಕಳಿಸುತ್ತಿದೆ. ದ್ವೇಷಭಾವನೆ ಯಿಂದ ದೇವರು ಹೇಳಿದ ಜ್ಞಾನವನ್ನು ಮರೆತು, ಮತಕ್ಕಾಗಿ ಕೆಲಸ ಮಾಡಬೇಕೆಂಬ ದೃಷ್ಟಿಯಿಂದ ಒಬ್ಬನ್ನೊಬ್ಬರು ಸಾಯಿಸಿಕೊಳ್ಳುವುದಕ್ಕು ಕೂಡಾ ಹಿಂಜರಿಯುವುದಿಲ್ಲ. ದೇವರು ಒಬ್ಬನೇಯೆಂದು, ದೇವರ ಜ್ಞಾನ ಒಂದೇಯೆಂದು ದೇವರು ತನ್ನ ಗ್ರಂಥಗಳ ಮೂಲಕ ತಿಳಿಸಿದರೆ ಮನುಷ್ಯರು ದೇವರ ಜ್ಞಾನವನ್ನು ಮೂರು ಭಾಗಗಳಾಗಿ ವಿಭಜಿಸಿಕೊಳ್ಳುವುದು ಮೊದಲನೆ ತಪ್ಪಾಗಿದ್ದು, ಮತ ಎನ್ನುವ

ಗುಂಪನ್ನು ಮಾಡಿಕೊಳ್ಳುವುದು ಎರಡನೇ ತಪ್ಪಾಗಿ ಬದಲಾಗಿಹೋಗಿದೆ. ಅಲ್ಲಿಗೆ ಸುಮ್ಮನಾಗದೆ ಉಳಿದ ಮತಗಳ ಮೇಲೆ ದ್ವೇಷ ಬೆಳೆಸಿಕೊಳ್ಳುವುದು, ತಮ್ಮ ಮತ ಹೊರತು ಇತರೆ ಮತಗಳು ಇರಬಾರದು ಎನ್ನುವುದು ಪೂರ್ತಿ ಅಜ್ಞಾನ ವಾಗಿ ಹೋಗುತ್ತಿದೆ. ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಾಗಿ ಮನುಷ್ಯರ ಹತ್ತಿರಕ್ಕೆ ಕಳುಹಿಸಿದ್ದಾನೆ ಆದರೆ, ಅದನ್ನು ಈ ವಿಧವಾಗಿ ಅರ್ಥ ಮಾಡಿ ಕೊಳ್ಳಬೇಕು, ಈ ವಿಧವಾಗಿ ಅರ್ಥ ಮಾಡಿಕೊಳ್ಳಬಾರದು ಎಂದು ಹೇಳಲಿಲ್ಲ. ಅದರಿಂದ ಭೂಮಿಮೇಲೆ ನಾವು ಜ್ಞಾನಿಗಳು, ಗುರುಗಳು, ಬೋಧಕರು ಎನ್ನುವವರು ಪ್ರತಿ ಮತದಲ್ಲಿ ತಯಾರಾಗಿದ್ದಾರೆ. ಅವರು ಸ್ವಚ್ಛವಾದ ಜ್ಞಾನವನ್ನು ಸ್ವಾರ್ಥಪೂರಿತ ಜ್ಞಾನವಾಗಿ ಬದಲಾಯಿಸಿ ನಮ್ಮ ಜ್ಞಾನ, ನಮ್ಮ ಮತ, ನಮ್ಮ ದೇವರು ಎನ್ನುವ ನಿನಾದವನ್ನು ತೆರೆಮೇಲಕ್ಕೆ ತಂದಿದ್ದಾರೆ. ಹೀಗೆ ಮನುಷ್ಯರು ಮೂರು ಗುಂಪುಗಳಾಗಿ ಏರ್ಪಡುವುದಕ್ಕೆ ಕಾರಣ ದೇವರು ಹೇಳಿದ ಜ್ಞಾನವನ್ನು ಪ್ರಜೆಗಳು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗುವುದು ಒಂದು ಕಾರಣವಾಗಿದ್ದು ಗುರುಗಳು, ಹಿರಿಯರು, ಬೋಧಕರು ಬೋಧಿಸಿದ ವಿಧಾನದಿಂದ ಮತ, ಮತ ಜ್ಞಾನ ತಯಾರಾಗಿದೆ.

ದೇವರು ಆತ್ಮಜ್ಞಾನವನ್ನು ಹೇಳಿದರೇ ಮನುಷ್ಯರು ಅದನ್ನೇ ಮತ ಜ್ಞಾನವಾಗಿ ಮಾರ್ಪಡಿಸಿದ್ದಾರೆ. ಹಾಗೆ ಬದಲಾಗಿಹೋಗುತ್ತದೆಂದು ಪರಮಾತ್ಮ ನಾದ ದೇವರಿಗೆ ಮೊದಲೇ ತಿಳಿದಿದೆ. ಆದ್ದರಿಂದ ಮೂರು ಮತಗಳ ಹದ್ದುಗಳನ್ನು ಅಳಿಸಿಹಾಕಿ ದೇವರ ಜ್ಞಾನಕ್ಕೆ ಹದ್ದುಗಳು, ಎಲ್ಲೆಗಳು ಇಲ್ಲವೆಂದು ಅದು ಒಂದೇ ಜ್ಞಾನವೆಂದು, ಜ್ಞಾನ ದೇವರಿಗೆ ಸಂಬಂಧಿಸಿರುವುದೆ ಹೊರತು ಮನುಷ್ಯರ ಮತಗಳಿಗೆ ಸಂಬಂಧಿಸಿರುವುದು ಅಲ್ಲವೆಂದು ತಿಳಿಸುವ ಸಲುವಾಗಿ ತಾನು ಪ್ರತ್ಯೇಕವಾಗಿ ಅವತರಿಸಬೇಕಾಗಿದೆ. ಆದ್ದರಿಂದ ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 14ನೇ ಅಧ್ಯಾಯದಲ್ಲಿ 25, 26ನೇ ವಾಕ್ಯಗಳಲ್ಲಿ **"ಆದರಣಕರ್ತ"** ಎನ್ನುವ ಹೆಸರಿನಿಂದ ಪರಿಶುದ್ಧಾತ್ಮ ಬರುತ್ತಾನೆಂದು ಹೇಳಿದ್ದಾರೆ. ದೇವರು ಮತ್ತೊಂದುಸಲ ಹುಟ್ಟಿ, ಬೋಧಿಸಿದ ಜ್ಞಾನವನ್ನೇ ಬೋಧಿಸಿ ಮೂರು ಗ್ರಂಥಗಳಲ್ಲಿ

ದೇವರು ಹೇಳಿದ ವಿಷಯಗಳನ್ನೇ ಪುನಃ ಜ್ಞಾಪಕ ಮಾಡಿ, ಜ್ಞಾನದಿಂದ ಮತಗಳ ಅಜ್ಞಾನವನ್ನು ಅಡಗಿಸುವನು. ದೇವರು ಬಂದು ಹೇಳಬೇಕಾಗಿರುವುದು ಏನು ಇಲ್ಲದಿರುವುದರಿಂದ ಆತನು ಹೊಸ ಜ್ಞಾನವನ್ನು ಹೇಳದೆ ಇದಕ್ಕುಮುನ್ನ ಹೇಳಿರುವುದನ್ನೇ ಹೇಳಿ ಮೂರು ಮತಗಳನ್ನು ಒಂದು ಮಾಡಿ **'ಮತ'** ಎನ್ನುವ ಅಧರ್ಮವನ್ನು ಇಲ್ಲದಂತೆ ಮಾಡುತ್ತಾನೆ. ಈ ವಿಷಯವನ್ನು ಬೈಬಲ್ ವಾಕ್ಯದಲ್ಲಿ ನೋಡಿರಿ.

**(ಯೋಹಾನ 14–25, 26) "ನಾನು ನಿಮ್ಮ ಹತ್ತಿರ ಇರುವಾಗಲೇ ಈ ಮಾತುಗಳು ನಿಮ್ಮೊಂದಿಗೆ ಹೇಳಿದೆನು. ಆದರಣಕರ್ತ ಎಂದರೇ ತಂದೆ ನನ್ನ ನಾಮದಿಂದ ಕಳುಹಿಸುವ ಪರಿಶುದ್ಧಾತ್ಮ ಸಮಸ್ತವನ್ನು ನಿಮಗೆ ಬೋಧಿಸಿ ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನು ನಿಮಗೆ ಜ್ಞಾಪಕ ಮಾಡುವನು."**

ಈ ವಾಕ್ಯದಲ್ಲಿ ಚೆನ್ನಾಗಿ ಗಮನಿಸಿರಿ. ಬಂದಿರುವ ಆದರಣಕರ್ತ "ಸಮಸ್ತವನ್ನು ನಿಮಗೆ ಬೋಧಿಸಿ, ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲ ವನ್ನು ನಿಮಗೆ ಜ್ಞಾಪಕ ಮಾಡುವನು." ಆತನು ನಮಗೆ ಸಮಸ್ತವನ್ನು ಬೋಧಿಸುತ್ತಾನೆ ಆದರೇ ಯೇಸು ನಮ್ಮೊಂದಿಗೆ ಹೇಳಿದ ಜ್ಞಾನವನ್ನೇ ಬೋಧಿಸುತ್ತಾನೆ ಆದರೆ ಹೊಸ ಜ್ಞಾನ ಏನು ಇರುವುದಿಲ್ಲ. ದೇವರು ಹೇಳಿದ ಜ್ಞಾನ ನಮಗೆ ಅರ್ಥವಾಗುವುದಕ್ಕೆ ಮೊದಲ ಗ್ರಂಥಗಳಲ್ಲಿ ಇರುವುದಕ್ಕೆ ಅನುಬಂಧವಾಗಿ ಸ್ವಲ್ಪ ಜ್ಞಾನವನ್ನು ಹೇಳಿದರೂ ಕೊನೆಗೆ ಮೊದಲೇ ಹೇಳಲ್ಪಟ್ಟ ಜ್ಞಾನವನ್ನು ತೆಗೆದುಕೊಂಡು ವಿಶದಪಡಿಸುತ್ತಾನೆ ಎಂದು ನಾನು ಹೇಳುತ್ತಿದ್ದೇನೆ. ಮೇಲಿನ ವಾಕ್ಯದಲ್ಲಿ "ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳು" ಎಂದು ಹೇಳಿದ್ದಾನೆ. ಆದರೇ ಇಲ್ಲಿ ಸ್ವಲ್ಪ ಆಳವಾಗಿ ಆಲೋಚಿಸಬೇಕಾಗಿ ಬರುತ್ತದೆ. ಅದೇನೆಂದರೆ! ಯೇಸು ಶರೀರಧಾರಿಯಾದರೂ ಆಗ ಆತನು ಮನುಷ್ಯನೇ ಆದರೂ ಗತದಲ್ಲಿ ಕೂಡಾ ಆತನು ಇದ್ದಾನೆ. ಭಗವದ್ಗೀತೆಯನ್ನು ಹೇಳಿದ

ಕೃಷ್ಣನ ಶರೀರದಲ್ಲಿ ಇರುವುದು ಕೂಡಾ ಯೇಸು ಶರೀರದಲ್ಲಿ ಇರುವವನೇಯೆಂದು ತಿಳಿಯಬೇಕು. ನಾನು ಬಹಳಸಲ **ಕೃಷ್ಣನಾಗಿ ಯಾರಿದ್ದಾರೋ ಆತನೇ ಯೇಸುನಲ್ಲಿ ಕೂಡಾ ಇದ್ದಾನೆ** ಎಂದು ಹೇಳಿದ್ದೇನೆ. ಪರಮಾತ್ಮ ಶರೀರವನ್ನು ಧರಿಸಿ ಕೃಷ್ಣನಾಗಿ ಬಂದು ಬೋಧಿಸಿಹೋಗಿದ್ದಾನೆ. ಹೋಗದಮುನ್ನವೇ "ಅಧರ್ಮಗಳು ವಿಜೃಂಭಿಸಿದಾಗ ಪುನಃ ಬರುತ್ತೇನೆಂದು" ಹೇಳಿಹೋಗಿದ್ದಾನೆ. ನಂತರ ಇಜ್ರಯೇಲ್ ದೇಶದಲ್ಲಿ ಜ್ಞಾನವನ್ನು ಬೋಧಿಸುವುದಕ್ಕೆ ಯೇಸುನಾಗಿ ಬಂದವನು ಕೃಷ್ಣನಾಗಿ ಬಂದವನೇಯೆಂದು ಮರೆಯಬಾರದು. ಕೃಷ್ಣನಾಗಿ ಬಂದಾಗ ಹೇಳಿದ ಜ್ಞಾನವೇ ಯೇಸಾಗಿ ಬಂದಾಗ ಹೇಳಿದ್ದಾನೆ. ಆಗ ಒಂದು ವಿಧ, ಈಗ ಒಂದು ವಿಧ ಎಂದು ಏನೂ ಇಲ್ಲ. ಯಾವಾಗ ಬಂದರೂ ಒಂದೇ ಜ್ಞಾನ ಹೇಳಬೇಕಾಗಿದೆ. ಹಾಗೆ **ಆದರಣಕರ್ತನಾಗಿ ಬಂದವನು, ಕೃಷ್ಣನು, ಯೇಸು, ಮೂವರು ಒಂದೇ** ಎನ್ನುವುದು ಪ್ರಪಂಚಕ್ಕೆ ತಿಳಿಯದ ಸತ್ಯ.

ಕೃಷ್ಣನು, ಯೇಸು, ಆದರಣಕರ್ತ ಮೂವರು ಒಂದೇ ಧ್ಯೇಯದಿಂದ ಭೂಮಿಮೇಲಕ್ಕೆ ಶರೀರವನ್ನು ಧರಿಸಿ ಬಂದಿದ್ದಾರೆ. ಬಂದವನು ಒಂದೇ ಪರಮಾತ್ಮ ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಆಕಾರಗಳಿಂದ, ಬೇರೆಬೇರೆ ಹೆಸರುಗಳಿಂದ ಬಂದಿರುವುದರಿಂದ ಗ್ರಾಹಿತಶಕ್ತಿ ಇಲ್ಲದವರು ಮೂವರು ಒಬ್ಬರೇ ಎಂದಾಗಲಿ, ಮೂವರು ಹೇಳಿರುವುದು ಒಂದೇ ಜ್ಞಾನವೆಂದಾಗಲಿ ತಿಳಿಯದೆ ಆತನು ಬೇರೆ, ಈತನು ಬೇರೆ, ಆತನ ಜ್ಞಾನ ಬೇರೆ. ಈತನ ಜ್ಞಾನ ಬೇರೆ ಅಂದುಕೊಳ್ಳುವುದು ನಡೆಯುತ್ತಿದೆ. ಯಾರು ಏನೆಂದುಕೊಂಡರು **"ಬಂದವನು ಒಬ್ಬನೇ, ಹೇಳುವ ಬೋಧನೆ ಒಂದೇ."** ಅದೇ ವಿಷಯ ನಿಮಗೆ ತಿಳಿಯುವಂತೆ ಮೇಲಿನ ವಾಕ್ಯದಲ್ಲಿ **"ನಾನು ನಿಮ್ಮೊಂದಿಗೆ ಹೇಳಿದ ಜ್ಞಾನವನ್ನೇ ನಿಮಗೆ ಜ್ಞಾಪಕ ಮಾಡುತ್ತೇನೆ"** ಎಂದು ಹೇಳಿದ್ದಾನೆ. ಆದರಣಕರ್ತ ಬಂದು ಸಮಸ್ತವನ್ನು ಬೋಧಿಸಿದಂತೆ ಕಾಣಿಸಿದರೂ ಅದು ನಾನು ಹೇಳಿದ ಬೋಧನೆ ಯೆಂದು ಅರ್ಥ ಅಲ್ಲವೆ! ನಾನು ಹೇಳಿರುವುದು ಎಂದರೇ ಯೇಸು ಆಗಿ ಇರುವಾಗ ಮಾತ್ರವೇ ಎಂದಲ್ಲ. ಕೃಷ್ಣನಾಗಿ ಕೂಡಾ ಇರುವಾಗ ಹೇಳಿರುವುದು,

ಯೇಸುನಾಗಿ ಇರುವಾಗ ಹೇಳಿರುವುದು ಎರಡೂ ಆದರಣಕರ್ತ ಹೇಳಿದ ಜ್ಞಾನದಲ್ಲಿ ಇವೆ. ಆದ್ದರಿಂದ ಆತನು ಗತದಲ್ಲಿ ಹೇಳಿರುವುದು ಏನು ಬಿಡದಂತೆ 'ಸಮಸ್ತವನ್ನು ನಿಮಗೆ ಬೋಧಿಸುವನು' ಎಂದು ನೀವು ಏಕೆ ಅರ್ಥಮಾಡಿಕೊಳ್ಳ ಬಾರದು? ಎಲ್ಲಾ ಒಂದೇ ಬೋಧನೆ, ನಾನು ಹೇಳಿರುವುದೇ ಆದರಣಕರ್ತನಾಗಿ ಬಂದಾಗ ಹೇಳುತ್ತಾನೆ ಎನ್ನುವುದಕ್ಕೆ ಸಾಕ್ಷ್ಯವಾಗಿ ಯೋಹಾನ್ ಸುವಾರ್ತೆ 16ನೇ ಅಧ್ಯಾಯ 12, 13, 14, 15 ವಾಕ್ಯಗಳನ್ನು ನೋಡಿದರೆ ತಿಳಿಯುತ್ತದೆ ನೋಡಿರಿ.

**(ಯೋಹಾನ್ ಸುವಾರ್ತೆ 16–12, 13, 14, 15) "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವುವು ಇನ್ನೂ ಅನೇಕ ಸಂಗತಿಗಳು ಇವೆ ಆದರೆ ಈಗ ನೀವು ಅವುಗಳನ್ನು ಸಹಿಸುವುದಿಲ್ಲ (13) ಆದರೇ ಆತನು ಸತ್ಯಸ್ವರೂಪಿ ಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವಸತ್ಯದೊಳಗೆ ನಡೆಸುತ್ತದೆ. ಆತನು ತನ್ನಷ್ಟಕ್ಕೆ ತಾನೇ ಏನೂ ಬೋಧಿಸದೆ ಯಾವುಗಳನ್ನು ಕುರಿತು ಕೇಳುತ್ತಾನೊ ಅವುಗಳನ್ನೇ ಬೋಧಿಸಿ ಸಂಭವಿಸುವ ಸಂಗತಿಗಳನ್ನು ನಿಮಗೆ ತಿಳಿಸುತ್ತಾನೆ. (14) ಆತನು ನನ್ನವುಗಳೊಳಗಿನ ವಾಕ್ಯಗಳನ್ನು ತೆಗೆದುಕೊಂಡು ನಿಮಗೆ ತಿಳಿಸುತ್ತಾನೆ. ಆದ್ದರಿಂದ ನನ್ನನ್ನು ಮಹಿಮೆ ಪಡಿಸುವನು. (15) ತಂದೆಗೆ ಉಂಟಾಗಿರುವವೆಲ್ಲ ನನ್ನವು. ಆದ್ದರಿಂದ ಆತನು (ಆದರಣಕರ್ತ) ನನ್ನಲ್ಲಿನವುಗಳನ್ನು ತೆಗೆದುಕೊಂಡು ನಿಮಗೆ ತಿಳಿಸುತ್ತಾನೆಂದು ನಾನು ಹೇಳಿದೆನು."**

ಇಲ್ಲಿ ಹೇಳಿದ ವಿಷಯ ಎಲ್ಲವೂ ಬಹಳ ಸಾರಾಂಶವಾದುದೆಂದು ತಿಳಿಯಬೇಕು. ಬುದ್ಧಿಯನ್ನು **ಏಕಾಗ್ರತೆಪಡಿಸಿ** ನೋಡಿದರೆ ಈ ವಾಕ್ಯದಲ್ಲಿ ರಹಸ್ಯವಾದ ಜ್ಞಾನ ತಿಳಿಯುತ್ತದೆ. ಹನ್ನೆರಡನೆ ವಾಕ್ಯದಲ್ಲಿ "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ ಆದರೆ ಈಗ ನೀವು ಅವುಗಳನ್ನು ಸಹಿಸಲಾರರು' ಎಂದು ಇದೆ ಅಲ್ಲವೆ! ಈ ವಾಕ್ಯ ಎಲ್ಲರಿಗೂ

ಅರ್ಥವಾದಂತೇ ಇದೆ ಆದರೆ ಯೇಸು ಹೇಳಿದ ಭಾವನೆ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಎಲ್ಲರಿಗೂ ಅರ್ಥವಾಗಿರುವುದು ಏನೆಂದರೇ! ಯೇಸು ಹೇಳಬೇಕಾದ ಜ್ಞಾನ ಇನ್ನೂ ಇದೆಯೆಂದು, ಅದು ಆಗ ಹೇಳಿದರೇ ಪ್ರಜೆಗಳಿಗೆ ಅರ್ಥವಾಗುವುದಿಲ್ಲವೆಂದು, ತಾನು ಹೇಳದಂತೆ ಬಿಟ್ಟಿರುವ ಜ್ಞಾನವನ್ನು ನಂತರ ಬರುವವರು ಹೇಳುತ್ತಾರೆಂದು ಹೇಳದಂತೆ ಬಿಟ್ಟು ಹಾಕಿದ್ದಾನೆಂದು ಎಲ್ಲರೂ ಅಂದುಕೊಳ್ಳುತ್ತಾರೆ. ಆದರೇ ಆ ದಿನ ಯೇಸು ನಾವು ಅಂದುಕೊಂಡತೆ ಅಂದುಕೊಳ್ಳಲಿಲ್ಲ. ಯೇಸುಗಿಂತ ಮೂರುಸಾವಿರ ವರ್ಷಗಳ ಹಿಂದೆ ಕೃಷ್ಣನು ಹೇಳಿದ ಜ್ಞಾನವೆಲ್ಲವನ್ನು ಸ್ವಲ್ಪವೂ ಬಿಡದೆ ಹೇಳಿದ್ದಾನೆ. ಕೃಷ್ಣನು ಹೇಳಿದ ಜ್ಞಾನವನ್ನೇ ಯೇಸು ಹೇಳಿದಾಗ ಜ್ಞಾನವನ್ನು ಯೇಸು ಹೇಳದಂತೆ ಬಚ್ಚಿಟ್ಟಿರುವುದು ಏನೂ ಇಲ್ಲ. ಹಾಗಿರುವಾಗ ಮೇಲಿನ ವಾಕ್ಯವನ್ನು ಏಕೆ ಹೇಳಿದ್ದಾನೆಂದು ಯೋಚಿಸಬೇಕಾದ ಅಗತ್ಯವಿದೆ.

ಪ್ರಥಮ, ಮಧ್ಯಮ, ಅಂತಿಮ ಎನ್ನುವ ಹೆಸರುಗಳು ಖುರ್‌ಆನ್ ಗ್ರಂಥದಲ್ಲಿ (42–51) ನೇ ವಾಕ್ಯದಲ್ಲಿ ಹೇಳಿದ ಮೂರು ವಿಧಾನಗಳನ್ನನುಸರಿಸಿ ಮೂರು ಹೆಸರುಗಳು ಬಂದರೆ, ದೇವರು ಪ್ರಕಟಿಸಿದ ಮೂರು ವಿಧಾನಗಳಲ್ಲಿ ಮುಂದೆ ಹಿಂದೆ ಹೇಳಿದ ವರಸೆಕ್ರಮವನ್ನನುಸರಿಸಿ ಪ್ರಥಮ ದೈವಗ್ರಂಥವೆಂದು, ದ್ವಿತೀಯ ದೈವಗ್ರಂಥವೆಂದು, ಅಂತಿಮ ದೈವಗ್ರಂಥವೆಂದು ಹೇಳುವುದು ನಡೆದಿದೆ. ಚೆನ್ನಾಗಿ ಗಮನಿಸಿದರೆ ಪ್ರಥಮ ದೈವಗ್ರಂಥದಲ್ಲಿ ಹೇಳಿದ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಹೇಳುವುದಾಗಿದೆ. ಈ ವಿಷಯ ಖುರ್‌ಆನ್ ಗ್ರಂಥದಲ್ಲಿ ಸೂರಾ 5, ಆಯತ್‌ಗಳು 44, 46, 48, 68 ರಲ್ಲಿ ಮತ್ತು (62–5) ರಲ್ಲಿ ಕೂಡಾ ಹೇಳಿದ್ದಾರೆ. ಹಾಗಿರುವಾಗ ಪ್ರಥಮ ದೈವಗ್ರಂಥದಲ್ಲಿ ಕೃಷ್ಣನು ಹೇಳಿರುವುದೆಲ್ಲ ಯೇಸು ಹೇಳಿದ್ದಾನೆ ಅಲ್ಲವೆ! ಯೇಸು ಹೇಳದಂತಿರುವ ಜ್ಞಾನ ಯಾವುದು ಇಲ್ಲ. ಆದರೇ (16–12) ರಲ್ಲಿ ಹೇಳಿದ ವಾಕ್ಯವನ್ನು ನೋಡಿದರೆ ಯೇಸು ಸ್ವಲ್ಪ ಜ್ಞಾನವನ್ನು ಹೇಳಲಿಲ್ಲವೆಂದು ಕೆಲವರಂದುಕೊಂಡರೂ ಅದು ಸತ್ಯ ಅಲ್ಲವೆಂದು ಯೇಸು ಸಂಪೂರ್ಣ ಜ್ಞಾನ ಹೇಳಿದ್ದಾನೆಂದು ಹೇಳಬಹುದು.

ಆದರೇ ನಂತರ ಕಾಲದಲ್ಲಿ ಬಂದಿರುವ ಖುರ್‌ಆನ್ ಗ್ರಂಥದಲ್ಲಿ ಕೂಡಾ ಸಂಪೂರ್ಣ ಜ್ಞಾನ ಹೇಳಲ್ಪಟ್ಟಿದೆ. ಯೇಸು ಹೇಳಿರುವುದು ಶರೀರ ಧರಿಸಿಬರುವ ಆದರಣಕರ್ತ ನಾನು ಹೇಳದ ವಿಷಯಗಳನ್ನು ಹೇಳುತ್ತಾನೆ ಎಂದಿದ್ದಾನೆ ಆದರೆ ಮೂರನೆ ಗ್ರಂಥದಲ್ಲಿ ಹೇಳುತ್ತಾರೆಂದು ಸಹ ಹೇಳಲಿಲ್ಲ. ಮೊದಲು ಎರಡು ಗ್ರಂಥಗಳಲ್ಲಿನ ಸಾರಾಂಶವೇ ಮೂರನೆ ಗ್ರಂಥದಲ್ಲಿ ಕೂಡಾ ಇದೆ. ಆದರೆ ಯೇಸು ಹೇಳಿದ ಮಾತಿನಲ್ಲಿ ಅರ್ಥವೇನು ಇದೆ. **"ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ ಆದರೆ ಈಗ ನೀವು ಅವುಗಳನ್ನು ಸಹಿಸಲಾರರು"** ಎಂದು ಇದೆ ಅಲ್ಲವೆ! ಪ್ರಥಮ ದೈವಗ್ರಂಥದಲ್ಲಿ ಹೇಳಿದ ಜ್ಞಾನವಾದರೆ ಅದು ಎಲ್ಲರೂ ಸಹಿಸುವುದೇ ಅಲ್ಲವೆ! ಒಂದು ವಿಧವಾಗಿ ನೋಡಿದರೆ ಆಗ ಬೈಬಲ್‌ನಲ್ಲಿ ಯೇಸು ಹೇಳದೆ ಬಿಟ್ಟಿರುವ ಸಹಿಸದ ವಿಷಯಗಳು ಯಾವಾದರೂ ಖುರ್‌ಆನ್ ಗ್ರಂಥದಲ್ಲಿ ಇವೆಯಾ? ಎಂದು ನೋಡಿದರೆ ಅಂತಹವುಗಳು ಯಾವು ಇಲ್ಲ. ಜಿಬ್ರಯೇಲ್ ಹೇಳಿದವುಗಳಲ್ಲಿ ಅಲ್ಲದೆ ಪ್ರತ್ಯೇಕವಾಗಿ ತಮ್ಮಂತೆ ಮಾನವ ಶರೀರ ಧರಿಸಿಬಂದ ಆದರಣಕರ್ತ ಎಂದು ಹೇಳಲ್ಪಟ್ಟಿರುವುದರಿಂದ ನಾವು ಮನುಷ್ಯನಾಗಿ ಬಂದವನು ಹೇಳುವ ಜ್ಞಾನದಲ್ಲಿ ಅಂತಹ ವಿಷಯಗಳಿರುತ್ತವೆಯೆಂದು ಅರ್ಥವಾಗುತ್ತಿದೆ. ಇನ್ನೂ ಏನು ತಿಳಿಯುತ್ತಿದೆ ಎಂದರೇ! ಯೇಸು ಇರುವಾಗ ಹೇಳಿದರೇ ಆ ವಿಷಯಗಳನ್ನು ಮನುಷ್ಯರು ಸಹಿಸುವುದಿಲ್ಲ. ಆದರೇ ನಂತರ ಕಾಲದಲ್ಲಿ ಆದರಣಕರ್ತ ಬಂದಾಗ ಹೇಳಿದರೆ ಆಗ ಸಹಿಸುತ್ತಾರೆ ಎಂದು ಕೂಡಾ ಅರ್ಥವಾಗುತ್ತಿದೆ. ಇದನ್ನನುಸರಿಸಿ ನೋಡಿದರೆ ಯೇಸು ಹೇಳದಂತೆ ಬಿಟ್ಟಿರುವ ವಿಷಯಗಳು ಅಲ್ಲಿಯವರೆಗು ಇಲ್ಲದ ವಿಷಯಗಳೆಂದು, ಭವಿಷ್ಯತ್ತಿನಲ್ಲಿ ಬರುವಂತಹ ವಿಷಯಗಳೆಂದು, ಆ ವಿಷಯಗಳು ಇರುವಾಗ ಹೇಳಿದರೇ ಅವುಗಳನ್ನು ಕುರಿತು ಅರ್ಥ ಮಾಡಿಕೊಳ್ಳುತ್ತಾರೆಂದು ಯೇಸು ಹೇಳಿದ ಮಾತುಗಳನ್ನನುಸರಿಸಿ ಅರ್ಥವಾಗುತ್ತಿದೆ.

ಈ ವಿಧವಾಗಿ ಅರ್ಥ ಮಾಡಿಕೊಂಡರೆ ಯೇಸು ಹೇಳಿದ ಉಳಿದ 13, 14, 15 ವಾಕ್ಯಗಳಿಗು ಕೂಡಾ ಅರ್ಥ ತಿಳಿಯಬಲ್ಲದು. 13ನೇ ವಾಕ್ಯದಲ್ಲಿ

ಸತ್ಯಸ್ವರೂಪಿಯಾದ ಆತ್ಮ ಬಂದಾಗ **"ನಿಮ್ಮನ್ನು ಸರ್ವಸತ್ಯದೊಳಗೆ ನಡೆಸುತ್ತದೆ"** ಎಂದು ಯೇಸು ಸ್ವತಃವಾಗಿ ಹೇಳಿದ್ದಾನೆ. ಈಗ ನಾನು ಹೇಳದ ವಿಷಯಗಳು ಬಂದರೆ ಆಗ ನಿಮ್ಮನ್ನು ಸಂದಿಗ್ಧದಲ್ಲಿ ಬಿಡದೆ ಅವುಗಳೊಂದರ ಸತ್ಯವನ್ನು ಹೇಳಿ ಅವುಗಳಿಂದ ಹೇಗೆ ಹೊರಬೀಳಬೇಕೋ, ಅವುಗಳನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೋ ಎಲ್ಲಾ ವಿಷಯಗಳ ಸತ್ಯವನ್ನು ತಿಳಿಸಿ ಸತ್ಯದೊಳಗೆ ನಡೆಸುತ್ತಾನೆ ಎಂದು ಅರ್ಥವಾಗುತ್ತಿದೆ. ಇದನ್ನನುಸರಿಸಿ ಮುಂಬರುವಂತಹ ಕಾಲದಲ್ಲಿ ನೀವು ಅಸತ್ಯ ವಿಷಯಗಳಲ್ಲಿ ಸಿಕ್ಕಿಕೊಳ್ಳುತ್ತೀರೆಂದು, ಹಾಗೆ ಅಸತ್ಯ, ಅಜ್ಞಾನ ವಿಷಯಗಳಲ್ಲಿ ಇರುತ್ತೀರೆಂದು ಹೇಳಿದರೇ ಆ ಮಾತನ್ನು ಮನುಷ್ಯರು ಸಹಿಸುವುದಿಲ್ಲವೆಂದು ಆಗ ಹೇಳಲಿಲ್ಲ. ಪ್ರತ್ಯಕ್ಷವಾಗಿ ಮನುಷ್ಯ ಅಸತ್ಯ, ಅಜ್ಞಾನ ವಿಷಯಗಳಲ್ಲಿ ಸಿಲುಕಿಕೊಂಡಾಗ ಹೇಳಿದರೆ ಆಗ ಮನುಷ್ಯನಿಗೆ ಅರ್ಥವಾಗುತ್ತದೆ. ಮನುಷ್ಯ ತಪ್ಪುಮಾಡಿದಾಗ ಅದನ್ನು ಪ್ರತ್ಯಕ್ಷವಾಗಿ ತೋರಿಸಿ ನೀನು ತಪ್ಪು ಮಾಡಿದ್ದೀಯಾ ಎಂದರೆ ಒಪ್ಪಿಕೊಳ್ಳುತ್ತಾನೆ. ಹಾಗಲ್ಲದೆ ತಪ್ಪುಮಾಡದ ಮುನ್ನವೇ ತಪ್ಪುಮಾಡುತ್ತೀಯಾ ಎಂದರೇ ಯಾರೂ ಸಹಿಸುವುದಿಲ್ಲ. ಆದ್ದರಿಂದ ಯೇಸು ಹಾಗೆ ಹೇಳಿದ್ದಾನೆ. ಒಳ್ಳೆಯದನ್ನು ಕುರಿತು ಹೇಳಿದರೆ ಮನುಷ್ಯ ಒಪ್ಪಿಕೊಳ್ಳುತ್ತಾನೆ, ಸಂತೋಷಿಸುತ್ತಾನೆ. ನೀನು ಭವಿಷ್ಯತ್ತಿನಲ್ಲಿ ದೊಡ್ಡ ಧನಿಕನಾಗುತ್ತೀಯಾ, ಎಷ್ಟೋ ಜನರಿಗೆ ದಾನ ಮಾಡುತ್ತೀಯಾ ಎಂದು ಭವಿಷ್ಯತ್ತನ್ನು ಹೇಳಿದರೆ ಜ್ಯೋತಿಷ್ಯನು ಹೇಳಿದ ಮಾತಿಗೆ ಸಂತೋಷಪಟ್ಟು, ಅವನಿಗೆ ಭವಿಷ್ಯತ್ತು ಹೇಳಿರುವುದಕ್ಕೆ ಸ್ವಲ್ಪ ಹಣವನ್ನು ಸಹ ಕೊಡುತ್ತಾನೆ. ಅದೇ ಜ್ಯೋತಿಷ್ಯನು ನೀನು ಭವಿಷ್ಯತ್ತಿನಲ್ಲಿ ಕಳ್ಳತನಗಳು ಮಾಡುತ್ತೀಯಾ, ಇತರರ ಕೈಯಲ್ಲಿ ಒದೆಗಳು ತಿನ್ನುತ್ತೀಯಾ ಎಂದು ಹೇಳಿದರೆ ಆ ಮಾತನ್ನು ಅವನು ಸಹಿಸುವುದಿಲ್ಲ. ಜ್ಯೋತಿಷ್ಯನು ಅಸತ್ಯವನ್ನು ಹೇಳಿದ್ದಾನೆಂದು ದೂಷಿಸಬಹುದು. ಆದ್ದರಿಂದ ಯೇಸುಗೆ ಭವಿಷ್ಯತ್ತಿನಲ್ಲಿ ಮನುಷ್ಯರು ಯಾವಕಡೆ ಹೋಗುತ್ತಾರೊ ಆತನಿಗೆ ತಿಳಿದು, ಮನುಷ್ಯರ ಅಜ್ಞಾನವನ್ನು ಕುರಿತು ಆ ದಿನ ಆತನಿಗೆ ಮೊದಲೇ ತಿಳಿದಿದ್ದರೂ, ಆ ವಿಷಯಗಳನ್ನು ಹೇಳಿದರೆ ಸಹಿಸುವುದಿಲ್ಲವೆಂದು ಹೇಳಿದ್ದಾನೆ. 13ನೇ ವಾಕ್ಯದ ಪ್ರಕಾರ ನೋಡಿದರೆ ಯೇಸು "ಅಜ್ಞಾನಮಾರ್ಗದಲ್ಲಿ ಹೋದವನಿಗೆ ಅದು

ಅಸತ್ಯಮಾರ್ಗವೆಂದು ಬೋಧಿಸಿ ಅಸತ್ಯದಿಂದ ಸತ್ಯದೊಳಗೆ ನಡೆಸುತ್ತಾನೆ" ಎಂದು ಹೇಳಿದ್ದಾನೆ. "ಬಂದಿರುವ ಆದರಣಕರ್ತ ತಾನು ಸ್ವತಃವಾಗಿ ಕಲ್ಪಿಸಿ ಯಾವುದು ಬೋಧಿಸುವುದಿಲ್ಲ. ಆತನು ಗತದಲ್ಲಿ ನಾವು ಹೇಳಿದ ವಿಷಯಗಳನ್ನೇ ಹೇಳುತ್ತಾನೆ. ಗತದಲ್ಲಿ ಮತ್ತು ಈಗ ಹೇಳಿರುವವು ದೇವರ ವಿಷಯಗಳು. ದೇವರ ವಿಷಯಗಳೆಲ್ಲವೂ ನಾನು ಹೇಳಿರುವವು. ನನ್ನ ವಿಷಯಗಳೆಂದೇ ತಿಳಿಯಿರಿ. ನಾನು ಹೇಳಿದ ವಿಷಯಗಳನ್ನೇ ನನ್ನ ಜ್ಞಾನವನ್ನೇ ಆದರಣಕರ್ತ ಬೋಧಿಸುತ್ತಾನೆ. ನಾನು ಈಗ ಹೇಳದ ವಿಷಯಗಳನ್ನು ನಿಮಗೆ ತಿಳಿಸುತ್ತಾನೆ" ಎಂದು ಹೇಳಿದ್ದಾನೆ.

(16–12) ವಾಕ್ಯದಲ್ಲಿ ಮುಂಬರುವಂತಹ **'ಮತ'** ಎನ್ನುವ ಅಧರ್ಮವನ್ನು ಕುರಿತು ಸೂಚನೆಯಾಗಿ ಹೇಳಿ ಆಗ ಅದು ಇಲ್ಲವಾದ್ದರಿಂದ, ಅದನ್ನು ಹೇಳಿದರೂ ಪ್ರಜೆಗಳು ನಂಬುವ ಪರಿಸ್ಥಿತಿಯಲ್ಲಿ ಇರುವುದಿಲ್ಲವೆಂದು ನಾನು ಹೇಳುವುದಿಲ್ಲ ಎಂದಿದ್ದಾನೆ. ಆದರಣಕರ್ತ ಬಂದಾಗ ಮತವೆನ್ನುವ ಅಧರ್ಮ ಪೂರ್ತಿ ಜಡೆಗಳು ಬಿಚ್ಚಿಕೊಂಡ ರಾಕ್ಷಸಿಯಂತೆ ಇರುತ್ತದೆ. ಮನುಷ್ಯರೆಲ್ಲರೂ ಅದರ ವಶವಾಗಿ ಅದರಹಿಂದೆ ನಡೆಯುತ್ತಿರುತ್ತಾರೆ. ಆಗ ಅಂತಹ ಅಸತ್ಯ ಸ್ಥಿತಿಯಲ್ಲಿರುವವರನ್ನು ಆದರಣಕರ್ತ ಸರ್ವ ಸತ್ಯದೊಳಗೆ ನಡೆಸುತ್ತಾನೆ. ಮತ ರಾಕ್ಷಸಿ ಕೋರೆಗಳನ್ನು ಕಿತ್ತುಹಾಕುತ್ತಾನೆ. ದೇವರು ಹೇಳಿದ ಮೂರು ಗ್ರಂಥಗಳ ಸಾರಾಂಶವನ್ನು ಬೋಧಿಸುತ್ತಾ, ಸತ್ಯಸಮೇತವಾದ ಜ್ಞಾನದಿಂದ ಶಾಸ್ತ್ರಬದ್ಧವಾದ ಜ್ಞಾನ ತಯಾರಿ ಮಾಡಿಕೊಂಡ **'ವಚನಗಳು'** ಎನ್ನುವ ಜ್ಞಾನ ಆಯುಧಗಳಿಂದ ಮತರಾಕ್ಷಸಿಗೆ ಪ್ರಜೆಗಳು ಎದುರು ತಿರುಗಿ ಅದರ ಪ್ರಭಾವದಿಂದ ಹೊರಬೀಳುತ್ತಾರೆ. ಮತಗಳನ್ನು ವಿರೋಧಿಸುವ ಆಲೋಚನೆ, ಆಚರಣೆ ಆದರಣಕರ್ತನಿಂದಲೇ ಪ್ರಾರಂಭವಾಗುತ್ತದೆ. ಮತ ನಿಯಮಗಳಲ್ಲಿ ನಲುಗಿಹೋಗುವವರನ್ನು, ಮತ ಸಾಂಪ್ರದಾಯಗಳಲ್ಲಿ ಬಾಧೆಪಡುವವರನ್ನು, ಹಿಂಸಾಮಾರ್ಗವನ್ನು ಪ್ರೇರೇಪಿಸುವ ಮತವನ್ನು, ಹೊಸದಾಗಿ ಹುಟ್ಟಿ ಐದನೇ ಅಧರ್ಮವಾಗಿರುವ ಮತವನ್ನು ಮನುಷ್ಯರ ಮಧ್ಯದಿಂದ ಇಲ್ಲದಂತೆ ಮಾಡಿ,

ದೇವರ ಮಾರ್ಗದಲ್ಲಿ ಆತಂಕವಾಗಿರುವ ಮತ ನಿಯಮಗಳನ್ನು ಅಡ್ಡವಿಲ್ಲದಂತೆ ಮಾಡಿ ದೇವರ ಮಾರ್ಗವನ್ನು ಸುಗಮವಾಗಿ ಮಾಡುವುದಕ್ಕೆ ಆದರಣಕರ್ತ ಬರುತ್ತಾನೆ ಎಂದು ಈದಿನ ಮತಗಳ ಮಧ್ಯ ಸಿಲುಕಿಕೊಂಡ ನಮಗೆ ಅರ್ಥವಾಗುತ್ತಿದೆ. ಇದೇ ವಿಷಯವನ್ನು ಮೊದಲೇ ಹೇಳಿದರೆ ನಂಬುವುದಿಲ್ಲ ವೆಂದು ಯೇಸು ಹೇಳಲಿಲ್ಲ. ಆ ದಿನ 'ಮತ' ಎನ್ನುವುದು ಎಲ್ಲಿಯೂ ಇಲ್ಲ.

ಯೇಸುಗೆ ಆ ದಿನವೇ ತಮ್ಮ ಭಕ್ತರೇ ಮೊದಲು ಗುಂಪಾಗಿ ತಯಾರಾಗಿ ಮೊದಲು **'ಕ್ರೈಸ್ಥವ ಸಂಘ'** ಎಂದು ಶುರುಮಾಡಿ ತಮ್ಮ ಸಂಘವನ್ನು ಬೆಳೆಸಿಕೊಳ್ಳವುದರಲ್ಲಿ ಲಗ್ನವಾಗುವುದರಿಂದ ಸೊಂಡಿಲು ಬಲಿತು ಊಸರಿವಲ್ಲಿ ಆದಂತೆ ಸಂಘ ಬಲಿತು ದೊಡ್ಡದಾಗಿ ಕೊನೆಗೆ ಮತವಾಗಿ ಬದಲಾಗುತ್ತದೆಂದು ಮೊದಲು ಕ್ರೈಸ್ತ ಮತವೇ ಹುಟ್ಟುತ್ತದೆಂದು, ಅದನ್ನು ನೋಡಿ ಮೊದಲಿದ್ದ ಹಿಂದೂ ಸಮಾಜದವರು ತಮ್ಮದು ಹಿಂದೂಮತವೆಂದು ಹೇಳಿಕೊಳ್ಳುವುದರಿಂದ ಮೊದಲು ದೇಶ, ನಂತರ ಪ್ರಪಂಚದಲ್ಲಿ ಮತವೆನ್ನುವ ರೋಗ ವ್ಯಾಪ್ತಿಹೊಂದಿದೆ. ಈಗ ಪ್ರಪಂಚದಲ್ಲಿ ಒಟ್ಟು ಹನ್ನೆರಡು (12) ಮತಗಳು ತಯಾರಾಗಿವೆ. 12 ಮತಗಳಲ್ಲಿ ಮತವೆಂದು ಹೆಸರಿಟ್ಟುಕೊಂಡಿರುವುದು ಮೊದಲು ಕ್ರೈಸ್ಥ ಮತವೇ. ನಂತರ ಹಿಂದೂ ಮತ. ಆ ನಂತರ ಉಳಿದ ಮತಗಳೆಲ್ಲ ತಯಾರಾಗಿವೆ. ಅವುಗಳ ಗುರುತಿಗಾಗಿ ಅನೇಕ ವಿಧಗಳ ಸಂಪ್ರದಾಯಗಳನ್ನು ಪ್ರತಿ ಮತದಲ್ಲಿ ಏರ್ಪಾಟು ಮಾಡಿಕೊಂಡಿದ್ದಾರೆ. ಹೆಚ್ಚಾಗಿ ಸಂಪ್ರದಾಯಗಳಿರುವ ಅವುಗಳಲ್ಲಿ ಮುಸ್ಲಿಮ್ ಮತ ಮೊದಲನೆಯದಾಗಿದ್ದು, ಎರಡನೆಯದು ಸಿಕ್ಕು ಮತ, ಮೂರನೆಯದು ಹಿಂದೂಮತ, ನಾಲ್ಕನೆಯದು ಕ್ರೈಸ್ಥಮತ. ಮುಖ್ಯವಾಗಿ ಈ ಮೂರು ಮತಗಳೇ ಹೆಚ್ಚಾಗಿ ಸಾಂಪ್ರದಾಯಗಳಿರುವವಾಗಿ ಕಾಣಿಸುತ್ತಿದ್ದರೂ ಮುಸ್ಲಿಮ್, ಕ್ರೈಸ್ಥ ಮತಗಳೆರಡೂ ಮತವನ್ನು ಬೆಳೆಸಿಕೊಳ್ಳುವ ದೃಷ್ಠಿಯಲ್ಲಿ 90 ರಿಂದ 99 ಪಾಲಿನ ವರೆಗು ದೃಷ್ಠಿಯನ್ನು ಕೇಂದ್ರೀಕರಿಸಿವೆ. ನಂತರದ್ದು ಹಿಂದೂಮತ. ಆದರೇ ಹಿಂದೂಮತ ದೈವಗ್ರಂಥ ಜ್ಞಾನ ತಿಳಿಯದಾಗಿ ಕುರುಡನಂತೆ ಪ್ರವರ್ತಿಸುತ್ತಿರುವುದರಿಂದ ಮತ ಅಭಿವೃದ್ಧಿ ಮಾಡಬೇಕೆಂದು

ಕೊಂಡರೂ ಕುಲವಿವಕ್ಷಗಳಿಂದ ಮತವು ಕ್ಷೀಣಿಸುತ್ತಾ ಬಂದಿದೆ. ಬರುವಂತಹ ಆದರಣಕರ್ತನಿಂದ ಮತ ಪ್ರಾಬಲ್ಯ ಕಡಿಮೆಯಾಗಿ ಜ್ಞಾನ ಪ್ರಾಬಲ್ಯ ಹೆಚ್ಚಾಗುತ್ತದೆಂದು ಅಂದುಕೊಳ್ಳುತ್ತಿದ್ದೇವೆ. ಶೀಘ್ರದಲ್ಲಿಯೇ ಆದರಣಕರ್ತ ಪ್ರಭಾವ ಇರುತ್ತದೆಂದು ಅಂದುಕೊಳ್ಳೋಣ.

**ಪ್ರಶ್ನೆ :– ಆದರೇ ಈಗಾಗಲೇ ಕೆಲವರು ಆದರಣಕರ್ತ ತಮ್ಮ ಮತದಲ್ಲಿ ಬಂದುಹೋಗಿದ್ದಾನೆ. ಯೇಸು ಹೇಳಿದಂತೆ ಜ್ಞಾನ ಹೇಳಿಹೋಗಿದ್ದಾನೆ ಎಂದು ಹೇಳುತ್ತಿದ್ದಾರೆ. ಹಾಗೆ ಬಂದುಹೋದಂತೆ ಎಲ್ಲಿಯೂ ಗುರುತುಗಳು ಕಾಣಿಸುತ್ತಿಲ್ಲ. ಅದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಯಾರು ಹೇಗೆ ಹೇಳಿದರೂ ಹೇಳಿಕೊಳ್ಳಬಹುದು, ಬೇಡವೆಂದು ನಾವು ಏನು ಹೇಳುವುದಿಲ್ಲ. ಯೇಸು ಏನು ಹೇಳಿದ್ದಾನೊ ಅದನ್ನೇ ನಾನು ಹೇಳಿದ್ದೇನೆ.

**ಪ್ರಶ್ನೆ :– ಯೇಸು ಏನು ಹೇಳಿದ್ದಾನೊ ಆ ದಿನ ಕೂಡಾ ಖಚಿತವಾಗಿ ತಿಳಿದಿಲ್ಲ ಅಲ್ಲವೆ! ನಾನು ಹೇಳಬೇಕಾದ ವಿಷಯಗಳಿವೆ, ಆ ಸಂಗತಿಗಳು ಈಗ ಹೇಳಿದರೆ ನೀವು ಸಹಿಸುವುದಿಲ್ಲ ಎಂದಿದ್ದಾನೆ. ಇಂತಹ ವಿಷಯವೆಂದು ಆತನು ಹೇಳಲಿಲ್ಲ ಅಲ್ಲವೆ! ಹಾಗಿರುವಾಗ ಆ ದಿನ ಯೇಸು ಮತ ವಿಷಯವನ್ನು ಕುರಿತು ಹೇಳುತ್ತಿದ್ದಾನೆಂದು ನೀವು ಹೇಗೆ ಹೇಳಬಲ್ಲಿರಿ?**

**ಉತ್ತರ :–** ನನಗೆ ಆತ್ಮಜ್ಞಾನ ಅಷ್ಟೋ ಇಷ್ಟೋ ತಿಳಿದಿದೆ. ಅದರ ಆಧಾರದಿಂದ ಪ್ರಪಂಚ ವಿಷಯಗಳು ತಿಳಿಯದಿದ್ದರೂ ದೈವಿಕವಾದ ವಿಷಯಗಳು ತಿಳಿಯುವುದಕ್ಕೆ ಅವಕಾಶವಿದೆ. ಆದ್ದರಿಂದ ಆ ದಿನ ಯೇಸು ಏನು ಹೇಳಿದ್ದಾನೊ ಅದನ್ನೇ ಹೇಳುತ್ತಿದ್ದೇನೆ. ನಾನು ಹೇಳುವ ಉತ್ತರ ಸಕ್ರಮವಾದುದು ಅಲ್ಲವೆನ್ನುವುದಕ್ಕೆ ನಿಮ್ಮ ಹತ್ತಿರ ಯಾವ ಆಧಾರವಿಲ್ಲ. ಮೊಂಡರಂತೆ ಹೌದು ಅಲ್ಲ ಎಂದು ನೀವು ಹೇಳಬಹುದು ಆದರೆ ನಾವು ಹಾಗೆ ಹೇಳುವುದಿಲ್ಲ. ಯೇಸುಗೆ ಆ ದಿನವೇ ಮತಗಳ ಹುಟ್ಟುವಿಕೆಯ ವಿಷಯ ತಿಳಿದಿದೆ. ದ್ವಾಪರಯುಗಕ್ಕಿಂತ

ಮೊದಲು ಎರಡು ದೊಡ್ಡ ಯುಗಗಳು ಕಳೆದುಹೋಗಿವೆ. ಯುಗಗಳ ಕಾಲ ಪರಿಮಿತಿ ಹೀಗೆ ಇದೆ.

**1) ಕೃತಯುಗ 17,28,000 ವರ್ಷಗಳು**

**2) ತ್ರೈತಾಯುಗ 12,96,000 ವರ್ಷಗಳು**

**3) ದ್ವಾಪರಯುಗ 8,64,000 ವರ್ಷಗಳು**

ಗತಕಾಲದಲ್ಲಿ ಮೂರು ಯುಗಗಳು ಕಳೆದುಹೋಗಿವೆ. ಕಲಿಯುಗ ಪ್ರಾರಂಭವಾಗಿ ಐದುಸಾವಿರ ವರ್ಷಗಳು ಕಳೆದಿವೆ. ಇಲ್ಲಿಗೆ ಪೂರ್ತಿಯಾಗಿ 38,93,000 ವರ್ಷಗಳು ಕಳೆದುಹೋಗಿವೆ. ಏಳು ಸಾವಿರ ಕಡಿಮೆ 39 ಲಕ್ಷಗಳ ವರ್ಷಗಳು ಕಳೆದುಹೋದಂತಾಗುತ್ತದೆ. ಮೂರು ಯುಗಗಳು ಕಳೆಯುವದರಲ್ಲಿ 38,88,000 ವರ್ಷಗಳಾಗಿದೆ. ನಂತರ ಕ್ರೈಸ್ಥವ ಮತ ಹುಟ್ಟಿದರೂ ಮೂರು ಸಾವಿರ ವರ್ಷಗಳು 38,91,000 ವರ್ಷಗಳು ಕಳೆದಿವೆ. ಅಷ್ಟು ವರ್ಷಗಳು ಭೂಮಿಮೇಲೆ **'ಮತ'** ಎನ್ನುವ ಪ್ರಸ್ತಾಪವೇ ಇಲ್ಲ. ಮತ ಎನ್ನುವ ಪ್ರಸ್ತಾಪವಿಲ್ಲದೆ 38 ಲಕ್ಷಗಳ 91 ಸಾವಿರ ವರ್ಷಗಳು ಕಳೆದು ಹೋಗಿವೆ. ಅಲ್ಲಿಯವರೆಗು ಭೂಮಿಮೇಲೆ ನಾಲ್ಕು ಅಧರ್ಮಗಳು ಮಾತ್ರವೇ ಇದ್ದವು. ನಾಲ್ಕು ಅಧರ್ಮಗಳು ಭಾರತದೇಶದಲ್ಲಿ ಮಾತ್ರ ಇದ್ದವು. ಉಳಿದ ದೇಶಗಳಲ್ಲಿ ಒಂದಾಗಲಿ ಅಥವಾ ಎರಡು ಅಧರ್ಮಗಳು ಇರುತ್ತಿದ್ದವು. ಆದರೇ ಅವರಿಗೆ ಜ್ಞಾನ ತಿಳಿದಿಲ್ಲ, ಅಜ್ಞಾನ ತಿಳಿದಿಲ್ಲ ಎನ್ನುವಂತಿರುತ್ತಿದ್ದರು. ಒಂದು ಭಾರತದೇಶದಲ್ಲಿಯೇ ನಾಲ್ಕು ಅಧರ್ಮಗಳು ಇದ್ದವು. ಭಾರತದೇಶ ಹೊರತು ಉಳಿದ ದೇಶಗಳಲ್ಲಿ ಎಲ್ಲಿಯೇ ಆಗಲಿ ನಾಲ್ಕು ಅಧರ್ಮಗಳು ಹುಡಿಕಿದರೂ ಕಾಣಿಸುತ್ತಿರಲಿಲ್ಲ. ಒಂದು ಸಮಯದಲ್ಲಿ ಪ್ರಪಂಚದೇಶಗಳಲ್ಲಿ ಅತ್ಯಂತ ಉನ್ನತ ಜ್ಞಾನವಿರುವ ದೇಶ ಭಾರತದೇಶವೇ. ಅದೇ ದೇಶದಲ್ಲಿ ತ್ರೇತಾಯುಗದಿಂದ ನಾಲ್ಕು ಅಧರ್ಮ ಗಳಿರುವಾಗ, ಈಗ ಎರಡುಸಾವಿರ ವರ್ಷಗಳಿಂದ **"ಮತ"** ಎನ್ನುವ ಅಧರ್ಮ ಹೊಸದಾಗಿ ಹುಟ್ಟಿಬಂದು ಸ್ವಲ್ಪಸ್ವಲ್ಪವಾಗಿ ಭೂಮಿಮೇಲೆ ಎಲ್ಲಾ ದೇಶಗಳಲ್ಲಿ

ವ್ಯಾಪಿಸಿಕೊಂಡಿದೆ. ಈದಿನ ಹೊಸದಾಗಿ ಹುಟ್ಟಿಬಂದಿರುವ **ಮತ** ಎನ್ನುವ ಅಧರ್ಮ ಎಲ್ಲಾ ಮತಗಳಲ್ಲಿ ಪೂರ್ತಿಯಾಗಿ ವ್ಯಾಪಿಸಿದೆ. ಪೂರ್ವದಲ್ಲಿ ಒಂದು ಅಥವಾ ಎರಡು ಅಧರ್ಮಗಳಿರುವ ದೇಶದಲ್ಲಿ ಕೂಡಾ ಮತ ಎನ್ನುವುದು ಪ್ರವೇಶಿಸಿದೆ. ಎಂಟು ವರ್ಷಗಳ ವಯಸ್ಸಿರುವವರಲ್ಲಿ ಕೂಡಾ ಸೇರಿಹೋಗಿದೆ. ಅದರಿಂದ ಮತ ಪ್ರಭಾವಕ್ಕೊಳಗಾಗದ ಮನುಷ್ಯ ಇಲ್ಲವೆಂದು ಹೇಳಬಹುದು.

ಭೂಮಿ ಮೇಲೆ ಇಂತಹ ಪರಿಸ್ಥಿತಿ ಬರುತ್ತದೆಂದು ಎರಡು (2) ಸಾವಿರ ವರ್ಷಗಳ ಹಿಂದೆಯೇ ಗ್ರಹಿಸಿದ ಯೇಸು “ನಾನು ಹೇಳಬೇಕಾಗಿರುವುದು ಇದೆ. ಆದರೇ ಈಗ ಹೇಳಿದರೇ ಅದನ್ನು ನೀವು ಸಹಿಸುವುದಿಲ್ಲ” ಎಂದು ಹೇಳಿದ್ದಾನೆ. ಮುಂಬರುವಂತಹ ಆದರಣಕರ್ತ ನಿಮ್ಮನ್ನು **ಮತ** ಎನ್ನುವ ಅಸತ್ಯದಿಂದ, **ಜ್ಞಾನ** ಎನ್ನುವ ಸತ್ಯದೊಳಗೆ ನಡೆಸುವನು ಎಂದು ಹೇಳುವುದು ನಡೆದಿದೆ. ಮೂರು ಯುಗಗಳಿಂದ ಸುಮಾರು 39,00,000 ವರ್ಷಗಳಿಂದ ನಾಲ್ಕು ಅಧರ್ಮಗಳು ಇದ್ದರೂ ಅವು ಎಲ್ಲರಲ್ಲಿ ಇಲ್ಲದಂತೆ ಕೆಲವರಲ್ಲಿ ಮಾತ್ರವೇ ಕಾಣಿಸುತ್ತಿದ್ದವು. ಈದಿನ ಕೂಡಾ ಹಾಗೆಯೇ ಇದೆ. ಆದರೇ ಈದಿನ ಹೊಸದಾಗಿ ಬಂದಿರುವ ಮತ ಎನ್ನುವುದು ಕೆಲವರಲ್ಲಿ ಇಲ್ಲದೆ ಎಲ್ಲರಲ್ಲಿ ಸೇರಿಹೋಗಿದೆ. ಮತ ಎನ್ನುವ ಅಧರ್ಮವನ್ನು ಕುರಿತು ನಾವು ಅನೇಕ ಸಲ ಹೇಳಿದ್ದೇವೆ. ಅದನ್ನು ಕುರಿತು ನಮ್ಮ ಗ್ರಂಥದಲ್ಲಿ ಕವರ್ ಪೇಜಿನ ಮೇಲೆ ಹೀಗೆ ಬರೆದಿದ್ದೇನೆ.

1) **ನಾಲ್ಕು ಅಧರ್ಮಗಳು ಶೇಕಡ ಹತ್ತರಷ್ಟು ಮನುಷ್ಯರಲ್ಲಿ ಇರುವಾಗ, ಒಂದು ಮತ ಎನ್ನುವ ಅಧರ್ಮ 99 ರಷ್ಟು ಇದೆ.**
2) **ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆಗಿದ್ದು ಐದನೆ ಅಧರ್ಮ ಮತ.**
3) **ದೈವಮಾರ್ಗಕ್ಕೆ ದೊಡ್ಡ ಆತಂಕ ಮತ.**
4) **ಎಲ್ಲಾ ಅಧರ್ಮಗಳನ್ನು ಮೀರಿರುವುದು ಮತ ಎನ್ನುವ ಅಧರ್ಮ.**
5) **ಪ್ರಪಂಚ ಮಾರ್ಗದಲ್ಲಿ ಮತ ಇದ್ದರೆ, ದೈವಮಾರ್ಗದಲ್ಲಿ ಹತವಾಗಿ ಹೋಗುತ್ತೀಯಾ.**

**6) ಕಲಿಯುಗದಲ್ಲಿ ಹೊಸದಾಗಿ ಹುಟ್ಟಿಬಂದಿರುವ ಐದನೆ ಅಧರ್ಮವೇ ಮತ.**

**7) ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.** **ಭಗವದ್ಗೀತೆ, ಬೈಬಲ್, ಖುರ್‌ಆನ್** ಮೂರು ಒಂದೇ ದೈವಗ್ರಂಥದಲ್ಲಿನ **ಭಾಗಗಳೇ.** ನಿಮ್ಮ ಮನೋಭಾವನೆ ಕುಲಮತಗಳಿಗೆ ಅತೀತವಾದರೆ ತಕ್ಷಣ **"ಪ್ರಬೋಧ ಸೇವಾ ಸಮಿತಿ"** ಯಲ್ಲಿ ಸದಸ್ಯರಾಗಿ ಸೇರಿರಿ. ನಿಮ್ಮನ್ನು ಜ್ಞಾನಿಗಳನ್ನಾಗಿ ಮಾಡಬೇಕೆಂದು ಕೋರುತ್ತಿರುವ. .

**–ತ್ರಿಮತ ಏಕೈಕ ಗುರು ಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ಅಧರ್ಮಗಳು ದೇವರ ಮಾರ್ಗಕ್ಕೆ ಆತಂಕ. ಅಧರ್ಮಗಳಿಂದ ದೇವರು ತಿಳಿಯಲ್ಪಡುವುದಿಲ್ಲ. ಈ ವಿಷಯವನ್ನು ವಿಶ್ವರೂಪ ಸಂದರ್ಶನ ಯೋಗ ಎನ್ನುವ ಅಧ್ಯಾಯದಲ್ಲಿ 48ನೇ ಶ್ಲೋಕ, 53ನೇ ಶ್ಲೋಕದಲ್ಲಿ ಹೇಳಲ್ಪಟ್ಟ ವಿಷಯ ಈಗ ಗುರುತು ಮಾಡುತ್ತಿದ್ದೇವೆ.

**ಶ್ಲೋ॥ 48. ನವೇದ ಯಜ್ಞಾಧ್ಯಯ ನೈರ್ನದಾನೈರ್ನ ಚಕ್ರಿಯಾಭಿರ್ನ ತಪೋಭಿರುಗ್ರೈಃ।**
**ಏವಂರೂಪ ಶ್ಯಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ! ॥**

**ಭಾವಾರ್ಥ :– ವೇದಗಳಿಂದಾಗಲಿ, ಯಜ್ಞಗಳಿಂದಾಗಲಿ, ದಾನಗಳಿಂದಾಗಲಿ, ಉಗ್ರತಪಸ್ಸುಗಳಿಂದಾಗಲೀ ಈ ರೂಪವಿರುವ ನನ್ನನ್ನು ತಿಳಿಯಲಾರರು. ಜಗತ್ತಿನಲ್ಲಿ ನೀವು ಹೊರತು ನನ್ನನ್ನು ನೋಡಿದವರು ಯಾರೂ ಇಲ್ಲ."**

**ಶ್ಲೋ॥ 53. ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ ॥**

**ಭಾವಾರ್ಥ :– "ನೀನು ನನ್ನನ್ನು ಹೇಗೆ ನೋಡಿದ್ದೀಯೋ ಆ ದರ್ಶನ ದೊರೆಯಬೇಕೆಂದರೂ ವೇದಗಳಿಂದಲೂ, ದಾನಗಳಿಂದಲೂ ಮತ್ತು ಯಜ್ಞ ಗಳಿಂದಲೂ, ತಪಸ್ಸುಗಳಿಂದಲೂ ಸಾಧ್ಯವಿಲ್ಲ."**

ಮೇಲಿನ ವಾಕ್ಯಗಳಲ್ಲಿ ಹೇಳಿದಂತೆ ನಾಲ್ಕು ಅಧರ್ಮಗಳಿಂದ ಯಾವಮಾತ್ರ ಮೋಕ್ಷ ಲಭಿಸುವುದು ಅಲ್ಲ. ದೇವರು ತಿಳಿಯಲ್ಪಡುವವನು ಅಲ್ಲ. ಕಲಿಯುಗದಲ್ಲಿ ಬಂದಿರುವ **ಮತ, ಸಾಂಪ್ರದಾಯ** ಎನ್ನುವ ಎರಡು ಅಧರ್ಮಗಳಲ್ಲಿ ಮೊದಲಿರುವ ನಾಲ್ಕು ಅಧರ್ಮಗಳಿಗಿಂತ ಮತ ಬಹಳ ದೊಡ್ಡದು ಮತ್ತು ಬಲವಾದುದು. ಮತ ಎನ್ನುವ ಅಧರ್ಮ ಮನುಷ್ಯರಲ್ಲಿ ವ್ಯಾಪಿಸಿರುವಂತೆ ಕಳೆದ ಮೂರು ಯುಗಳಲ್ಲಿ ಯಾವುದು ಹಾಗೆ ವ್ಯಾಪಿಸಲಿಲ್ಲ. ಕೃತ, ತ್ರೈತಾ, ದ್ವಾಪರ ಯುಗಗಳಲ್ಲಿ ಅಧರ್ಮಗಳಿದ್ದರೂ ಅವು ಎಲ್ಲರಲ್ಲಿ ಇರುತ್ತಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಕುಲಗಳಲ್ಲಿ ಹೊರತು ಉಳಿದ ಯಾವ ಕುಲದಲ್ಲಿನ ಪ್ರಜೆಗಳಿಗು ಧರ್ಮಗಳು ತಿಳಿದಿಲ್ಲ, ಅಧರ್ಮಗಳು ತಿಳಿದಿಲ್ಲ. ಮೂರು ಕುಲಗಳು ಏನಃ ಶೇ. 90ಕ್ಕಿಂತ ಹೆಚ್ಚಾಗಿರುವ ಉಳಿದ ಕುಲಗಳಲ್ಲಿ, ಧಾರ್ಮಿಕ, ಆಧ್ಯಾತ್ಮಿಕ ಎಂದರೆ ಏನೊ ತಿಳಿಯದ ಸ್ಥಿತಿಯಲ್ಲಿ ಇದ್ದರು. ಈದಿನ ಮತ ಎನ್ನುವುದು ಶೇ. 100ರಷ್ಟು ಪ್ರಜೆಗಳಲ್ಲಿ ವ್ಯಾಪಿಸಿದೆ. ಹಸಿವುಗೊಂಡವನು ಆಹಾರಕ್ಕಾಗಿ ಮಾತನಾಡದೆ ಮತಕ್ಕಾಗಿ ಮಾತನಾಡುವುದು ಆಶ್ಚರ್ಯವನ್ನು ಉಂಟುಮಾಡುತ್ತಿದೆ. ಕೆಲವರು ಪ್ರತ್ಯೇಕಿಸಿ ಕೆಲವು ಮತದವರು ಮತಕ್ಕಾಗಿ ಉಗ್ರವಾದವನ್ನು ಅವಲಂಭಿಸುತ್ತಿದ್ದಾರೆ. ಮತವ್ಯಾಪ್ತಿಗಾಗಿ ಕೆಲವರು, ಮತ ರಕ್ಷಣೆಗಾಗಿ ಕೆಲವರು ಉಗ್ರವಾದವನ್ನು ಬೆಳೆಸಿ ಪೋಷಿಸುವವರು ಕೂಡಾ ಇದ್ದಾರೆ. ಮತ ಬೋಧನೆಗಳನ್ನು ಸ್ವಲ್ಪಜನ ಯುವಕರಿಗೆ ಹೇಳಿ "ಮತಕ್ಕಾಗಿ ಮರಣಿಸಿದರೆ ಸ್ವರ್ಗಕ್ಕೆ ಹೋಗುತ್ತೀರ. ಸ್ವರ್ಗಕ್ಕೆ ಹೋಗುವುದು ಬಹಳ ದೊಡ್ಡ ಅವಕಾಶ. ಮತಕ್ಕಾಗಿ, ದೇವರಿಗಾಗಿ ಮರಣಿಸಿದವನಿಗೇ ಸುಲಭವಾಗಿ ಸ್ವರ್ಗಕ್ಕೆ ಹೋಗುವ ಅವಕಾಶ ದೊರೆಯುತ್ತದೆ. ಸ್ವರ್ಗಕ್ಕೆ ಹೋದರೆ ಅಲ್ಲಿ ಸ್ಥಿರಸ್ಥಾಯಿಯಾಗಿ ಸುಖಗಳು ಅನುಭವಿಸಬಹುದು. ಒಳ್ಳೆಯ ಅಂದವಾದ ಸ್ತ್ರೀಯರು ಅಲ್ಲಿ ಸಪರ್ಯ ಗಳು ಮಾಡುತ್ತಿರುತ್ತಾರೆ. ಅಲ್ಲಿ ಎಲ್ಲಾ ಸುಖಗಳು ಲಭಿಸುತ್ತವೆ" ಎಂದು ಸ್ವರ್ಗವನ್ನು ಕುರಿತು ಹೇಳಿ, ಸ್ವರ್ಗಕ್ಕಾಗಿ ಮರಣಿಸುವುದಕ್ಕೆ ಸಿದ್ಧಮಾಡಿ ಕಳುಹಿಸುತ್ತಾರೆ. ಅವರು ಮರಣಿಸುವುದಕ್ಕೆ ಅದೇಕೆಲಸವಾಗಿ ಇತರರನ್ನು ಎಂದರೇ ಇತರೆ ಮತದವರನ್ನು ಹಿಂಸಿಸುವುದಕ್ಕೆ, ಮಾರಣಹೋಮ ಸೃಷ್ಟಿಸುವುದಕ್ಕೆ ಹಿಂಜರಿಯುವು

ದಿಲ್ಲ. ಹಾಗೆ ಮಾಡುವವೇ ಉಗ್ರವಾದ ದಾಳಿಗಳು. ಅವರು ಮರಣಿಸಬೇಕೆಂಬ ಉದ್ದೇಶದಿಂದಲೇ ಇತರರನ್ನು ಸಾಯಿಸುವುದಕ್ಕೆ ಸಿದ್ಧವಾಗುತ್ತಾರೆ. ಕೊನೆಗೆ ಕೆಲವರನ್ನು ಸಾಯಿಸಿ ಅವರು ಮರಣಿಸುವುದು ನಡೆಯುತ್ತಿದೆ. ಅಮಾಯಕ ಜನರನ್ನು ನೂರುಮಂದಿಯನ್ನು ಸಾಯಿಸಿ ಕೊನೆಗೆ ಅವನು ಸ್ವರ್ಗಕ್ಕಾಗಿ ಮರಣಿಸಿದರೆ ಅವನು ಅಂದುಕೊಂಡಂತೆ, ಅವನು ಕೇಳಿದಂತೆ ಸ್ವರ್ಗ ಬರುತ್ತದೆಂದು ಗ್ಯಾರಂಟಿ ಏನು? ಸ್ವರ್ಗ ಬರುತ್ತದೆಂದು ಸ್ವರ್ಗ ಸುಖಗಳಿಗಾಗಿ ಬೇಗನೆ ಮರಣಿಸುವ ಮಾರ್ಗ ಅದೇಯೆಂದು ಉಗ್ರವಾದಕ್ಕಾಗಿ ಹೋಗುವವರಲ್ಲಿ ಜೀರ್ಣಿಸಿಕೊಂಡು ಹೋಗಿದೆ. ಆ ಕೆಲಸಕ್ಕೆ ಅವರನ್ನು ಪ್ರೇರೇಪಿಸಿರುವುದು ಮತವೆಂದು ತಿಳಿಯುತ್ತಿದೆ. ಈ ವಿಧವಾಗಿ **ಮತವು ಮನುಷ್ಯನನ್ನು ದೇವರಕಡೆ ಕಳಿಸದಿರುವುದೇ ಅಲ್ಲದೆ ಹಿಂಸೆಕಡೆ ಕಳಿಸುತ್ತಿದೆ.**

ಪ್ರತಿ ಕೆಲಸಕ್ಕು ಲೆಕ್ಕಚಾರವಾಗಿ ತೂಕ ಹಾಕಿದಂತೆ ಪಾಪಪುಣ್ಯಗಳು ಬರುವುದು ನಡೆಯುತ್ತಿರುತ್ತದೆ. ಮನುಷ್ಯ ಮತಕ್ಕಾಗಿ ಕೆಲಸ ಮಾಡಿದರೂ, ಮತ್ತ್ಯಾವುದಕ್ಕೆ ಕೆಲಸ ಮಾಡಿದರೂ ಪಾಪ ಪಾಪವಾಗಿಯೇ ಬರೆಯಲ್ಪಡುತ್ತದೆ. ಹಾಗೆಯೇ ಪುಣ್ಯ ಪುಣ್ಯವಾಗಿಯೇ ಬರೆಯಲ್ಪಡುತ್ತದೆ. ಮನುಷ್ಯ ಪಾಪಪುಣ್ಯಗಳ ಕರ್ಮಗಳಿಂದ ಹೊರಬೀಳುವುದಕ್ಕೆ ದೇವರು ಮನುಷ್ಯನಿಗೆ ಜ್ಞಾನವನ್ನು ತಿಳಿಸಿದ್ದಾನೆ. ಸಾಧಾರಣ ಕೆಲಸಗಳಲ್ಲಿಯೇ ನಮಗೆ ತಿಳಿಯದಂತೆ ಬರುವ ಪಾಪಪುಣ್ಯ ಕರ್ಮಗಳನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಜ್ಞಾನವಿರುವಾಗ, ಜ್ಞಾನಕ್ಕೆ ಪೂರ್ತಿ ವಿರುದ್ಧವಾದವು ಅಧರ್ಮಗಳು. ಮನುಷ್ಯ ಜ್ಞಾನವನ್ನು ತಿಳಿಯದೆಹೋದರೂ ಪರವಾಗಿಲ್ಲ. ಈದಿನ ಅಲ್ಲದಿದ್ದರೆ ನಾಳೆಯಾದರೂ ಕಲಿತುಕೊಳ್ಳುತ್ತಾನೆಂದು, ಸ್ವಲ್ಪ ವಯಸ್ಸು ಬಂದನಂತರವಾದರೂ ತಿಳಿಯುತ್ತಾ ನೆಂದು ಅಂದುಕೊಳ್ಳಬಹುದು ಆದರೆ **"ಮತ"** ಎನ್ನುವ ಅಧರ್ಮದಲ್ಲಿ ಸಿಲುಕಿ ಕೊಂಡವನು ಎಂದಿಗೂ ದೇವರಜ್ಞಾನದ ಕಡೆ ಬರುತ್ತಾನೆಂಬ ನಂಬಿಕೆಯಿಲ್ಲ.

ಕಲಿಯುಗದಲ್ಲಿ **"ಮತ"** ಎನ್ನುವ ಐದನೇ ಅಧರ್ಮ ಬಂದರೆ ಅಲ್ಲಿಯವರೆಗು ಮನುಷ್ಯರಲ್ಲಿರುವ ಮಾನವತ್ವ ಹೋಗಿ ಮನುಷ್ಯರಲ್ಲಿ ರಾಕ್ಷಸತ್ವ

ಬೆಳೆದುಹೋಗುತ್ತದೆಂದು ಗ್ರಹಿಸಿದ ಸೃಷ್ಠಿಕರ್ತನಾದ ದೇವರು ತನ್ನ ಅವತಾರ ಕಲಿಯುಗದಲ್ಲಿಯೇ ಸೃಷ್ಠಿಸಿಕೊಂಡಿದ್ದಾನೆ. ಕೃಷ್ಣನ ಅವತಾರ ಕಲಿಯುಗ ಪ್ರಾರಂಭದಲ್ಲಾದರೆ, ಯೇಸುವಿನದ್ದು ನಂತರ ಮೂರು ಸಾವಿರ ವರ್ಷಗಳಿಗೇ ಬಂದಿದೆ. ಭಗವಂತನಾಗಿ ಅವತರಿಸಿದ ಇಬ್ಬರೂ ತಮ್ಮ ಬೋಧನೆಗಳಲ್ಲಿ ಮೊದಲನೆಯದಾಗಿ ಮತವನ್ನು ಎದುರುಕೊಳ್ಳುವಂತೆ ಮತವೆನ್ನುವ ಅಜ್ಞಾನದಲ್ಲಿ ಅಧರ್ಮದಲ್ಲಿ ಸಿಲುಕಿಕೊಳ್ಳುವಂತೆ ಬೋಧನೆಗಳು ಕಲ್ಪಿಸಿ ಹೇಳಿದ್ದಾರೆ. ಕ್ರೈಸ್ತ ಮತ ಹುಟ್ಟಿನಿಂದಲೇ ಊಸಿರು ತಂದುಕೊಂಡ ಮತ, ಇಸ್ಲಾಮ್ ಹುಟ್ಟಿನಿಂದ ಇಸ್ಲಾಮ್‌ನನ್ನು ಕೂಡಾ ತನ್ನಲ್ಲಿ ಬೆರೆಸಿಕೊಂಡಿದೆ. ವಾಸ್ತವಕ್ಕೆ ಇಸ್ಲಾಮ್ ಆಗಲಿ, ಕ್ರೈಸ್ಥವವಾಗಲಿ ಮತದಲ್ಲಿ ಸಂಬಂಧ ಇಲ್ಲದೇ ಹುಟ್ಟಿವೆ. ಕ್ರೈಸ್ಥವವು ನಂತರ ಹುಟ್ಟಿದ ಮತ. ಬೈಬಲ್ ಗ್ರಂಥದಲ್ಲಿನ ಜ್ಞಾನದಲ್ಲಿ ತನ್ನ ಜಾಡುಗಳನ್ನು ತೋರಿಸಲಾರದೆ ಹೋಗಿದೆ. ಹಾಗೆಯೇ ಐದುಸಾವಿರ ವರ್ಷಗಳ ಪೂರ್ವದಲ್ಲಿಯೇ ಹುಟ್ಟಿದ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನದಲ್ಲಿ ಯಾವುದೇ ಮತವೊಂದರ ಛಾಯೆಗಳು ಕಾಣಿಸುವುದಿಲ್ಲ. ಬೈಬಲ್ ಗ್ರಂಥ ತಯಾರಾದ ನಂತರ ಬಂದಿರುವ ಮತ ಬೈಬಲ್‌ನಲ್ಲಿ ಕೂಡಾ ತನ್ನ ಛಾಯೆಗಳನ್ನು ತೋರಿಸಲಾರದೆ ಹೋಗಿದೆ. ಎರಡುಸಾವಿರ ವರ್ಷಗಳ ಸಮಯದಲ್ಲಿ ಹುಟ್ಟಿ, ಚಿಕ್ಕದಾಗಿ ಬೆಳೆಯುತ್ತಾ ಬಂದಿರುವ ಮತ ಇಸ್ಲಾಮ್‌ನನ್ನು ಮತವಾಗಿ ರೂಪಾಂತರಿಸಿದೆ. ಮತ ಎನ್ನುವುದರ ಮೇಲೆ ಇಸ್ಲಾಮ್ ಹುಟ್ಟದಿದ್ದರೂ ಜಿಬ್ರಯೇಲ್ ಹೇಳಿದ ಇಸ್ಲಾಮ್ ಬೋಧನೆಗಳು ಮತಕ್ಕೆ ದೂರವಾಗಿದ್ದರೂ ಆ ಬೋಧನೆಗಳನ್ನು ಗ್ರಂಥವಾಗಿ ಮಾಡುವಾಗ ಆಗಾಗಲೇ ಮನುಷ್ಯರಲ್ಲಿ ಸೇರಿದ ಮತ ಗ್ರಂಥದಲ್ಲಿ ತನ್ನ ಛಾಯೆಗಳನ್ನು ತೋರಿಸಿದೆ. ಗ್ರಂಥದಲ್ಲಿನ ಜ್ಞಾನ ಓದುವವರಿಗೆ ಅಧರ್ಮದ ಪ್ರಕಾರ ಅರ್ಥವಾಗುವಂತೆ ಮಾಡಿದೆ. ಧರ್ಮಗಳ ಪ್ರಕಾರ ಅರ್ಥವಾಗದಂತೆ ಮಾಡಿದೆ. ಕೆಲವರಿಗೆ ಅಧರ್ಮದ ಪ್ರಕಾರವೇ ಅರ್ಥವಾಗುವಂತೆ ಕೆಲವು ವಾಕ್ಯಗಳನ್ನು ತನ್ನಕಡೆ ಇರುವಂತೆ ಬರೆಯುವಾಗಲೇ ಮನುಷ್ಯರಿಂದ ಬರೆಯಿಸಿದೆ. ವಾಸ್ತವಕ್ಕೆ ಗ್ರಂಥದಲ್ಲಿ **ಮತ** ಎನ್ನುವುದು ಇಲ್ಲ. ಆದರೂ ಮತವಿರುವಂತೆ, ಮತಕ್ಕಾಗಿ ಕೆಲಸಮಾಡುವುದೇ

ಮುಖ್ಯವಾದ ದೇವರ ಕೆಲಸ ಎನ್ನುವಂತೆ ಮನುಷ್ಯರನ್ನು ವಾಕ್ಯದಲ್ಲಿ ಮತ ಭ್ರಮಿಸುವಂತೆ ಮಾಡುತ್ತಿದೆ. ದೇವರು ಏನೋ ಹೇಳಿದರೆ ಏನೋ ಅರ್ಥವಾಗುವಂತೆ ಅದರ ಪ್ರಕಾರ ಕೊನೆಗೆ ಮನುಷ್ಯರನ್ನು ಮತದಕಡೆ ಬರುವಂತೆ ಮಾಡುತ್ತಿದೆ. ಖುರ್‌ಆನ್ ಗ್ರಂಥದಲ್ಲಿ ಮನುಷ್ಯರನ್ನು ಹೇಗೆ ತಪ್ಪು ಭಾವನೆಯಿಂದ ಭ್ರಮಿಸುವಂತೆ ಮಾಡುತ್ತಿದೆಯೋ ಒಂದುಸಲ ನೋಡೋಣ. ಮತ ಮನುಷ್ಯರನ್ನು ತಪ್ಪು ಭಾವನೆಯೊಳಗೆ ತಳ್ಳುತ್ತಿದೆಯೆಂದು ಹೇಳುವುದಕ್ಕೆ ಉದಾಹರಣೆಗಯಾಗಿ ಸೂರಾ9, ಆಯತ್ 5ನ್ನು ನೋಡೋಣ.

**(9–5) "ನಿಷಿದ್ಧ ಮಾಸಗಳು ಕಳೆದುಹೋದ ನಂತರ ಕೆಟ್ಟಮಾರ್ಗದಲ್ಲಿ ಹೋಗುವವರನ್ನು (ಕಪಟರನ್ನು), ಮಾತು ತಪ್ಪಿದವರನ್ನು ಎಲ್ಲಿ ದೊರೆತರೆ ಅಲ್ಲಿ ಸಾಯಿಸಿರಿ ಮತ್ತು ಅವರನ್ನು ಹಿಡಿದುಕೊಳ್ಳಿ. ಇನ್ನೂ ಅವರನ್ನೇ ಸುತ್ತುವರೆಯಿರಿ. ಮತ್ತು ಪ್ರತಿ ಮಾತಿನ ಹತ್ತಿರ ಅವರಿಗಾಗಿ ಕಾದಿಕೊಂಡಿರಿ. ಆದರೇ ಅವರು ಪಶ್ಚಾತ್ತಾಪ ಪಟ್ಟು ನಮಾಜನ್ನು ಸ್ಥಾಪಿಸಿ ಜಕಾತ್‌ನ್ನು ಕೊಟ್ಟರೆ ಅವರನ್ನು ಅವರ ಪಾಡಿಗೆ ಬಿಟ್ಟುಬಿಡಿ. ನಿಶ್ಚಯವಾಗಿ ಅಲ್ಲಾಹ್ ಕ್ಷಮಾಶೀಲನು, ಕರುಣಿಸುವವನು.**

**(9–6) "ಒಂದುವೇಳೆ ಕಪಟರಲ್ಲಿ ಯಾವ ವ್ಯಕ್ತಿ ಆದರೂ ನಿನ್ನ ಶರಣುಕೋರಿದರೆ ಆತನು ದೈವಜ್ಞಾನವನ್ನು ಕೇಳುವವರೆಗು ಆತನಿಗೆ ನೀನು ಆಶ್ರಯ ಕೊಡು. ಆ ನಂತರ ಆತನನ್ನು ಆತನ ಸುರಕ್ಷಿತ ಸ್ಥಾನಕ್ಕೆ ಸೇರಿಸು. ಅವರು ಜ್ಞಾನ ತಿಳಿಯದವರಾಗಿವುದರಿಂದ ಅವರ ಬಗ್ಗೆ ನೀನು ಈ ವಿಧವಾಗಿ ವ್ಯವಹರಿಸು."**

ಈ ಎರಡು ಆಯತ್‌ಗಳನ್ನು ಗಮನಿಸಿದರೆ ಇದರಲ್ಲಿ ಜ್ಞಾನವೇ ಬರೆಯಲ್ಪಟ್ಟಿದ್ದರೂ, ಮತ ತಲೆಯಲ್ಲಿರುವವರಿಗೆ ಪೂರ್ತಿಯಾಗಿ ಮತ ಸಂಬಂಧವಾದ ವಿಷಯವೇ ಜ್ಞಾನವಾಗಿ ಅರ್ಥವಾಗುತ್ತದೆ. ಆಗ ನಾನು ದೇವರ

ಮಾರ್ಗದಲ್ಲಿ ದೇವರಿಗಾಗಿ ತಾವು ಕೆಲಸಮಾಡುವವರಾಗಿ, ಉಳಿದವರು ತಮ್ಮ ದೇವರಿಗೆ ವಿರುದ್ಧವಾದವರಾಗಿ ಇರುವಂತೆ ತಿಳಿದು ತಮ್ಮ ಮತ ಅಲ್ಲದವರನ್ನು, ತಮ್ಮ ದೇವರನ್ನು ಆರಾಧಿಸದವರು ಅವರ ಲೆಕ್ಕದಲ್ಲಿ ತಪ್ಪುಮಾರ್ಗದಲ್ಲಿ ಇರುವಂತೆ ಕಾಣಿಸಿದಾಗ ಅವರನ್ನು ಸಾಯಿಸೆಂದು ದೇವರೇ ವಾಕ್ಯದಲ್ಲಿ ಆದೇಶಿಸಿದಂತೆ ಅರ್ಥ ಮಾಡಿಕೊಳ್ಳುತ್ತಾರೆ. ವಾಕ್ಯದಲ್ಲಿ ಹೇಳಿದಂತೆ ಸಾಯಿಸಿರಿ, ಅವರನ್ನು ಹಿಡಿದುಕೊಳ್ಳಿರಿ, ಮತ್ತು ಅವರನ್ನು ಹೊಂಚುಹಾಕಿ ಹಿಡಿದುಕೊಳ್ಳಿ ಎಂದು ಬರೆದಿರುವುದನ್ನು ನೋಡಿ ಹಿಡಿದುಕೊಳ್ಳಿ, ಸಾಯಿಸಿರಿ ಎನ್ನುವುದು ಅವರಲ್ಲಿ ಅರ್ಥವಾಗುವಂತೆ ಮಾಡುತ್ತದೆ. ಪಕ್ಕದಲ್ಲಿಯೇ ಇರುವ ಆರನೇ ವಾಕ್ಯದಲ್ಲಿ ಅವರ ದೇವರನ್ನು ಆರಾಧಿಸದವರನ್ನು, ಅವರ ಜ್ಞಾನವನ್ನು ಓದದವರನ್ನು ಬಿಡಬಾರದೆಂದು ಅವರ ಜ್ಞಾನದ ಪ್ರಕಾರ ನಡೆದುಕೊಂಡು ಅವರ ದೇವರನ್ನೇ ಆರಾಧಿಸಿದರೆ ಅವನನ್ನು ಬಿಡಬೇಕೆಂದು ಮತ ಸಂಬಂಧವಾದ ದೇವರನ್ನು, ಮತ ಸಂಬಂಧ ಜ್ಞಾನವನ್ನು ತೋರಿಸುವುದರಿಂದ ಅಲ್ಲಿಯೂ ಕೂಡ ಹಿಂಸೆಗೆ ದಾರಿ ಏರ್ಪಡುತ್ತಿದೆ. ಈದಿನ 'ಹೊಂಚುಹಾಕಿ ಸಾಯಿಸಿರಿ' ಎನ್ನುವ ಮಾತನ್ನು ಅಡ್ಡ ಇಟ್ಟುಕೊಂಡು ಆ ಮಾತನ್ನು ದೇವರು ಯಾರಿಗೆ ಹೇಳಿದ್ದಾನೆ? ಎಂದು ಅಲೋಚಿಸದೆ, ತಮಗೇ ದೇವರು ಹೇಳಿದ್ದಾನೆಂದು ಕೆಲವರು ತಿಳಿದು ಜನ ಸಮೂಹ ಇರುವ ಸ್ಥಳಗಳಲ್ಲಿ ಬಾಂಬುಗಳಿಟ್ಟು ಅಮಾಯಕ ಪ್ರಜೆಗಳನ್ನು ಸಾಯಿಸುತ್ತಿದ್ದಾರೆ. ಮರಣಿಸಿದವರೆಲ್ಲ ತಮ್ಮ ಮತವನ್ನು, ತಮ್ಮ ದೇವರನ್ನು ವಾಕ್ಯದಲ್ಲಿ ಹೇಳಿದಂತೆ ಅನುಸರಿಸದವರನ್ನು, ಅವರನ್ನು ಸಾಯಿಸುವುದರಿಂದ ದೇವರ ಮಾರ್ಗದಲ್ಲಿ ನಾವು ಸಕ್ರಮವಾಗಿ ಇದ್ದೇವೆಂದು, ನಾವೇ ನಿಜವಾದ ದೇವರ ಭಕ್ತರೆಂದು ಅಂದುಕೊಳ್ಳುತ್ತಿದ್ದಾರೆ.

ಈ ವಿಧವಾಗಿ ಮನುಷ್ಯರಲ್ಲಿನ ಭಾವನೆಯನ್ನು ಬದಲಾಯಿಸಿ ತಪ್ಪು ಮಾರ್ಗದಲ್ಲಿ, ಹಿಂಸಾಮಾರ್ಗದಲ್ಲಿ ಮನುಷ್ಯನನ್ನು ಮತವು ಕಳುಹಿಸುತ್ತಿದೆ. ವಾಕ್ಯದಲ್ಲಿ ಹೇಳಿರುವುದು ಜ್ಞಾನವೇ. ದೇವರು ತನ್ನ ಪರಿಪಾಲನೆಯಲ್ಲಿ ಪಾಪ ಮಾಡಿದ ಪಾಪಿಗಳನ್ನು ಹಾಗೆ ಶಿಕ್ಷಿಸಿರೆಂದು ಆದೇಶಕೊಟ್ಟಂತೆ (9–5) ನೇ

ವಾಕ್ಯದಲ್ಲಿ ಇದೆ. ಆದರೇ ಅದು ತನ್ನ ದೂತರಿಗೆ ಕೊಟ್ಟಿರುವ ಆಜ್ಞೆಯೆಂದು ಗ್ರಹಿಸದೆ ಮತವೆಂಬ ಕತ್ತಲಲ್ಲಿ ಮನುಷ್ಯನಿಗೆ ಹೇಳದ ವಿಷಯವನ್ನು ಮನುಷ್ಯನಿಗೇ ಎಂದು ತಿಳಿದು ತಾನು ದೇವರಿಗೆ ಇಷ್ಟವಾದ ಕೆಲಸವನ್ನು ಮಾಡುತ್ತಿದ್ದೇನೆಂದು, ಆದ್ದರಿಂದ ತಾನು ಮರಣಿಸಿದರೂ ದೇವರು ತನಗಾಗಿ ಮರಣಿಸಿದವರನ್ನು ಸ್ವರ್ಗಕ್ಕೆ ಕಳುಹಿಸುತ್ತಾನೆಂದು, ಸ್ವರ್ಗಕ್ಕೆ ಹೋದವನು ಅನೇಕ ಸುಖಗಳನ್ನು ಹೊಂದಬಹುದೆಂದು ಅಂದುಕೊಳ್ಳುತ್ತಿದ್ದಾನೆ. ತಮ್ಮ ಕೈಯಲ್ಲಿ ಮರಣಿಸಿದವರು ನರಕಕ್ಕೆ ಹೋಗಿರುತ್ತಾರೆಂದು ಕೂಡಾ ಅಂದುಕೊಳ್ಳುವುದು ನಡೆಯುತ್ತಿದೆ.

ಈ ವಿಧವಾಗಿ ಮೂರು ಗ್ರಂಥಗಳ ವಿಷಯಗಳನ್ನು ಮನುಷ್ಯನ ಮೆದುಳಿಗೆ ಮತವೆನ್ನುವುದು ಅರ್ಥವಾಗದಂತೆ ಮಾಡಿದೆ. ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ ಬೋಧನೆಗಳು ಬರೆದಾಗ ಮತವಿಲ್ಲದಿರುವುದರಿಂದ, ಅದರಲ್ಲಿ ಹಿಂಸೆಗೆ ದಾರಿ ತೆಗೆಯುವ ವಚನಗಳು ಕಡಿಮೆ ಇವೆ. ಖುರ್‌ಆನ್ ಗ್ರಂಥದಲ್ಲಿ ಕೂಡಾ ಜ್ಞಾನವೇ ಹೇಳಿದರೂ, ಪಾಪ ಮಾಡಿದವರನ್ನು ಶಿಕ್ಷಿಸುವುದಕ್ಕೆ ದೇವರ ದೂತರಿಗೆ ಅಂದರೇ ದೇವರ ಪಾಲಕರಿಗೆ ಕೊಟ್ಟಿರುವ ಆಜ್ಞೆಗಳು ಅಲ್ಲಲ್ಲಿ ಇವೆ. ಅಂಥದ್ದೇ (9–5) ಹೇಳುವುದಾಗಿದೆ. ಬೈಬಲ್ ಗ್ರಂಥದಲ್ಲಿ ಕೂಡಾ ಇಂತಹ ವಿಷಯವೇ ಇದ್ದರೂ, ಅಲ್ಲಿ ದೇವರು ಆಜ್ಞೆ 'ಪಾಲಕರಿಗೆ ಕೊಟ್ಟಿದ್ದಾನೆ' ಎಂದು ಇದೆ. ಆದ್ದರಿಂದ ಅದು ನಮಗೇ ಹೇಳಿರುವುದೆಂದು ಮನುಷ್ಯರು ಅಂದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಮತ ಬಂದನಂತರ ಹುಟ್ಟಿರುವುದು ಖುರ್‌ಆನ್ ಗ್ರಂಥ ಆಗಿರುವುದರಿಂದ ಜ್ಞಾನವನ್ನು, ದೇವರನ್ನು ತೋರಿಸಿ ಮತವು ಮನುಷ್ಯರನ್ನು ತನ್ನಕಡೆ ಸೆಳೆದುಕೊಳ್ಳುತ್ತಿದೆ. ಆದ್ದರಿಂದ ಉಳಿದ ಮತಗಳಿಗಿಂತ ಮುಸ್ಲಿಮ್ ಮತದವರೆ ಹೆಚ್ಚಾಗಿ ಮತಸಂಬಂಧವಾದ ಹಿಂಸೆಗೆ ಭಾಗಿಯಾಗುತ್ತಿದ್ದಾರೆ.

ಒಂದು ವಿಧವಾಗಿ ಹೇಳಿದರೆ ಭಗವದ್ಗೀತೆಗಿಂತ, ಬೈಬಲ್‌ಗಿಂತ, ಖುರ್‌ಆನ್ ಗ್ರಂಥದಲ್ಲಿ ಸೂಕ್ಷ್ಮಾತಿ ಸೂಕ್ಷ್ಮ ಜ್ಞಾನ ಹೆಚ್ಚಾಗಿ ಇದೆ. ಭಗವದ್ಗೀತೆಯಲ್ಲಿನ ಜ್ಞಾನವೇ ತನ್ನಲ್ಲಿ ಇದೆಯೆಂದು ಖುರ್‌ಆನ್ ಬಹಳಕಡೆ ಹೇಳಿದೆ. 5ನೇ ಸೂರಾದಲ್ಲಿ ಹೆಚ್ಚಾಗಿ ಹೇಳಿದ್ದಾರೆ. ಭಗವದ್ಗೀತೆಯಲ್ಲಿನ ಜ್ಞಾನವೇ ಇದ್ದರೂ

ಹೇಳಿದ ರೀತಿಯನ್ನನುಸರಿಸಿ ನೋಡಿದರೆ ಭಗವದ್ಗೀತೆಗಿಂತ ಚೆನ್ನಾಗಿದೆಯೆಂದು, ದೇವರಿಗೆ ಹತ್ತಿರವಾಗಿ ಹೇಳಿದೆಯೆಂದು, ಹಾಗೇ ಮನುಷ್ಯನ ಜೀವನಕ್ಕು ಕೂಡಾ ಹತ್ತಿರಸಂಬಂಧವಾಗಿ ಹೇಳಿದೆಯೆಂದು ಹೇಳಬಹುದು. ಇನ್ನೊಂದು ವಿಧವಾಗಿ ಹೇಳಿದರೆ ಗ್ರಂಥದಲ್ಲಿನ ಜ್ಞಾನ ದೊಡ್ಡದಾದರೂ ಅದನ್ನು ಗ್ರಹಿಸಿಕೊಳ್ಳುವ ಶಕ್ತಿ ಮುಸ್ಲಿಮ್‌ರಲ್ಲಿ ಬಹಳ ಕಡಿಮೆ ಇದೆ ಎಂದು ಹೇಳಬಹುದು. ಅವರಲ್ಲಿ ವಿಶ್ವಾಸಕ್ಕೆ ತಕ್ಕಂತೆ ಗ್ರಂಥದಲ್ಲಿನ ಜ್ಞಾನ ಅರ್ಥವಾಗಿದ್ದರೆ ಪ್ರಪಂಚದಲ್ಲಿ ಮುಸ್ಲಿಮ್‌ರೆ ಎಲ್ಲರಿಗಿಂತ ದೊಡ್ಡವರೆಂದು ಹೇಳಬಹುದು. ಆದರೇ ಅವರು ಗ್ರಂಥ ಜ್ಞಾನದಲ್ಲಿ ಸಿಲುಕಿದಂತೆ, ಮತಜ್ಞಾನದಲ್ಲಿ ಸಿಲುಕಿಕೊಂಡು ಹೋಗಿದ್ದಾರೆ.

ಸೃಷ್ಠಿಕರ್ತನಾದ ದೇವರಿಗೆ ಎಲ್ಲಾ ತಿಳಿದಿದೆ. ಒಂದುಕಡೆ ತನ್ನ ಆತ್ಮದ ಮೂಲಕ ಅಧರ್ಮಗಳನ್ನು ಹೆಚ್ಚಿಸುತ್ತಾ ಮತ್ತೊಂದುಕಡೆ ತನ್ನ ಪ್ರತಿನಿಧಿಯಾದ ಭಗವಂತನ ಮೂಲಕ ಅಧರ್ಮಗಳನ್ನು ಅಡಗಿಸುವ ಕಾರ್ಯವನ್ನು ಮಾಡುತ್ತಿದ್ದಾನೆ. ಆದರೆ ನಾವು ಅಲ್ಲಿಯವರೆಗು ನೋಡಬಾರದು. ನಡೆಯುತ್ತಿರುವುದನ್ನು ನೋಡುತ್ತಾ **'ಜ್ಞಾನ ತಿಳಿದುಕೊಂಡು ಜನ್ಮದಿಂದ ಹೊರಬೀಳಬೇಕು. ಅಲ್ಲಿಯವರೆಗೇ ನಮ್ಮ ಕರ್ತವ್ಯ.** ಆ ಪ್ರಯತ್ನದಲ್ಲಿಯೇ ನಾವು ಜ್ಞಾನದ ಮೂಲಕ ದೇವರನ್ನು ತಿಳಿಯುವುದಕ್ಕೆ ಪ್ರಯತ್ನಿಸಬೇಕು. ದೇವರು ಭೂಮಿಮೇಲೆ ಹೊಸದಾಗಿ ಹುಟ್ಟಿದ **ಮತ** ಎನ್ನುವ ಅಧರ್ಮವನ್ನು ಮೊದಲೇ ಗುರುತಿಸಿ ಅದು ಹುಟ್ಟದ ಮುಂಚೆಯೇ ಅದನ್ನು ಕುರಿತು ಯೇಸು ಯೋಹಾನ್ ಸುವಾರ್ತೆ 16ನೇ ಅಧ್ಯಾಯದಲ್ಲಿ 12, 13, 14, 15 ವಾಕ್ಯಗಳಲ್ಲಿ ಹೇಳಿದಂತೆ ಇದೆ. ಆಗ ಅದಕ್ಕೆ ಪರಿಹಾರವಾಗಿ ಪರಿಶುದ್ಧಾತ್ಮನೇ ಆದರಣಕರ್ತನಾಗಿ ಬರುತ್ತಾನೆಂದು ಹೇಳಿದ್ದಾರೆ.

**ಪ್ರಶ್ನೆ :– ದೇವರು ಆದರಣಕರ್ತನಾಗಿ ಬಂದರೂ ಹೊಸಜ್ಞಾನವನ್ನು ಹೇಳುವುದಿಲ್ಲ. ನಾವು ಹೇಳಿರುವವುಗಳಲ್ಲಿಯೆ ಹೇಳುತ್ತಾನೆ ಎಂದು ಯೇಸು ಹೇಳಿದ್ದಾನೆ ಅಲ್ಲವೆ! ಇರುವ ಜ್ಞಾನ ಹೇಗೊ ಇದೆ. ಅದು ಇರುವಂತೆ 'ಮತ' ಎನ್ನುವ ಅಧರ್ಮವು ವೃದ್ಧಿಯಾಗಿದೆ ಅಲ್ಲವೆ! ಹೊಸಜ್ಞಾನವನ್ನು ಹೇಳದಂತೆ ಹಳೆ ಜ್ಞಾನದೊಂದಿಗೆಯೇ ಹೊಸದಾಗಿ ಬಂದಿರುವ 5ನೇ ಅಧರ್ಮವನ್ನು ಇಲ್ಲದಂತೆ ಮಾಡುವುದಕ್ಕೆ**

**ಆದರಣಕರ್ತನಿಗೆ ಸಾಧ್ಯವಾಗುತ್ತದಾ? ಆದರಣಕರ್ತ ಬಂದರೂ ಸಾಧಾರಣ ಮನುಷ್ಯನಂತೆ ಬರಬೇಕಾಗಿದ್ದೇ ಅಲ್ಲವೆ! ಮೂರು ಗ್ರಂಥಗಳ ಜ್ಞಾನವಿದ್ದಾಗಲೇ ಹುಟ್ಟಿಬಂದಿರುವ, ಎಲ್ಲದಕ್ಕಿಂತ ಬಲವಾದ, ಎಲ್ಲಾಕಡೆ ವ್ಯಾಪಿಸಿಕೊಂಡಿರುವ ಮತ ಆದರಣಕರ್ತನಿಂದ ಅಡಗಿ ಹೋಗುತ್ತದೆನ್ನುತ್ತೀಯಾ? ಮೊದಲು ಬಂದ ಪ್ರವಕ್ತರೆಲ್ಲರೂ ದೊಡ್ಡವರೇ ಆದರೂ ಅವರ ಬೋಧನೆಗಳನ್ನು ಆಧಾರ ಮಾಡಿ ಕೊಂಡು ಖುರ್‌ಆನ್‌ನಲ್ಲಿ (9–5) ರಲ್ಲಿ ಹೇಳಿದಂತೆ ಮತವು ಅಭಿವೃದ್ಧಿಯಾಗಿದೆ. ಈಗ ಆದರಣಕರ್ತ ಬಂದರೆ ಮತವನ್ನು ಅಡಗಿಸಿಹಾಕುವುದು ಸಾಧ್ಯವಾಗುತ್ತದಾ? ಎಂದು ಅನುಮಾನವಿದೆ. ಈಗ ಈ ಪ್ರಶ್ನೆಗೆ ಉತ್ತರ ಹೇಳುವುದಕ್ಕೆ ನಿಮಗೆ ಸ್ವಲ್ಪ ಕಷ್ಟವಾಗಿರುತ್ತದೆ. ಆದರೂ ನಮಗಾಗಿ ಉತ್ತರ ಹೇಳಿರೆಂದು ಕೋರುತ್ತಿದ್ದೇವೆ.?**

**ಉತ್ತರ :–** ಮೂರು ಗ್ರಂಥಗಳ ಜ್ಞಾನ ಇರುವಾಗಲೇ ಮೂರು ಯುಗಗಳಿಂದ ಇಲ್ಲದ ಬಲವಾದ ಅಧರ್ಮವು ಹುಟ್ಟಿಬಂದಿದೆಯೆಂದು ಎಲ್ಲರಿಗೂ ತಿಳಿಯುವಂತೆ ಮತವು ಕಾಣಿಸುತ್ತಿದೆ. ನೀವು ಕೇಳದಿದ್ದರೂ ಕೆಲವರಿಗೆ ಮತ ಅಧರ್ಮವೇನಾ? ಎನ್ನುವ ಪ್ರಶ್ನೆ ಕೂಡಾ ಇದೆ. ಪ್ರಥಮ ದೈವಗ್ರಂಥದಲ್ಲಿ ದೇವರನ್ನು ತಿಳಿಯುವ ಧರ್ಮಗಳು ಮೂರು ಎಂದು, ದೇವರನ್ನು ಸ್ವಲ್ಪವಾದರೂ ತಿಳಿಯಲಾಗದ ಆರಾಧನೆಗಳ ರೂಪದಲ್ಲಿರುವ ಯಜ್ಞ, ದಾನ, ವೇದಪಠನ, ತಪಸ್ಸು ಮೊದಲಾದ ನಾಲ್ಕು ಅಧರ್ಮಗಳು ಗತ ಮೂರು ಯುಗಗಳಿಂದ ಇವೆಯೆಂದು ಹೇಳಿ ಕೊಂಡಿದ್ದೇವೆ. ಇದನ್ನನುಸರಿಸಿ ದೇವರನ್ನು ತಿಳಿಯುವ **ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗ** ಮೂರು ಮುಖ್ಯವಾದ ಧರ್ಮಗಳಾಗಿದ್ದು, **ಯಜ್ಞ, ದಾನ, ವೇದ, ತಪಸ್ಸು** ಎನ್ನುವವು ನಾಲ್ಕು ಅಧರ್ಮಗಳೆಂದು ತಿಳಿದುಹೋಗಿವೆ. ಇದನ್ನನುಸರಿಸಿ ದೇವರನ್ನು ತಿಳಿಯದಂತೆ ಪಕ್ಕದ ದಾರಿ ಹಿಡಿಸಿ ಅದೇ ಸರಿಯಾದ ಪದ್ಧತಿಯಾಗಿರುತ್ತದೆಂದು ತಿಳಿಸಿರುವುದು ಅಧರ್ಮ. ಮತವು ಹೊಸದಾಗಿ ಹುಟ್ಟಿದರೂ, ಎಲ್ಲರನ್ನು ತನ್ನ ವಶ ಮಾಡಿಕೊಂಡು ಗ್ರಂಥಜ್ಞಾನ ಪ್ರಕಾರವೇ ನಡೆಯುವಂತೆ ತೋರಿಸುತ್ತಾ ತನ್ನದು ಧರ್ಮವೇ ಎನ್ನುವಂತೆ ಮನುಷ್ಯನನ್ನು ಭ್ರಮಿಸುವಂತೆ ಮಾಡುತ್ತಿದೆ.

ಮೂರು ದೈವಗ್ರಂಥಗಳಲ್ಲಿ ಹೇಳಿರುವುದು ನಿಜವಾದ ಜ್ಞಾನವೆಂದು ಮಾಯೆಯಿಂದ ಹುಟ್ಟಿದ ಅಧರ್ಮಕ್ಕೆ ತಿಳಿದಿದೆ. ದೇವರು ಹೇಳಿದ ಜ್ಞಾನ ಮೂರು ಕಾಲಗಳಲ್ಲಿ, ಮೂವರು ಪ್ರವಕ್ತರಿಂದ ಹೇಳಲ್ಪಟ್ಟು ಮೂರು ಹೆಸರುಗಳ ಗ್ರಂಥಗಳಾಗಿ ಇರುವುದರಿಂದ ಮೂರು ಪ್ರಾಂತಗಳಿಂದ ಪ್ರಪಂಚವೆಲ್ಲಾ ಜ್ಞಾನ ವ್ಯಾಪಿಸಬೇಕೆಂದು, ಎಲ್ಲಾ ವರ್ಗದವರು ನೋಡುವುದಕ್ಕೆ, ಎಲ್ಲಾ ಭಾಷೆಯವರು ತಿಳಿಯುವುದಕ್ಕೆ ಮೂರು ಪ್ರಾಂತಗಳಲ್ಲಿ, ಮೂವರು ಪ್ರವಕ್ತರಿಂದ ಜ್ಞಾನವು ಹೇಳಲ್ಪಟ್ಟಿದೆ. ಆದರೇ **ಮತ** ಎನ್ನುವ ಅಧರ್ಮಕ್ಕೆ ಅದೇ ಅನುಕೂಲವಾಗಿ ಬದಲಾಗಿದೆ. ಪ್ರಪಂಚದಲ್ಲಿನ ಪ್ರಜೆಗಳನ್ನು ಮೂರು ಭಾಗಗಳಾಗಿ ಸೀಳಿಸಿ ಭಗವದ್ಗೀತೆ ಹಿಂದೂಗಳದ್ದೇ ಎಂದು, ಬೈಬಲ್ ಕ್ರೈಸ್ಥರದ್ದೆಂದು, ಖುರ್‌ಆನ್ ಗ್ರಂಥ ಮುಸ್ಲಿಮ್‌ರದ್ದೆಂದು ನಂಬಿಸಿ, ಮೂರು ಗ್ರಂಥಗಳನ್ನು ಆಧಾರ ಮಾಡಿಕೊಂಡು ಮತವು ವೇಗವಾಗಿ ಪ್ರಜೆಗಳಲ್ಲಿ ಹರಡಿಹೋಗಿದೆ.

ಸೃಷ್ಠಿಕರ್ತನಾದ ದೇವರು ಕಳಿಸಿದ ತನ್ನ ಪ್ರತಿನಿಧಿಗಳಿಂದ ಮಾಯೆ ಬಲದಿಂದ ಅಭಿವೃದ್ಧಿ ಹೊಂದುತ್ತಿರುವ ಅಧರ್ಮಗಳು ನಶಿಸಿಹೋಗು ವಂತೆ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಬೋಧಿಸಿದ್ದಾನೆ. ದೇವರೇ ಪ್ರತಿನಿಧಿ ಎನ್ನುವ ಹೆಸರಿನಿಂದ ಶರೀರ ಧರಿಸಿ ಬಂದು ಜ್ಞಾನ ಹೇಳುವುದರಿಂದ ಎರಡು ದೈವಗ್ರಂಥಗಳು ಭಗವದ್ಗೀತೆ, ಬೈಬಲ್ ತಯಾರಾಗಿವೆ. ದೇವರ ಪರಿಪಾಲನೆಯಲ್ಲಿ ಕೆಲಸ ಮಾಡುವ ಜಿಬ್ರಯೇಲ್ ತಾನು ಮೊದಲು ಕೇಳಿಸಿಕೊಂಡ ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳಿದಾಗ ಅದು ಖುರ್‌ಆನ್ ಗ್ರಂಥವಾಗಿದೆ. ಮೂರು ಗ್ರಂಥಗಳಲ್ಲಿಯೂ ಒಂದೇ ದೈವಜ್ಞಾನವೇ ಇರುವುದರಿಂದ ಅದು ಮೊದಲಿನಿಂದಿರುವ ನಾಲ್ಕು ಅಧರ್ಮಗಳನ್ನು ಅಭಿವೃದ್ಧಿಯಾಗದಂತೆ ಎಲ್ಲಿಯದಲ್ಲೇ ಮೇಲಕ್ಕೆ ಬರದಂತೆ ಮನುಷ್ಯರಲ್ಲಿ ಸೇರದಂತೆ ಮಾಡಿವೆ. ಉದಾಹರಣೆಯಾಗಿ ಹೇಳಿದರೆ ದೇವರ ಜ್ಞಾನ ಬಲವಾದ ಸಿಂಹವಾಗಿದ್ದು ನಾಲ್ಕು ಅಧರ್ಮಗಳು ನಾಲ್ಕು ಜಿಂಕೆಗಳಾಗಿದ್ದವು. ಸಿಂಹದ ಮುಂದೆ ಜಿಂಕೆಗಳ ಬಲಕಡಿಮೆಯೆನ್ನುವಂತೆ ಅಧರ್ಮಗಳು ಅಡಗಿ ಹೋಗುತ್ತಿದ್ದವು. ಭಗವದ್ಗೀತೆ

ಯಲ್ಲಿ ಅದೇ ವಿಷಯವನ್ನೇ ಹೇಳಿದ್ದಾರೆ. ಧರ್ಮಗಳನ್ನು ಬೋಧಿಸಿ ಅಧರ್ಮಗಳನ್ನು ಇಲ್ಲದಂತೆ ಮಾಡುತ್ತೇವೆ ಎಂದಿದ್ದಾರೆ. ಕೃಷ್ಣನು ಮತ್ತು ಯೇಸು ಎರಡು ಅವತಾರಗಳಲ್ಲಿಯೂ ಅದೇ ನಡೆದಿದೆ. ಮೂರನೆಯದು ಅವತಾರ ಅಲ್ಲದಿರುವುದರಿಂದ ಮೂರನೇ ಸಲ ಅಧರ್ಮಗಳಲ್ಲಿ ಮತ ಮತ್ತು ಸಾಂಪ್ರದಾಯ ಎನ್ನುವ ಹೊಸ ಅಧರ್ಮಗಳು ತಯಾರಾಗಿವೆ. ಮೊದಲು ದೇವರ ಬೋಧನೆಗಳು ಸಿಂಹವಾಗಿ ಇರುವಾಗ ನಾಲ್ಕು ಅಧರ್ಮಗಳು ಬೆಳವಣಿಗೆಯಾಗದೆ ಕ್ಷೀಣಿಸುತ್ತಿದ್ದವು. ನಾಲ್ಕು ಅಧರ್ಮಗಳಿದ್ದರೂ ಅವುಗಳಿಗೆ ಮರಿಗಳು ಹುಟ್ಟುವವು ಅಲ್ಲ. ಅವುಗಳ ಸಂಖ್ಯೆ ಅಷ್ಟೇ ಇದ್ದರೂ ಪ್ರಜೆಗಳಲ್ಲಿ ಕೆಲವರಿಗೆ ಮಾತ್ರವೇ ಅವು ಪರಿಚಯವಾಗಿ ಇವೆ. ನಾಲ್ಕು ಅಧರ್ಮಗಳಲ್ಲಿ ಕೆಲವರಿಗೆ ತಿಳಿದರೂ ಒಂದು ಎರಡು ಮಾತ್ರ ತಿಳಿದಿರುತ್ತಿದ್ದವು. ನಾಲ್ಕು ಬ್ರಾಹ್ಮಣರಿಗೆ ಮಾತ್ರ ತಿಳಿದಿರುತ್ತಿದ್ದವು. ಆ ನಾಲ್ಕು ಅಧರ್ಮಗಳನ್ನು ಬ್ರಾಹ್ಮಣರು ಚೆನ್ನಾಗಿ ಆಚರಿಸುತ್ತಿದ್ದರು. ನಾಲ್ಕರಲ್ಲಿ ಯಜ್ಞಗಳು, ವೇದಗಳು ಎರಡು ಹೆಚ್ಚಾಗಿ ಅವರ ಹತ್ತಿರವೇ ಇದ್ದವು. ಮೂರನೆಯದು ದಾನ ಕೂಡಾ ಇರುತ್ತಿತ್ತು. ತಪಸ್ಸು ಕೆಲವರಲ್ಲಿ ಇತ್ತು, ಕೆಲವರಲ್ಲಿ ಇರುತ್ತಿರಲಿಲ್ಲ. ಯಾವುದು ಏನಾದರೂ ದೇವರ ಜ್ಞಾನ ತಿಳಿದವರಿರುವುದರಿಂದ ಅಧರ್ಮಗಳು ಪೂರ್ತಿ ಸ್ಥಾಯಿಯಲ್ಲಿ ವೃದ್ಧಿಹೊಂದದೆ ಹೋಗಿವೆ. ತ್ರೇತಾಯುಗದಲ್ಲಿ ರಾವಣಬ್ರಹ್ಮ ಅಧರ್ಮವಾದ ಯಜ್ಞಗಳನ್ನು ಮಾಡಿಸುವವನು ಅಲ್ಲವೆನ್ನುವುದು ನಮಗೆ ತಿಳಿದ ವಿಷಯವೇ. ಆದರೇ ಜ್ಞಾನ ತಿಳಿಯದವರು, ಅಧರ್ಮಗಳನ್ನು ಆಚರಿಸುವವರು ರಾವಣ ಬ್ರಹ್ಮನನ್ನು ಅಜ್ಞಾನಿ, ಅಧರ್ಮ ಇರುವವನು ಎಂದು ಹೇಳಿದ್ದಾರೆ.

ತ್ರೈತಾಯುಗದಲ್ಲಿ ನಿಜವಾದ ಜ್ಞಾನಿ, ಜ್ಞಾನಿಗಳಲ್ಲಿ ಮೊದಲನೆಯವನು, ರಾವಣ ಬ್ರಹ್ಮಯೆಂದು ಹೆಸರುಗಳಿಸಿದವನು, ತ್ರಿಕಾಲ ಜ್ಞಾನಿಯಾದ ಬ್ರಹ್ಮವಿದ್ಯೆಯಲ್ಲಿ ಅಧಿಕನಾಗಿ ರಾವಣಬ್ರಹ್ಮ ಇರುತ್ತಿದ್ದನು. ಆದರೂ ಆತನನ್ನು ಅಧರ್ಮ ಇರುವವನಾಗಿ ವರ್ಣಿಸುವುದು ಪೂರ್ತಿ ತಪ್ಪು. ಅಧರ್ಮಗಳನ್ನು ಆಚರಿಸುವವರೇ ರಾವಣಬ್ರಹ್ಮನನ್ನು ಧರ್ಮಹೀನನು ಎಂದಿದ್ದಾರೆ. ತ್ರೈತಾ

ಯುಗದಲ್ಲಿ ಧರ್ಮಗಳ ಸಿಂಹ ಅಧರ್ಮಗಳೆನ್ನುವ ಜಿಂಕೆಗಳು ಕಾಣಿಸಿದರೆ ಓಡಿಸುತ್ತಿತ್ತು. ಅದೇ ರಾವಣಬ್ರಹ್ಮನ ಕಾಲದಲ್ಲಿ ಯಜ್ಞಗಳನ್ನು ಮಾಡುವವರು ಕಾಣಿಸಿದರೆ ರಾವಣಬ್ರಹ್ಮ ಪಾಲನೆಯಲ್ಲಿರುವವರು ಓಡಿಸುತ್ತಿದ್ದರು. ಆಗ ಅವರು ಮಾಡುತ್ತಿರುವ ಯಜ್ಞಗಳನ್ನು ಬಿಟ್ಟು ಓಡಿಹೋಗುತ್ತಿದ್ದರು. ಅದೆಲ್ಲವೂ ನೋಡಿದರೆ ಧರ್ಮಗಳು ಸಿಂಹದಂತೆ ತಿರುಗಿದರೆ ಅಧರ್ಮಗಳು ಜಿಂಕೆಗಳಂತೆ ಭಯಪಡುತ್ತಾ ಮರೆಯಲ್ಲಿ ಇರುತ್ತಿದ್ದವು. ಮೂರು ಯುಗಗಳು ಕಳೆದ ನಂತರ ಕಲಿಯುಗದಲ್ಲಿ ಹೊಸದಾಗಿ 'ಮತ' ಎನ್ನುವ ವಿಚಿತ್ರ ಪ್ರಾಣಿ ಹುಟ್ಟಿ ಸಿಂಹಕ್ಕೆ ಅರ್ಥ ಇಲ್ಲದಂತೆ ಮಾಡಿದೆ.

ಮೂರು ಗ್ರಂಥಗಳ ಜ್ಞಾನವಾಗಿರುವುದನ್ನು ಮತ ಎನ್ನುವ ಅಧರ್ಮ ಮೂರು ತುಂಡುಗಳು ಮಾಡಿದೆ. ಅಂದರೇ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಾಗಿರುವ ಸಿಂಹದಂತಹ ಜ್ಞಾನವನ್ನು, ಧರ್ಮಗಳನ್ನು ಮೂರು ತುಂಡುಗಳಾಗಿ ಮಾಡಿ ಒಂದೊಂದು ತುಂಡು ಒಂದೊಂದು ಮತಕ್ಕೆ ಎಂದು ಹಂಚಿದೆ. ಮನುಷ್ಯರಲ್ಲಿ ಮೂರು ಮತಗಳಾಗಿರುವುದು ಅಧರ್ಮವಾದ ತಾನೇ (ಮತವೇ) ಆದ್ದರಿಂದ 'ದೇವರ ಜ್ಞಾನ' ಎನ್ನುವ ಸಿಂಹವನ್ನು ಮೊದಲು ತಲೆ ಭಾಗವನ್ನು ಹಿಂದೂಗಳಿಗೆ ಹಂಚಿದೆ. (ಚೆನ್ನಾಗಿ ಅರ್ಥವಾಗುವುದಕ್ಕೆ ಉದಾಹರಣೆ ಯಾಗಿ ಹೇಳುವುದನ್ನು ಅರ್ಥ ಮಾಡಿಕೊಳ್ಳಿ.) ಭಗವದ್ಗೀತೆಯನ್ನು ಸಿಂಹದ ತಲೆಭಾಗವಾಗಿ, ಎರಡನೇ ದೈವಗ್ರಂಥವಾಗಿ ಬಂದಿರುವ ಬೈಬಲ್‌ನನ್ನು ಸಿಂಹದ ಕಾಲಿನ ಭಾಗವಾಗಿ, ಕೊನೆಯಲ್ಲಿ ಬಂದಿರುವ ಖುರ್‌ಆನ್ ಗ್ರಂಥವನ್ನು ಸಿಂಹದ ಸೊಂಟ ಭಾಗವಾಗಿ ಮೂರು ತುಂಡುಗಳು ಮಾಡಿ ಹಂಚಿದೆ. **ಹಿಂದೂಗಳಿಗೆ ಸಿಂಹದ ತಲೆ, ಕ್ರೈಸ್ಥರಿಗೆ ಸಿಂಹದ ಕಾಲು, ಮುಸ್ಲಿಮ್‌ರಿಗೆ ಸೊಂಟದ ಭಾಗವನ್ನು ಹಂಚಿದೆ**. ಸಿಂಹ ಮೂರು ತುಂಡುಗಳಾದರೂ ಪುನಃ ಅಂಟಿಕೊಂಡು ಸಜೀವವಾಗಬಲ್ಲದು. ಧರ್ಮಗಳು ಸಿಂಹದ ರೂಪವಾಗಿ ಹೋಲಿಸಿದ್ದೇವೆ. ಧರ್ಮಗಳಿಗೆ ಗ್ಲಾನಿ ಏರ್ಪಡಬಹುದು ಆದರೆ ಅವು ನಾಶವಾಗುವವು ಅಲ್ಲ. ಶಾಶ್ವತವಾಗಿ ಇರುವವೇ ಧರ್ಮಗಳೆಂದು ಹೇಳಿಕೊಂಡಿದ್ದೇವೆ. ಆದ್ದರಿಂದ

ಧರ್ಮಗಳಾಗಿ ಹೋಲಿಸಲ್ಪಟ್ಟ ಸಿಂಹ ತುಂಡುಗಳಾದರೂ ಸಜೀವವಾಗಿಯೇ ಇರುತ್ತದೆ. ಪುನಃ ಅಂಟಿಕೊಂಡು ಪೂರ್ತಿ ಬಲದಿಂದ **ಮತ** ಎನ್ನುವ ಅಧರ್ಮದ ಮೇಲೆ ಕೂಡಾ ದಾಳಿ ಮಾಡಬಲ್ಲದು. ಆದರೇ ಮತ ಎನ್ನುವ ಅಧರ್ಮ ಸಿಂಹದ ಭಾಗಗಳನ್ನು ತಲೆಕೆಳಗಾಗಿ ಮಾಡಿಟ್ಟಿರುವುದರಿಂದ ಅದು ಬೇಗನೆ ಸಜೀವ ಆಗಲಿಲ್ಲ. ಆದರಣಕರ್ತ ಬಂದು ಮುಂದೆ ಹಿಂದೆ ಇರುವ ಭಾಗಗಳನ್ನು ವರಸೆಕ್ರಮದಲ್ಲಿ ಜೋಡಿಸಿ ಸಿಂಹವನ್ನು ಸಜೀವ ಮಾಡಿ, ಮತವನ್ನು ಹೊರದೂಡುವನು.

ಸಿಂಹದ ತುಂಡುಗಳು ಅಪಸವ್ಯವಾಗಿ ಇವೆ ನೋಡಿರಿ. ಹಾಗೆ ಇರುವಂತೆ ಮತ ಮಾಡಿಟ್ಟಿದೆ. ಹಿಂದೂಗಳಿಗೆ ಸಿಂಹದ ತಲೆಭಾಗವನ್ನು ಕೊಟ್ಟು, ಮಧ್ಯದಲ್ಲಿನ ಕ್ರೈಸ್ಥರಿಗೆ ಕಾಲುಗಳನ್ನು ಕೊಟ್ಟಿದೆ. ಮುಂಡವನ್ನು ಮುಸ್ಲಿಮ್‌ರಿಗೆ ಕೊಟ್ಟಿದೆ. ಮಧ್ಯದಲ್ಲಿ ಮುಂಡ ಇದ್ದರೆ ಮೇಲೆ ತಲೆ,  ಕೆಳಗೆ ಕಾಲು ಸುಲಭವಾಗಿ ಅಂಟಿಕೊಂಡು ಸಿಂಹ ಪೂರ್ತಿ ಸಜೀವವಾಗುತ್ತಿತ್ತು.



ಮತ ಎನ್ನುವ ವಿಚಿತ್ರ ಪ್ರಾಣಿ ಸಿಂಹವನ್ನು ಮೂರು ತುಂಡುಗಳು ಮಾಡಿ ತಲೆ ಭಾಗವನ್ನು ಭಗವದ್ಗೀತೆಯಾಗಿ ಹಿಂದೂಗಳ ಗ್ರಂಥವಾಗಿ ತೋರಿಸಿ ಇದು ಹಿಂದೂಗಳದೆಂದು ಹೇಳಿದೆ. ಅದರಿಂದ ಜ್ಞಾನ ತಿಳಿಯದ ಹಿಂದೂಗಳು ಮೂರು ಮತಗಳ ಜ್ಞಾನ ಒಂದೇಯೆಂದು ಗ್ರಹಿಸಲಾರದೆ ನಮ್ಮದು ತಲೆ ಭಾಗವೇ ಎನ್ನುವಂತೆ, ನಮ್ಮದು ಜ್ಞಾನ ಬೇರೆಯೆಂದು ಅನ್ನುತ್ತಿದ್ದಾರೆ. ಎರಡನೆ

ಗ್ರಂಥದಲ್ಲಿ ಬಂದಿರುವ ಜ್ಞಾನ ಯಾವುದಕ್ಕೆ ಅನುಬಂಧವಾಗಿ ಇದೆಯೆಂದು ತಿಳಿಯದಂತೆ ತಲೆ ಕೆಳಗೇ ಸಿಂಹ ಕಾಲುಗಳನ್ನಿಡುವುದರಿಂದ ಎರಡು ಒಂದಕ್ಕೊಂದು ಅನುಸಂಧಾನ ಆಗದಿರುವುದರಿಂದ ಭಗವದ್ಗೀತೆ ಬೇರೆ, ಬೈಬಲ್ ಬೇರೆ ಎನ್ನುವ ಭಾವನೆ ಬಂದಿದೆ. ಕ್ರೈಸ್ಥರಿಗೆ ಸಿಂಹದ ಕಾಲುಗಳನ್ನು ಕೊಡುವುದಾಗಿದೆ.



ಮೂರು ಗ್ರಂಥಗಳ ಜ್ಞಾನ ಭಾಷರೀತ್ಯಾ, ಭಾವರೀತ್ಯಾ ಒಂದಕ್ಕೊಂದು ಹೊಂದಾಣಿಕೆ ಇಲ್ಲದೆ ಹೋಗಿದೆ. ಸಿಂಹದ ಶರೀರ ಭಾಗಗಳು ಯಾವ ವಿಧವಾಗಿ ಮೇಲಿನವು ಕೆಳಗಿನವು ಹೊಂದಿಕೆ ಇಲ್ಲದೆ ಅನುಸಂಧಾನ ಆಗದಂತೆ ಇವೆಯೋ ಹಾಗೇ ಭಗವದ್ಗೀತೆ ಜ್ಞಾನದಿಂದ ಬೈಬಲ್ ಅನುಸಂಧಾನ ಆಗದಂತೆ ಕಾಣಿಸಿದಾಗ, ಬೈಬಲ್‌ನೊಂದಿಗೆ ಖುರ್‌ಆನ್ ಅನುಸಂಧಾನ ಇಲ್ಲದಂತೆ ಮನುಷ್ಯರಿಗೆ ಕಾಣಿಸುತ್ತಿದೆ. ಮನುಷ್ಯರಲ್ಲಿನ ಮತ ಹಾಗೆ ಅರ್ಥವಾಗದಂತೆ ಮಾಡಿದೆ. ಮೊದಲು



ಗ್ರಂಥದಲ್ಲಿನ ಜ್ಞಾನಕ್ಕೆ ಖುರ್‌ಆನ್ ಗ್ರಂಥ ಅನುಸಂಧಾನ ಆಗಬಹುದು ಆದರೆ ಬೈಬಲ್ ಬೇರೆಯಾಗಿ ಕಾಣಿಸುತ್ತಿದೆ. ಖುರ್‌ಆನ್ ಗ್ರಂಥದ ನಂತರ ಬೈಬಲ್ ಓದಿದರೆ ಎರಡರ ಭಾವನೆ ಒಂದೇಯೆಂದು ತಿಳಿಯುತ್ತದೆ. ಹಾಗೇ ಖುರ್‌ಆನ್‌ಗಿಂತ ಮೊದಲು ಭಗವದ್ಗೀತೆ ಓದಿ, ನಂತರ ಖುರ್‌ಆನ್ ಓದಿದರೆ ಅದಕ್ಕೆ ಇದು ಅನುಸಂಧಾನವಾಗಿ ಕಾಣಿಸುತ್ತದೆ. ಮೂರು ಗ್ರಂಥಗಳು ಓದಿದವನಿಗೆ ಮುಂದೆ ಹಿಂದೆ ಅರ್ಥ ಮಾಡಿಕೊಂಡರೆ ಮೂರು ಗ್ರಂಥಗಳು ಅನುಸಂಧಾನವಾಗಿ ಹೋಗುತ್ತವೆ. ಆದರೇ ಮೊದಲು ಯಾವ ಮತದವನಾದರೂ ಎರಡನೆ ಮತವೊಂದರ ಧ್ಯಾಸವನ್ನು ಮನಸ್ಸಿನೊಳಗೆ ತಂದುಕೊಳ್ಳುವುದಕ್ಕೆ ಕೂಡಾ ಇಷ್ಟವಾಗದ ರೀತಿಯಲ್ಲಿ ಇದ್ದಾನೆ. ನನ್ನ ಮತ ಬೇರೆ, ನನ್ನ ಗ್ರಂಥ ಬೇರೆ, ನನ್ನ ದೇವರು ಬೇರೆ ಎನ್ನುವ ಭಾವನೆಯಲ್ಲಿ ಮನುಷ್ಯರೆಲ್ಲರೂ ಇರುವುದರಿಂದ ಮೂರು ಗ್ರಂಥಗಳನ್ನು ಓದುವವನು ಯಾರೂ ಇಲ್ಲವೆಂದು ಹೇಳಬಹುದು. ಸಿಂಹವೊಂದರ ಮೂರು ಭಾಗಗಳನ್ನು ಸೇರಿಸಿ ನೋಡದೆಹೋದರೆ ಸಿಂಹ ಕಾಣಿಸುವುದಿಲ್ಲ. ಮೂರು ಭಾಗಗಳನ್ನು ಕ್ರಮವಾಗಿ ಸೇರಿಸಿನೋಡಿದರೆ ಆಗ ಪೂರ್ತಿ ಸಿಂಹದ ಆಕಾರ ಕಾಣಿಸುತ್ತದೆ. ಹಾಗೇ ಮೂರು ಗ್ರಂಥಗಳನ್ನು ಓದಿದಾಗ ನಿಜವಾದ ಧರ್ಮಗಳು ಸಜೀವವಾಗಿ ಕಾಣಿಸುತ್ತವೆ. ಆಗ ಪುನಃ ಸಿಂಹ ಸಜೀವವಾಗಿ ವಿಚಿತ್ರ ಪ್ರಾಣಿಯಾಗಿ ಬಂದಿರುವ 'ಮತ' ಎನ್ನುವ ಅಧರ್ಮವನ್ನು ಇಲ್ಲದಂತೆ ಮಾಡಬಲ್ಲದು. ಮೂರು ಗ್ರಂಥಗಳನ್ನು ಯಾರಾದರೂ ಓದಬಲ್ಲಿರಾ ಎಂದರೆ ಯಾರಾದರೂ ಓದಿದರೂ ತನ್ನ ಗ್ರಂಥ ಶ್ರೇಷ್ಠವಾದುದೆನ್ನುವ ಭಾವನೆ ಹೊಂದಿ ಇತರೆ ಗ್ರಂಥಗಳಲ್ಲಿ ತಪ್ಪುಗಳನ್ನು ಹುಡುಕುವುದಕ್ಕೆ ಓದುತ್ತಾನೆ ಹೊರತು, ಉಳಿದ ಗ್ರಂಥಗಳಲ್ಲಿ ತನ್ನ ಗ್ರಂಥದಲ್ಲಿನ ಜ್ಞಾನಕ್ಕೆ ಅನುಸಂಧಾನವಾದ ಜ್ಞಾನವಿರುತ್ತದೆನ್ನುವ ಉದ್ದೇಶದಿಂದ ಓದುವುದಿಲ್ಲ. ಹಾಗೆ ಮೊದಲೇ ಅದರಲ್ಲಿ ತಪ್ಪುಗಳಿವೆಯೆನ್ನುವ ಉದ್ದೇಶದಿಂದ ಓದಿದರೆ ಇತರೆ ಗ್ರಂಥಗಳಲ್ಲಿನ ಶ್ರೇಷ್ಠವಾದ ಜ್ಞಾನ ತಿಳಿಯುವುದಿಲ್ಲ. ಅವು ನಿನ್ನ ಗ್ರಂಥದೊಂದಿಗೆ ಅನುಸಂಧಾನವಾದ ಜ್ಞಾನ ಇದೆಯೆಂದು ತಿಳಿದಿಲ್ಲ. ಮೂರು ದೈವ ಗ್ರಂಥಗಳನ್ನು ಓದಿದರೆ ಅದರಲ್ಲಿ ಪೂರ್ತಿ ಸಿಂಹದ ರೂಪ ಕಾಣಿಸುತ್ತದೆ. ತುಂಡುಗಳು ಮಾಡಲಾದ ಮೂರು

ಭಾಗಗಳು ಸವ್ಯವಾಗಿ ಒಂದುಕಡೆ ಸೇರಿದರೆ ಅದು ಸಜೀವ ಸಿಂಹವಾದಂತೆ ಮೂರು ಗ್ರಂಥಗಳನ್ನು ಓದಿದರೆ ಅದು ಅಧರ್ಮಗಳನ್ನು ಬೇಟೆಯಾಡುವ ಶಕ್ತಿ ಇರುವುದಾಗಿ, ಪೂರ್ತಿ ಬಲದಿಂದ ಸಜೀವವಾಗಿ ನಿಲ್ಲುತ್ತದೆ.



ಮೂರು ಗ್ರಂಥಗಳ ಸಮಾಚಾರವನ್ನು ಸಂಪೂರ್ಣವಾಗಿ ತಿಳಿದವನು ಅಧರ್ಮಗಳ ಬಗ್ಗೆ ಸಿಂಹಬಲ ಹೊಂದಿ, ಸಿಂಹದೊಂದಿಗೆ ಸಮಾನವಾಗಿ ಇರುತ್ತಾನೆ. ಅಂತಹವನಿಗೆ ಯಾವ ಅಜ್ಞಾನ ಸೇರುವುದಿಲ್ಲ. ಮತ ಎನ್ನುವುದು ಆಸುಪಾಸಿಗೂ ಕೂಡಾ ಬರುವುದಿಲ್ಲ. ಮೂರು ಮತಗಳನ್ನು ಓದಿದವನು ಧರ್ಮಗಳ ಮೇಲೆ ಇರುತ್ತಾನೆ. ಮೂರು ಗ್ರಂಥಗಳು ಓದಿ ಅವುಗಳ ಸಾರಾಂಶವನ್ನು ತಿಳಿಯದವನು ಒಂದು ಧರ್ಮದ ಮೇಲೆ ಕೂಡಾ ಇರುವುದಿಲ್ಲ. ಅವನು ಅಧರ್ಮಗಳ ಪಾಲಾಗಿಹೋಗುತ್ತಾನೆ. ಅಂತಹವನಲ್ಲಿ ಮತ ಎನ್ನುವ ಅಧರ್ಮ ಪೂರ್ತಿ ಸ್ಥಾಯಿಯಲ್ಲಿರುತ್ತದೆ. ಈ ವಿಷಯವಾಗಿ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಸೂರಾ 5, ಆಯತ್ 68ರಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**(5–68) "ಓ ಗ್ರಂಥ ವಾಹಕರೇ! ನೀವು ತೌರಾತ್, ಇಂಜೀಲು (ಭಗವದ್ಗೀತೆ, ಬೈಬಲ್) ನನ್ನು ಮತ್ತು ನಿಮ್ಮ ಪ್ರಭುವು ನಿಮ್ಮ ಹತ್ತಿರಕ್ಕೆ ಕಳಿಸಿದವನನ್ನು (ಖುರ್‌ಆನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೆ ಇಲ್ಲದಂತೆ."**

ತೌರಾತ್ ಗ್ರಂಥವನ್ನು (ಭಗವದ್ಗೀತೆಯನ್ನು) ಒಂದುಸಲ ಸವಿವರವಾಗಿ ಓದಿದರೆ ಅದರಲ್ಲಿ ಹೇಳಲ್ಪಟ್ಟ ಜ್ಞಾನದ ಪ್ರಕಾರ ಉಳಿದ ದೈವ ಗ್ರಂಥಗಳನ್ನು ಓದಬೇಕೆಂದು ತಿಳಿಯುತ್ತದೆ. ಸಿಂಹದ ತಲೆಯನ್ನು ನೋಡಿದವನು ಉಳಿದ ಅವಯವಗಳಿಗಾಗಿ ಹುಡುಕುತ್ತಾನೆ. ತಲೆಯನ್ನು ನೋಡಿದ ನಂತರ ಅದು ಸಿಂಹ ಎಂದು ಯಾರಾದರೂ ಗುರುತು ಹಿಡಿಯುತ್ತಾರೆ. ನಂತರ ಸಿಂಹದ ಅವಯವಗಳಿಗಾಗಿ ಹುಡುಕುತ್ತಾರೆ. ಒಂದುವೇಳೆ ಬೇರೆ ಪ್ರಾಣಿಯ ಅವಯವಗಳು ದೊರೆತರೂ ಅವು ಸಿಂಹದ ಅವಯವಗಳು ಅಲ್ಲವೆಂದು ಸುಲಭವಾಗಿ ಗುರುತು ಹಿಡಿಯುತ್ತಾರೆ. ಒಂದುಸಲ ಭಗವದ್ಗೀತೆಯನ್ನು ಓದಿದವರು ಉಳಿದ ಯಾವ ಗ್ರಂಥಗಳನ್ನು ಓದಿದರೂ ತೃಪ್ತಿ ಹೊಂದುವುದಿಲ್ಲ. ದೈವ ಗ್ರಂಥಗಳನ್ನು ಓದಿದಾಗಲೇ ಸಂತೋಷವನ್ನು ವ್ಯಕ್ತ ಮಾಡುತ್ತಾರೆ. ಈ ವಿಷಯವನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ ಈ ವಿಧವಾಗಿ ಹೇಳುತ್ತಿದ್ದಾರೆ ನೋಡಿರಿ.

**(62–5) "ತೌರಾತ್ ಗ್ರಂಥದ ಪ್ರಕಾರ ಆಚರಿಸಬೇಕೆಂದು ಆದೇಶಿಸಿದರೂ ಅದಕ್ಕೆ ಅನುಗುಣವಾಗಿ ಆಚರಿಸದವರು ಉಳಿದ ಎಷ್ಟು ಗ್ರಂಥಗಳನ್ನು ಅನುಸರಿಸಿದರೂ ಅಂಥವರನ್ನು ಎಷ್ಟೋ ಗ್ರಂಥಗಳನ್ನು ಬೆನ್ನಿನಮೇಲೆ ಹೋರುವ ಕತ್ತೆಯಂತವರೆಂದು ಉಪಮಾನವಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ಅಲ್ಲಾಹ್ (ದೇವರು) ಸನ್ಮಾರ್ಗ ತೋರಿಸುವುದಿಲ್ಲ."**

ಮೊದಲ ಗ್ರಂಥವನ್ನು (ಭಗವದ್ಗೀತೆಯನ್ನು) ಓದಿದರೆ ಅವರು ಉಳಿದ ಎರಡು ಗ್ರಂಥಗಳಿಗಾಗಿ ಹುಡುಕುತ್ತಾರೆ. ಈ ಕಾಲದಲ್ಲಿ ಹಿಂದೂಗಳಾಗಿ ಹುಟ್ಟಿದವರು ಮಾತ್ರವೇ ಭಗವದ್ಗೀತೆಯನ್ನು ಓದುವುದಕ್ಕೆ ಅವಕಾಶವಿದೆ. ಉಳಿದ ಮತದವರು ಅವರ ಮತಗ್ರಂಥಗಳೆಂದು ಹೇಳುವವುಗಳನ್ನು ಓದುವ ಅವಕಾಶವಿದೆ. ಬಹುಶಃ ಉಳಿದವರು ಭಗವದ್ಗೀತೆಯನ್ನು ಓದುವುದಿಲ್ಲ. ಕ್ರೈಸ್ಥರು ತಮ್ಮ ಗ್ರಂಥಗಳನ್ನು ಹೊರತು ಉಳಿದ ಗ್ರಂಥಗಳನ್ನು ಓದುವುದಿಲ್ಲ. ಒಂದುವೇಳೆ ಬೈಬಲ್ ಓದಿದ ಕ್ರೈಸ್ಥರಿಗೆ ಉಳಿದ ಗ್ರಂಥಗಳನ್ನು ಓದಬೇಕೆನ್ನುವ ಗಮನ ಬರುವುದಿಲ್ಲ. ಅವರು ತಮ್ಮ ಗ್ರಂಥವೇ ಶ್ರೇಷ್ಠವಾದುದೆಂದು ಹೇಳಿಕೊಳ್ಳುವ ವಿಧಾನದಲ್ಲಿಯೇ ಇರುತ್ತಾರೆ. ಅಷ್ಟೇಅಲ್ಲದೆ ಅವರ ಮತವನ್ನು ವ್ಯಾಪ್ತಿ ಮಾಡುವ ಕಾರ್ಯಗಳಲ್ಲಿ ಹೆಚ್ಚು ಶ್ರದ್ಧೆ ತೋರಿಸುತ್ತಿರುತ್ತಾರೆ. ಒಂದುವೇಳೆ ಅವರು ಇತರೆ ಗ್ರಂಥವನ್ನು ಓದಿದರೂ ಅದನ್ನು ಕುರಿತು ಮೊದಲೇ ನಿರ್ಣಯಿಸಿಕೊಂಡವರಾಗಿ ಅದರ ಮೇಲೆ ಕಡಿಮೆ ಗೌರವ ಇರುವವರಾಗಿ ಓದುತ್ತಾರೆ. ಮುಸ್ಲಿಮ್‌ರ ವಿಷಯಕ್ಕೆ ಬಂದರೆ ಈ ದಿನ ಖುರ್‌ಆನ್‌ನನ್ನು ಓದಿದ ಮುಸ್ಲಿಮ್‌ರು ಭಗವದ್ಗೀತೆಯನ್ನು ಓದಲು ಶುರು ಮಾಡುತ್ತಿದ್ದಾರೆ. ಭಗವದ್ಗೀತೆಯಲ್ಲಿ ಏಕೇಶ್ವರೋಪಾಸನೆ ಇದೆಯೆಂದು ವಿಗ್ರಹಾರಾಧನೆಯನ್ನು ಖಂಡಿಸುವುದು ಇದೆಯೆಂದು ತಿಳಿದು ಅವರು ಓದಿ ತಿಳಿದುಕೊಂಡು ಹಿಂದೂಗಳೊಂದಿಗೆ ಮಾತನಾಡಿದಾಗ ನಮ್ಮ ಗ್ರಂಥದಲ್ಲಿ ಹೇಳಿರುವುದೇ ನಿಮ್ಮ ಗ್ರಂಥದಲ್ಲಿಯೂ ಕೂಡಾ ಇದೆಯೆಂದು ಹೇಳಿ, ನಿಮ್ಮ ಮತಕ್ಕಿಂತ ನಮ್ಮ ಮತ ಹೊಸದೆಂದು, ಭಗವದ್ಗೀತೆ ಶ್ರೇಷ್ಠವಾದುದೇ ಆದರೂ ಅದು ದ್ವಾಪರಯುಗದಲ್ಲಿನದು, ಈದಿನ ಕಲಿಯುಗದಲ್ಲಿ ಹುಟ್ಟಿರುವುದು ಮುಸ್ಲಿಮ್ ಮತವೆಂದು ತಮ್ಮ ಮತ ದೊಡ್ಡದೆಂದು, ನವೀನವಾಗಿರುವ ತಮ್ಮ ಮತದಲ್ಲಿ ಸೇರಿರೆಂದು ಹೇಳುತ್ತಿದ್ದಾರೆ. ಅವರು ಮತವ್ಯಾಪ್ತಿಗಾಗಿ ಪ್ರಯತ್ನ ಮಾಡುತ್ತಾ ಹಾಗೆ ಹೇಳುತ್ತಿದ್ದಾರೆ. ಖುರ್‌ಆನ್ ಗ್ರಂಥದಲ್ಲಿ ಹಳೆ ಗ್ರಂಥಗಳ ಜ್ಞಾನವನ್ನು ಬಿಟ್ಟು ಹೊಸ ಗ್ರಂಥಗಳ ಜ್ಞಾನವನ್ನು ಓದಿರೆಂದು ಎಲ್ಲಿಯೂ ಹೇಳಲಿಲ್ಲ. ಖುರ್‌ಆನ್ ಗ್ರಂಥದಲ್ಲಿ ಧರ್ಮಗಳನ್ನು ಬೋಧಿಸಿದ್ದಾರೆ ಆದ್ದರಿಂದ ಧರ್ಮ ಪ್ರಕಾರ ಮೊದಲು ಬಂದಿರುವ ಗ್ರಂಥಗಳಲ್ಲಿ ಕೂಡಾ ಧರ್ಮಗಳಿವೆ

ಅವುಗಳನ್ನು ಓದಿರೆಂದು ಹೇಳಿದ್ದಾರೆ. ಖುರ್‌ಆನ್ ಗ್ರಂಥದಲ್ಲಿ ಮತಪ್ರಚಾರ ಮಾಡಿರೆಂದಾಗಲಿ ಮತವೆನ್ನುವುದನ್ನಾಗಲಿ ಎಲ್ಲಿಯೂ ಹೇಳಲಿಲ್ಲ. ಖುರ್‌ಆನ್ ಗ್ರಂಥ ತನಗಿಂತ ಮೊದಲು ಬಂದಿರುವ ಗ್ರಂಥಗಳನ್ನು ದೊಡ್ಡದಾಗಿ ಹೇಳುತ್ತಾ ಅದರಲ್ಲಿಯೂ ಕೂಡಾ ದೈವಧರ್ಮಗಳಿವೆಯೆಂದು ಹೇಳುತ್ತಿದೆ. ಈ ವಿಷಯವಾಗಿ ಖುರ್‌ಆನ್ ಗ್ರಂಥದಲ್ಲಿ ಸೂರಾ 5, ಆಯತ್ 48ರಲ್ಲಿ ಏನು ಹೇಳಿದ್ದಾರೋ ಒಂದುಸಲ ನೋಡೋಣ.

**(5–48) "ನಾವು ನಿನ್ನ ಕಡೆಗೆ ಈ ಗ್ರಂಥವನ್ನು (ಖುರ್‌ಆನ್) ನನ್ನು ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು (ತೌರಾತ್, ಇಂಜೀಲ) ನ್ನು ಸತ್ಯವೆಂದು ದೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋಇಚ್ಛೆಗಳನ್ನು ಅನುಸರಿಸಬೇಡ."**

ಈ ವಿಧವಾಗಿ ಖುರ್‌ಆನ್ ಗ್ರಂಥದಲ್ಲಿ ಬರೆದಿರುವುದರಿಂದ ಯಾವ ಮುಸ್ಲಿಮ್ ಆದರೂ ಮತವೆನ್ನುವ ಮಾತನ್ನು ಬಿಟ್ಟು ಖುರ್‌ಆನ್ ಗ್ರಂಥದ ಮಾತನ್ನು ಕೇಳಿದಂತಾದರೆ ಗ್ರಂಥದಲ್ಲಿ ಹೇಳಿದಂತೆ ಖುರ್‌ಆನ್ ದೃಢೀಕರಿಸಿದ, ಮೊದಲು ಬಂದಿರುವ ಭಗವದ್ಗೀತೆ, ಬೈಬಲ್ ಗ್ರಂಥವನ್ನು ಓದುತ್ತಾನೆ. ಸತ್ಯಸಮೇತವಾದ ಖುರ್‌ಆನ್ ಗ್ರಂಥವು ಸತ್ಯವನ್ನೇ ಹೇಳಿ ಮೊದಲು ಬಂದ ಎರಡು ಗ್ರಂಥಗಳು ಸತ್ಯವೆಂದು ದೃಢೀಕರಿಸುವುದರಿಂದ ಉಳಿದ ಎರಡು ಗ್ರಂಥಗಳನ್ನು ಗೌರವ ಭಾವನೆಯಿಂದ ಸತ್ಯವೆನ್ನುವ ನಂಬಿಕೆಯಿಂದ ಓದುವುದು ಶುರು ಮಾಡುತ್ತಾನೆ. ಆದರೇ ಈ ದಿನ ಖುರ್‌ಆನ್ ಓದುವ ಮುಸ್ಲಿಮ್‌ರು ಕಡಿಮೆ ಇದ್ದಾರೆ. ಖುರ್‌ಆನ್ ತಮ್ಮ ಗ್ರಂಥವೆಂದು ಹೇಳಿಕೊಂಡರೂ, ಕೆಲವರು ಮಾತ್ರವೇ ಅದನ್ನು ಓದುತ್ತಿದ್ದಾರೆ. ತಮ್ಮ ಗ್ರಂಥವನ್ನು ಓದುವುದರಲ್ಲಿ ಕೂಡಾ ಮತ ನಿಯಮ ಕಾಣಿಸುತ್ತಿದೆ. ಯಾವ ಮುಸ್ಲಿಮ್ ಆದರೂ ಖುರ್‌ಆನ್ ಗ್ರಂಥವನ್ನು ಅರಬ್ಬೀ ಭಾಷೆಯಲ್ಲಿ ಓದಬೇಕೆನ್ನುವ ನಿಯಮ ಇದೆ. ಆ ನಿರ್ಣಯದ

ಪ್ರಕಾರ ಅರಬ್ಬೀ ಭಾಷೆ ಬರದಿದ್ದರೂ ಅವರು ಓದುವುದಕ್ಕೆ ಭಾಷೆಯ ಅಕ್ಷರಗಳನ್ನು ಕಲಿತು ಓದುತ್ತಿರುತ್ತಾರೆ. ಭಾಷೆಯಲ್ಲಿನ ಭಾವವು ತಿಳಿಯದಿದ್ದರೂ ಅರಬ್ಬೀ ಭಾಷೆಯಲ್ಲಿಯೇ ಓದಬೇಕೆನ್ನುವ ನಿಯಮವನ್ನು ಮತ ನಿಯಮವಾಗಿ ಪಾಟಿಸಿ ಅರಬ್ಬೀ ಭಾಷೆಯಲ್ಲಿಯೇ ಓದುತ್ತಾರೆ. ಪಕ್ಕದಲ್ಲಿಯೇ ಕನ್ನಡ ಭಾಷೆಯಲ್ಲಿ ಅನುವಾದ ಮಾಡಲ್ಪಟ್ಟ ಖುರ್‌ಆನ್ ಇದ್ದರೂ ಅದನ್ನು ಮುಟ್ಟುವುದಿಲ್ಲ, ಓದುವುದಿಲ್ಲ.

ಕನ್ನಡ ಭಾಷೆ ಬಂದ ಮುಸ್ಲಿಮ್‌ರು ಕನ್ನಡದಲ್ಲಿ ಖುರ್‌ಆನ್‌ನನ್ನು ಓದಬಹುದು ಅಲ್ಲವೆ! ಎಂದು ನಾವು ಕೇಳಿದರೆ, "ಅದು ನಮಗೆ ಅಲ್ಲ, ಹಿಂದೂಗಳಿಗಾಗಿ ತಯಾರುಮಾಡಿದ್ದೇವೆ" ಎಂದು ಹೇಳುತ್ತಿದ್ದಾರೆ. ಹಿಂದೂಗಳು ಓದಿ ಅದರಲ್ಲಿನ ಭಾವನೆಯನ್ನು ಅರ್ಥಮಾಡಿಕೊಂಡರೂ, ಮುಸ್ಲಿಮ್‌ರು ಮಾತ್ರ ತಿಳಿಯದ ಭಾಷೆಯಲ್ಲಿ ತೋರಿಕೆಗಾಗಿ ಓದುತ್ತಿದ್ದಾರೆ ಆದರೆ ಅವರಿಗೆ ಅದರಲ್ಲಿನ ಅರ್ಥವಾಗಲಿ, ಭಾವವಾಗಲಿ ತಿಳಿದಿಲ್ಲ. ಈ ವಿಧವಾಗಿ ಗ್ರಂಥ ಪಠನದಲ್ಲಿ ಕೂಡಾ ಅವರನ್ನು ಮತವು ಶಾಸಿಸುತ್ತಿದೆ. ಮತವೆನ್ನುವುದು ಒಂದು ಮುಸ್ಲಿಮ್ ಮತದಲ್ಲಿಯೇ ಅಲ್ಲ ಉಳಿದ ಮತಗಳಲ್ಲಿ ಕೂಡಾ ಇದೆ. ಅವರನ್ನು, ದೈವಗ್ರಂಥಗಳನ್ನು ಭಾಗಗಳಾಗಿ ತೋರಿಸುತ್ತಿದೆಯೇ ಹೊರತು ಏಕವಾಗಿ ತೋರಿಸುತ್ತಿಲ್ಲ. ಭಾಗಗಳಾಗಿ ತೋರಿಸುವುದರಿಂದ (6–91) ರಲ್ಲಿ ಹೇಳಿದಂತೆ ತೌರಾತ್ ಗ್ರಂಥವನ್ನು ನೀವು ಭಾಗಗಳಾಗಿ ಹರಿದುಕೊಂಡು ಓದುಕೊಳ್ಳುತ್ತಿದ್ದೀರ. ಅದರಲ್ಲಿನ ಜ್ಞಾನ ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿದಿಲ್ಲವೆಂದು ಹೇಳಿದ್ದಾರೆ. ಹಾಗೆಯೇ ಈದಿನ ಪ್ರತಿ ಮತದವರು ತಮ್ಮ ಹಿರಿಯರು ಹೇಳಿರುವುದು ಅನ್ನುತ್ತಿದ್ದಾರೆ ಹೊರತು ತಮ್ಮ ಗ್ರಂಥದೊಳಗಿನದ್ದೆಂದು ಹೇಳುವುದಿಲ್ಲ. ವಾಸ್ತವವಾಗಿ ಅವರು ಗ್ರಂಥಗಳನ್ನು ಓದಲಿಲ್ಲ. ಅವರ ಹಿರಿಯರು ಹೇಳಿದಂತೆ ನಡೆದುಕೊಳ್ಳುತ್ತಿರುತ್ತಾರೆ. ಅವರ ಹಿರಿಯರನ್ನು ಮಾಯೆ ಮತದ ರೂಪದಲ್ಲಿ ಆವರಿಸಿ ಅವರ ತಲೆಯಲ್ಲಿನ ಭಾವನೆಗಳನ್ನು ಬದಲಾಯಿಸುವುದರಿಂದ ಹಿರಿಯರಾದವರು ಉಳಿದವರಿಗೆ ಮತ ಜ್ಞಾನವನ್ನೇ ಬೋಧಿಸುತ್ತಿದ್ದಾರೆ.

ಈದಿನ ಮತ ಎನ್ನುವ ಮುಸುಗಿನಲ್ಲಿ ಇಲ್ಲದ ಸ್ವಚ್ಛವಾದವನನ್ನು ಹುಡುಕಿದರೂ ಕಾಣಿಸುವುದಿಲ್ಲ. ನನಗೆ ಮತವಿಲ್ಲ, ಮತ ನಿಯಮಗಳು ಇಲ್ಲ ಎಂದು ಜೋರಾಗಿ ಹೇಳುವವನು ಯಾರೂ ಇಲ್ಲ. ಯಾರಾದರೂ ಮತ ಪ್ರಕಾರ ಅಲ್ಲದೆ ಜ್ಞಾನದ ಪ್ರಕಾರ ಮಾತನಾಡಿದರೆ, ಮತವನ್ನು ಬಿಟ್ಟು ಜ್ಞಾನವನ್ನು ತಿಳಿಯಬೇಕು ಎಂದು ಹೇಳಿದರೇ ಅವನ ಮನೆಯಲ್ಲಿಯೇ ಅವನಿಗೆ ವಿರೋಧತೆ ಬರುತ್ತಿದೆ. ಒಬ್ಬ ಮುಸ್ಲಿಮ್ ಜ್ಞಾನದ ಪ್ರಕಾರ ಮಾತನಾಡಿದರೆ ನೂರು ಮಂದಿ ಮುಸ್ಲಿಮ್‌ರು ಅವನಿಗೆ ಎದುರು ಮಾತನಾಡುತ್ತಾರೆ. "ನಾಳೆ ನೀನು ಮರಣಿಸಿದರೆ ನಿನ್ನ ಶವವನ್ನು ನಮ್ಮ ಮುಸ್ಲಿಮ್ ಗೋರಿಗಳಲ್ಲಿ ಹೂತಿಡುವುದಿಲ್ಲ. ಯಾವ ಮುಸ್ಲಿಮ್ ನಿನ್ನ ಶವವನ್ನು ಮುಟ್ಟುವುದಿಲ್ಲ. ಮತ ನಿಯಮ ಆಚರಿಸದವನು "ಕಾಫೀರ್" ಆಗುತ್ತಾನೆ ಎಂದು ಹೇಳುತ್ತಾರೆ. ಕಾಫೀರ್ ಎಂದರೆ ಅಜ್ಞಾನಿಯೆಂದು ಕೆಲವರು, ದೈವದ್ರೋಹಿ ಎಂದು ಕೆಲವರು ಹೇಳುತ್ತಿದ್ದಾರೆ. ಮನುಷ್ಯ ಬದುಕಿರುವಾಗಲೇ ಮತವೆನ್ನುವ ರೋಗ ಅಂಟಿಕೊಳ್ಳುವುದಲ್ಲದೆ, ಮನುಷ್ಯ ಮರಣಿಸಿದಾಗಲೂ ಕೂಡ ಅವನ ಶವವನ್ನು ಕೂಡಾ ಮತವು ಬಿಡುವುದಿಲ್ಲ. ಯಾವ ರೋಗವಾದರೂ ಮನುಷ್ಯ ಬದುಕಿರುವಾಗಲೇ ಇರುತ್ತದೆ. ಮರಣಿಸಿದರೆ ಅವನಲ್ಲಿ ಅದರ ಛಾಯೆಗಳು ಯಾವುದು ಕಾಣಿಸುವುದಿಲ್ಲ. ಆದರೇ ಮತವೆನ್ನುವುದು ಮರಣಿಸದ ಮನುಷ್ಯನನ್ನು ಕೂಡಾ ಬಿಡುವುದಿಲ್ಲ. ಊರಿನ ಹೊರಗಡೆ ಹೋಗಿ ನೋಡಿದರೆ ಹಿಂದೂಗಳ ಸ್ಮಶಾನ ಬೇರೆ, ಕ್ರೈಸ್ಥರ ಸ್ಮಶಾನ ಬೇರೆ, ಹಾಗೆ ಮುಸ್ಲಿಮ್ ಸ್ಮಶಾನ ಬೇರೆಯಾಗಿವೆ. ಆಕಸ್ಮಿಕವಾಗಿಯೂ ಕೂಡಾ ಹಿಂದೂಗಳ ಶವವನ್ನು ತಂದು ಮುಸ್ಲಿಮ್‌ರ ಸ್ಮಶಾನದಲ್ಲಿ ಹೂತಿಡುವುದಿಲ್ಲ. ಮುಸ್ಲಿಮ್‌ರು ಅವರ ಶವವನ್ನು ಇತರೆ ಸ್ಮಶಾನಗಳಲ್ಲಿ ಹೂತಿಡುವುದಿಲ್ಲ. ಕೊನೆಗೆ ಮರಣಿಸಿ ಕೊಳೆತುಹೋದ ಶವಗಳ ಹತ್ತಿರ ಕೂಡಾ ಮತ ನಿಯಮಗಳಿವೆ. ಮತದ ಮಾತು ಕೇಳದವನನ್ನು ಮತ, ಸಾಂಪ್ರದಾಯಗಳನ್ನು ಆಚರಿಸದವರನ್ನು, ದಿಕ್ಕರಿಸಿದವರನ್ನು ಅವರ ಸ್ಮಶಾನದಲ್ಲಿ ಹೂತಿಡುವುದಿಲ್ಲ ಎಂದು ಬೆದರಿಸುವುದು ಕೂಡಾ ಇದೆ. ಮರಣಿಸಿದರೂ ಬಿಡದ ಮತಬೇಕಾ ಬೇಡವಾ? ಎಂದು ಮನುಷ್ಯ ಆಲೋಚಿಸಿಕೊಳ್ಳಬೇಕಾದ ಸಮಯ ಬರುತ್ತಿದೆ. ದೇವರ ಜ್ಞಾನ

ಮನುಷ್ಯ ಮರಣಿಸದ ಮುನ್ನವೇ, ಬದುಕಿರುವಾಗಲೇ ಶಾಂತಿಯನ್ನುಂಟು ಮಾಡುತ್ತಿದೆ. ಮತವು ಬದುಕಿರುವಾಗಲೇ ಅಲ್ಲದೆ ಮರಣಿಸಿದಾಗಲೂ ಕೂಡಾ ವೇದಿಸುತ್ತಿದೆ. ಹಾಗೆ ವೇದನೆಯಲ್ಲಿ ಕಳಿಸುವ ಮತಬೇಕಾ? ಶಾಂತಿಯನ್ನುಂಟು ಮಾಡುವ ಜ್ಞಾನ ಬೇಕಾ? ಮನುಷ್ಯ ಆಲೋಚಿಸಿಕೊಳ್ಳಬೇಕಾದ ಸಮಯ ಆಸನ್ನವಾಗುತ್ತಿದೆ. ಮತಗ್ರಂಥಗಳೆಂದು ದೈವಗ್ರಂಥಗಳಿಗೆ ಮತದ ಮುದ್ರೆಹಾಕಿ, ತನ್ನ ಹೆಸರು ಗ್ರಂಥದ ಮುಂದೆ ಹೇಳುವಂತೆ ಮಾಡಿದೆ. ದೇವರು ಹೇಳಿರುವುದು ದೈವಜ್ಞಾನವೇ  ಹೊರತು ಮತಜ್ಞಾನ ಅಲ್ಲವಲ್ಲ! ಮತವನ್ನು ಅಲ್ಲಗಳೆದರೇ, ಮತಗ್ರಂಥ ಅಲ್ಲಗಳೆದರೆ ನಿಮ್ಮ ಹಿರಿಯರು ನಿನ್ನನ್ನು ಹೊರಹಾಕುತ್ತಾರೆ. ನಿನ್ನನ್ನು ಹೊರಹಾಕುವ ಮತಬೇಕೋ? ಆದರಿಸುವ ಜ್ಞಾನ ಬೇಕೋ ಆಲೋಚಿಸಿಕೊಳ್ಳಬೇ ಕಾದ ಸಮಯ ಆಸನ್ನವಾಗುತ್ತಿದೆ.

ನೀನು ಹುಟ್ಟಿರುವುದು ಪ್ರಕೃತಿ, ಪರಮಾತ್ಮರೆನ್ನುವ ತಾಯಿ ತಂದೆಯರಿಗೆ, ಹೇಳುವುದು ಮತದ ಹೆಸರು, ನಾನು ಇಂತಹ ಮತದವನೆಂದುಕೊಳ್ಳುತ್ತಿದ್ದೀಯಾ. ಇಂತಹವರ ಮಗನು ಎಂದು ದೇವರ ಹೆಸರು ಹೇಳುತ್ತಿಲ್ಲ. ನೀನು ಸೃಷ್ಠಿ ಸಲ್ಪಟ್ಟವನು, ನಿನ್ನ ಸೃಷ್ಠಿಸಿದವನನ್ನು ಕುರಿತು ಹೇಳು, ನಿನ್ನ ಮತವನ್ನು ಕುರಿತು ಹೇಳಬೇಡ. ಏಕೆಂದರೆ! ಮತವು ಮಾಯೆಯಾಗಿ ಇಷ್ಟುಕಾಲ ಮನುಷ್ಯರಲ್ಲಿ ಸೇರಿ ಹೋಗಿದೆ. ಆದರೇ ಈಗ ಮತವು ಮಾಯೆಯಾಗಿ ಇರುವುದಲ್ಲದೇ ಅದು ಮಾಯವಾಗಿ ಹೋಗುವಕಾಲ ಹತ್ತಿರಕ್ಕೆ ಬಂದಿದೆ. ದ್ವಿತೀಯ ದೈವಗ್ರಂಥದಲ್ಲಿ ಆದರಣಕರ್ತ ಬರುತ್ತಾನೆಂದು ಈಗ ನಾನು ಹೇಳದ ವಿಷಯಗಳನ್ನು ಹೇಳುತ್ತಾನೆಂದು ಮೊದಲೇ ಹೇಳಿದ್ದಾನೆ. ಹಾಗೇ ಆದರಣಕರ್ತ ಬರುವಕಾಲ ಬಂದಿದೆಯೇನೊ! ಆದರಣಕರ್ತ ಬಂದು  ಆ ದಿನ ಸಹಿಸಲಾರರು ಎಂದು ಯೇಸು ಹೇಳುವ ವಿಷಯಗಳನ್ನು ಸಹಿಸಿದರೂ, ಸಹಿಸದೆ ಹೋದರೂ ತಪ್ಪದೆ ಹೇಳುತ್ತಾನೆ. ಆ ದಿನ ಸಹಿಸದಿರುವುದು ಮತವನ್ನು ಕುರಿತು ಹೇಳಿದರೆ ನಾವು ಹಾಗೆ ಇಲ್ಲವಲ್ಲ! ಎಂದು ಅನ್ನಬಹದು. ಆ ದಿನ ಮತವಿಲ್ಲ. ಆದ್ದರಿಂದ ಆ ದಿನ ಹೇಳಲಿಲ್ಲ. ಈದಿನ ದೇವರು ಆದರಣಕರ್ತನಾಗಿ ಬಂದರೂ ಮೊದಲು

ಬಂದಿರುವ ಪ್ರವಕ್ತರು ಹೇಳಿದ ಜ್ಞಾನವನ್ನೇ ಹೇಳುತ್ತಾನೆ ಹೊರತು ಆತನು ತನ್ನಷ್ಟಕ್ಕೆತಾನು ಹೊಸ ಜ್ಞಾನವನ್ನು ಹೇಳುವುದಿಲ್ಲ. ಮೊದಲು ಹೇಳಿದವುಗಳನ್ನೇ ಹೇಳುತ್ತಾನೆ. ಆದರೇ ಈಗ ಬರುವವನ ದೃಷ್ಠಿ ಮತದ ಮೇಲೆಯೇ.

ಆದರಣಕರ್ತ ಬಂದರೂ ತಾವು ಹೇಳಿದವುಗಳನ್ನೇ ಹೇಳುತ್ತಾನೆಂದು ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆ 16ನೇ ಅಧ್ಯಾಯದಲ್ಲಿ 13, 14, 15ನೇ ವಚನಗಳನ್ನು ಒಂದುಸಲ ನೋಡಿರಿ.

**(ಯೋಹಾನ್ : 16–13, 14,15) "ಆದರೇ ಆತನು ಎಂದರೇ ಸತ್ಯ ಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವ ಸತ್ಯದೊಳಗೆ ನಡೆಸುತ್ತಾನೆ. ಆತನು ತನ್ನಷ್ಟಕ್ಕೆ ತಾನೇ ಏನೂ ಬೋಧಿಸದೆ ಯಾವುದನ್ನು ಕೇಳುತ್ತಾನೊ ಅವುಗಳನ್ನು ಬೋಧಿಸಿ ಸಂಭವಿಸುವಂತಹ ಸಂಗತಿಗಳನ್ನು ನಿಮಗೆ ತಿಳಿಸುತ್ತಾನೆ. (14) ಆತನು ನನ್ನಲ್ಲಿನವುಗಳನ್ನು ತೆಗೆದುಕೊಂಡು ತಿಳಿಸುತ್ತಾನೆ ಆದ್ದರಿಂದ ನನ್ನನ್ನು ಮಹಿಮೆಪಡಿಸುತ್ತಾನೆ, (15) ತಂದೆಗೆ ಉಂಟಾಗಿರುವವೆಲ್ಲವೂ ನನ್ನವು. ಆದ್ದರಿಂದ ಆತನು ನನ್ನಲ್ಲಿನವುಗಳನ್ನು ತೆಗೆದುಕೊಂಡು ನಿಮಗೆ ತಿಳಿಸುತ್ತಾನೆಂದು ನಾನು ಹೇಳಿದ್ದೇನೆ."**

ಬೈಬಲ್‌ನಲ್ಲಿನ ವಾಕ್ಯವನ್ನು ಆಳವಾಗಿ ನೋಡಿದರೆ ಎಷ್ಟೋ ವಿಷಯವು ಅರ್ಥವಾಗುತ್ತದೆ. ಬರುವವನು **ಸತ್ಯಸ್ವರೂಪಿಯಾದ ಆತ್ಮ** ಎಂದರೇ ಸೃಷ್ಠಿಕರ್ತನಾದ ನಮಗೆ ತಾತನಾದ **ಪರಮಾತ್ಮ**ನೇ ಶರೀರಧರಿಸಿ ಬರುತ್ತಿದ್ದಾನೆಂದು ಅರ್ಥ. ಆತನು ಬಂದರೆ ಏನು ಮಾಡುತ್ತಾನೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ ವಾಕ್ಯದಲ್ಲಿಯೇ ಸರ್ವಸತ್ಯದೊಳಗೆ ನಡೆಸುತ್ತಾನೆಂದು ಇದೆ. ಸರ್ವ ಎಂದರೇ ಯಾವಾಗಲೂ', ಸತ್ಯ ಎಂದರೇ 'ಬದಲಾಗದಿರುವುದು' ಎಂದು ಅರ್ಥ. ಎಂದಿಗೂ ಬದಲಾಗದಿರುವುದು, ಶಾಶ್ವತವಾಗಿ ಒಂದೇ ಪದ್ಧತಿಯಲ್ಲಿ ಇರುವುದು ಧರ್ಮವೇ ಆದ್ದರಿಂದ **ಧರ್ಮವನ್ನು ಸರ್ವಸತ್ಯ** ಎಂದಿದ್ದಾರೆ.

ಸರ್ವಸತ್ಯದೊಳಗೆ ನಡೆಸುತ್ತಾನೆ ಎಂದರೇ "ಅಧರ್ಮಗಳಿಂದ ಧರ್ಮಗಳ ಕಡೆ ಕಳುಹಿಸುತ್ತಾನೆ" ಎಂದು ಅರ್ಥ.

ಕಷ್ಟಗಳಲ್ಲಿ ಇರುವವನನ್ನು ಮಾತನಾಡಿಸಿ ಅವನಿಗೆ ಸಹಾಯಮಾಡಿ ಅವನ ಕಷ್ಟಗಳಿಂದ ಹೊರಹಾಕಿದರೆ ಅವನನ್ನು ಎಷ್ಟೋ ಆದರಿಸಿದಂತಾಗುತ್ತದೆ. ಕಷ್ಟಗಳಲ್ಲಿ ಇರುವವನನ್ನು, ಹಣ ಇಲ್ಲದವನನ್ನು ಯಾರೂ ಮಾತನಾಡಿಸುವುದಿಲ್ಲ. ಕಷ್ಟಗಳಲ್ಲಿ ಇರುವವನನ್ನು ನಾವೇ ಸ್ವತಃವಾಗಿ ಮಾತನಾಡಿಸಿ, ಸಹಾಯಮಾಡಿ ಕಷ್ಟಗಳನ್ನು ತೊಲಗಿಸಿದರೆ ಅದನ್ನು ಮೀರಿದ ಆದರಣವಿಲ್ಲ. ಮನುಷ್ಯರು ಸ್ವಂತ ಧರ್ಮಗಳನ್ನು ಕಳೆದುಕೊಂಡು ಸ್ವತಂತ್ರವಾಗಿ ಬದುಕಲಾರದೆ ಪರಧರ್ಮಗಳಲ್ಲಿ ಬಿದ್ದು ಕೊನೆಗೆ ಸ್ಮಶಾನದಲ್ಲಿ ಕೂಡಾ ಸ್ವತಂತ್ರತೇ ಇಲ್ಲದೆ ಬದುಕುವವರಿಗೆ ಸ್ವಂತ ಧರ್ಮಗಳನ್ನು ಗುರುತುಮಾಡಿ, ಪರಧರ್ಮಗಳನ್ನು ಬಿಡಿಸಿ ಇತರರ ಅಧೀನದಲ್ಲಿ ಇಲ್ಲದಂತೆ ಸ್ವತಂತ್ರವಾಗಿ ಬದುಕುವುದಕ್ಕೆ ಅವಕಾಶ ಯಾರು ಕಲ್ಪಿಸುತ್ತಾರೊ, ಅವರೇ ನಿಜವಾದ ಆದರಣಕರ್ತ, ಅದೇ ನಿಜವಾದ ಆದರಣವೆಂದು ಹೇಳಬಹದು. ಭೂಮಿಮೇಲೆ ಒಬ್ಬರಿಗೆ ಇಬ್ಬರಿಗೆ ಅಲ್ಲದೇ ಪ್ರಪಂಚ ಒಟ್ಟಾರೆ ಸ್ವತ್ರಂತ್ರತೆ ಇಲ್ಲದವರಿಗೆಲ್ಲ ಸ್ವತಂತ್ರತೆ ಕಲ್ಪಿಸುವುದಕ್ಕಾಗಿ ಬರುವವನು ಚಿಕ್ಕವನಾಗಿರುವುದಿಲ್ಲ. ಆತನು ಸಾಮಾನ್ಯನು ಅಲ್ಲವೆಂದೇ ಹೇಳಬೇಕು. ಹಾಗೆ ಬರುವವನೇ ನಿಜವಾದ **ಆದರಣಕರ್ತ**.

ಮೊದಲು ಬಂದ ದೈವಗ್ರಂಥಗಳಲ್ಲಿ ದೊರೆತ ಸಮಾಚಾರವನ್ನನುಸರಿಸಿ ಪ್ರಜೆಗಳನ್ನು ಧರ್ಮಗಳಿಂದ ಆದರಿಸುವ ಆದರಣಕರ್ತ ಬಂದರೆ ಧರ್ಮಚಕ್ರವನ್ನು ಧರಿಸಿ ಬರುತ್ತಾನೆ. **ಧರ್ಮಚಕ್ರ** ಎಂದರೇ ಶರೀರವೇ ಅಲ್ಲವೇ! ಅದನ್ನು ಎಲ್ಲರೂ ಧರಿಸಿ ಬರುತ್ತಾರೆ ಅಲ್ಲವೆ! ಎಂದು ಕೆಲವರಂದುಕೊಳ್ಳಬಹುದು. ಸಾಧಾರಣ ಶರೀರವನ್ನೇ ಧರ್ಮಚಕ್ರವೆಂದು ಹೇಳಬಹುದು. ಆದರೇ ಸಾಧಾರಣ ಜನರು ಧರಿಸುವುದನ್ನು ಧರ್ಮಚಕ್ರ ಎನ್ನುವ ಹೆಸರಿನಿಂದ ಕರೆಯುವುದಿಲ್ಲ. ದೇವರು ಭೂಮಿಮೇಲೆ ಅವತರಿಸುವಾಗ ಯಾವ ಶರೀರವನ್ನು ಧರಿಸಿ ಬರುತ್ತಾನೋ, ಆ ಶರೀರವನ್ನು ಮಾತ್ರ ಧರ್ಮಚಕ್ರ ಎನ್ನುವುದಕ್ಕೆ ಅವಕಾಶವಿದೆ. ಶರೀರವನ್ನು

ಸಾಧಾರಣ ಮನುಷ್ಯ ಧರಿಸಿದರೆ ಅದನ್ನು ಸಾಧಾರಣ ಶರೀರ ಎನ್ನುತ್ತೇವೆ. ದೇವರು ಶರೀರ ಧರಿಸಿ ಬಂದರೆ ಅದನ್ನು **ಧರ್ಮಚಕ್ರ** ಎಂದು ತಪ್ಪದೇ ಅನ್ನಬೇಕು.

**ಪ್ರಶ್ನೆ :– ಮನುಷ್ಯ ಧರಿಸುವುದನ್ನು ಶರೀರವೆಂದು ಹೇಳುವುದು ಸಹಜ. ಆದರೇ ಹುಟ್ಟಿದವರೆಲ್ಲರೂ ಶರೀರದೊಂದಿಗೆ ಬದುಕುತ್ತಾರೆ. ಹುಟ್ಟಿದ ಎಲ್ಲರಲ್ಲಿ ಒಬ್ಬರು ದೇವರು ಕೂಡಾ ಇರಬಹುದು. ಆತನು ಕೂಡಾ ಶರೀರವನ್ನೇ ಧರಿಸಿ ಬರುತ್ತಾನೆ ಎಂದು ನೀವು ಕೂಡಾ ಆಗಾಗ ಹೇಳಿದಾಗ ಕೇಳಿದ್ದೇವೆ. ಈಗಲೇನೋ ದೇವರು ಧರಿಸಿದ ಶರೀರವನ್ನು ಮಾತ್ರ ಧರ್ಮಚಕ್ರವೆಂದು ಕರೆಯುತ್ತೇವೆಯೆಂದು ಹೇಳುತ್ತಿದ್ದೀರ. ಈ ವಿಷಯವನ್ನು ನೀವು ಹೇಗೆ ಹೇಳುತ್ತಿದ್ದೀರ?**

**ಉತ್ತರ :–** ದೇವರು ಮನುಷ್ಯನಾಗಿ ಹುಟ್ಟುವುದು ವಾಸ್ತವವೇ ಆದರೂ, ಆತನು ಸಾಧಾರಣ ಮನುಷ್ಯನಂತೆ ಹುಟ್ಟಿ, ಮನುಷ್ಯರಲ್ಲಿ ಬೆರೆತುಹೋಗಿರುತ್ತಾನೆ. ಆದ್ದರಿಂದ ಈತನು ಧರಿಸಿರುವುದು ಧರ್ಮಚಕ್ರವೆಂದು ಹೇಳುವುದಕ್ಕೆ ಸಾಧ್ಯವಿರುವುದಿಲ್ಲ. ಶರೀರವನ್ನು ಧರಿಸಿದವನು ಯಾರಾಗಿರುವುದು ಮೊದಲು ತಿಳಿದರೆ, ಆಗ ಸಾಮಾನ್ಯನದ್ದು ಶರೀರವೆಂದು, ದೇವರದ್ದು ಧರ್ಮಚಕ್ರವೆಂದು ಹೇಳಬಹುದು. ಧರ್ಮಚಕ್ರಕ್ಕು ಶರೀರಕ್ಕು ಏನಾದರೂ ವ್ಯತ್ಯಾಸ ಇರುತ್ತದಾ ಎಂದರೇ ಹಾಗೆ ಸಹ ಇರುವುದಿಲ್ಲ. ಇದೆಲ್ಲವೂ ಲೆಕ್ಕಾಚಾರಕ್ಕೆ, ಶಾಸ್ತ್ರಬದ್ಧತೆಗಾಗಿ ಹೇಳಬೇಕಾಗಿದ್ದೆ ಹೊರತು ಹೊರಗೆ ತೋರಿಸುವುದಕ್ಕೆ ಸಾಧ್ಯವಾಗುವುದಿಲ್ಲ. ದೇವರು ಮನುಷ್ಯ ಶರೀರವನ್ನು ಧರಿಸಿ ಬರುವುದರಲ್ಲಿ ಯಾವ ವ್ಯತ್ಯಾಸ ಇರುವುದಿಲ್ಲ. ವ್ಯತ್ಯಾಸ ಇರುವುದಿಲ್ಲವಾದ್ದರಿಂದ ಶರೀರವನ್ನು ಧರಿಸಿ ಬಂದವನು ಸಾಧಾರಣ ಮನುಷ್ಯನಾಗಬಹುದು ಇಲ್ಲವೇ ದೇವರು ಆಗಬಹುದು. ದೇವರು ಅಪರೂಪವಾಗಿ ಬರುತ್ತಾನೆ. ನಿತ್ಯ ಹುಟ್ಟುವವರು ಸಾಧಾರಣ ಮನುಷ್ಯರೆ. ಆದರೇ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಶ್ಲೋ (6) ರಲ್ಲಿಯೂ, ಹಾಗೇ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 11ನೇ ಶ್ಲೋಕದಲ್ಲಿಯೂ ಹೇಳಿದಂತೆ ಸರ್ವ ಮಾನವರಿಗೂ ದೇವರಾದವನು, ಸರ್ವ ಮಾನವರು ಹುಟ್ಟಿದಂತೆ

ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ. ಆದರೇ ದೇವರು ಧರ್ಮ ಸಂಸ್ಥಾಪನೆ ನಿಮಿತ್ತ ಭೂಮಿಮೇಲೆ ಹುಟ್ಟುತ್ತಾನೆ. ಹಾಗೆ ಹುಟ್ಟಿದ್ದಾನೆಂದು ತಿಳಿಯದೇ ಇರುವುದಕ್ಕೆ ಸಾಧಾರಣ ಮನುಷ್ಯ ಶರೀರ ಧರಿಸಿ ಹುಟ್ಟಿದಂತೇ ಹುಟ್ಟುತ್ತಾನೆ. ಆದರೇ ಆತನ ಹುಟ್ಟುವಿಕೆಯಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಅದನ್ನು ಯಾರೂ ಗಮನಿಸಲಾರರು. ಗಮನಿಸುವಂತೆ ಆತನು ಹುಟ್ಟಲಿಲ್ಲ.

ಮನುಷ್ಯ ಜನ್ಮಕ್ಕು, ದೇವರ ಜನ್ಮಕ್ಕು ಸ್ವಲ್ಪ ವ್ಯತ್ಯಾಸ ಇರುವುದು ವಾಸ್ತವವೇ. ಮನುಷ್ಯ ಜನ್ಮದಲ್ಲಿ ತಾಯಿ ಗರ್ಭದಿಂದ ಶಿಶು ಶರೀರವು ಹೊರಬಿದ್ದ ನಂತರ ಹುಟ್ಟಿದ ಶರೀರದಲ್ಲಿ ಜೀವಿಯು ಸೇರುತ್ತಾನೆ. ಗರ್ಭದಿಂದ ಶಿಶು ತಲೆ ಹೊರಬಿದ್ದಾಗಿನಿಂದ ಹತ್ತು ಅಥವಾ ಹನ್ನೆರಡು ಇಲ್ಲವೆ ಇಪ್ಪತ್ತುನಾಲ್ಕು ಗಂಟೆಗಳೊಳಗೆ ಯಾವಾಗಾದರೂ ಜೀವಿಯು ಹುಟ್ಟಿದ ಶರೀರದಲ್ಲಿ ಸೇರುವುದಕ್ಕೆ ಅವಕಾಶ ಇರುತ್ತದೆ. ಆದರೆ ದೇವರು ಹುಟ್ಟಿದಾಗ ಜೀವಿಯು ಪ್ರತ್ಯೇಕವಾಗಿ ಹೊರಗಿನಿಂದ ಬರುವುದಿಲ್ಲ. ದೇವರ ಜನ್ಮದಲ್ಲಿ ಶಿಶುವು ತಾಯಿ ಗರ್ಭದಿಂದ ನೇರವಾಗಿ ಸಜೀವವಾಗಿ ಹುಟ್ಟುತ್ತಿದೆ. ಅದನ್ನು ಯಾರೂ ಗಮನಿಸಲಾರರು. ಏಕೆಂದರೇ! ಸಾಧಾರಣ ಜನರು ಕೂಡ ತಾಯಿ ಗರ್ಭದಿಂದ ಸಜೀವವಾಗಿ ಹುಟ್ಟುತ್ತಿದ್ದಾರೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಸಾಧಾರಣ ಮನುಷ್ಯ ಹುಟ್ಟಿದರೆ ಶರೀರ ಹುಟ್ಟಿದ ನಂತರ 'ಜೀವಿಯು ಶರೀರದಲ್ಲಿ ಸೇರುತ್ತಾನೆ' ಎನ್ನುವ ಮಾತು ಯಾರಿಗೂ ತಿಳಿದಿಲ್ಲ. ಆದ್ದರಿಂದ ಸಜೀವವಾಗಿ ಹುಟ್ಟಿದ ದೇವರನ್ನು ನೋಡಿದರೂ ಅವನನ್ನು ಸಾಧಾರಣ ಮನುಷ್ಯ ಎಂದುಕೊಳ್ಳುವುದು ನಡೆಯುತ್ತಿದೆ.

ಮನುಷ್ಯ ಧರಿಸಿದ ಶರೀರದಲ್ಲಿ ಜೀವಿಯು ಇರುತ್ತಾನೆ. ಜೀವಿಯು ಧರಿಸಿದ ಶರೀರವನ್ನೇ ಮನುಷ್ಯ ಎನ್ನುತ್ತಿದ್ದೇವೆ. ಆದರೇ ದೇವರು ಧರಿಸಿದ ಶರೀರದಲ್ಲಿ ವ್ಯತ್ಯಾಸವನ್ನು ಯಾರೂ ಗಮನಿಸಲಾರರು. ಮೇಲ್ನೋಟಕ್ಕೆ ಕಾಣಿಸುವ ವ್ಯತ್ಯಾಸಗಳು ಯಾವುವು ಇರುವುದಿಲ್ಲ. ದೇವರು ಧರಿಸಿದ ಶರೀರದಲ್ಲಿ ಜೀವಿಯು ಇರುವುದಿಲ್ಲ. ಆತ್ಮ ಇರುವುದಿಲ್ಲ. ಎಲ್ಲಿ ಜೀವಿ ಇರುತ್ತಾನೊ ಅಲ್ಲಿ ಆತ್ಮ ಇರುತ್ತದೆ.

ಜೀವಾತ್ಮ, ಆತ್ಮ ಇಬ್ಬರೂ ಒಂದೇ ಕಡೆ ಇರುವುದು ಸಜೀವ ಶರೀರದಲ್ಲಿನ ವಿಧಾನ. ದೇವರು ಬಂದು ತಾಯಿ ಗರ್ಭದಿಂದಲೇ ಸಜೀವವಾಗಿ ಹುಟ್ಟುತ್ತಿದ್ದಾನೆ. ಆದರೂ ಆ ಶರೀರದಲ್ಲಿ ಜೀವಿಯು, ಆತ್ಮ ಇಲ್ಲದೇ ಕೇವಲ ಆತ್ಮಗಿಂತ ಬೇರೆಯಾದ ಪರಮಾತ್ಮ ಇರುತ್ತಾನೆ. ಆತ್ಮಗೆ ತಂದೆ, ಜೀವಾತ್ಮಗೆ ತಾತನಾದ ದೇವರು ಧರಿಸಿದ ಶರೀರದಲ್ಲಿ ಜೀವಾತ್ಮ, ಆತ್ಮ ಎರಡೂ ಇಲ್ಲದಂತೆ ಇರುತ್ತದೆ. ಜೀವಾತ್ಮ, ಆತ್ಮ ಎರಡೂ ಇಲ್ಲದ ದೇಹ ಪ್ರಪಂಚದಲ್ಲಿ ಎಲ್ಲಿಯೂ ಇರುವುದಿಲ್ಲ. ಜೀವಾತ್ಮ ಅನುಭವಿಸುತ್ತಿರುವಾಗ, ಆತ್ಮ ಶರೀರದಲ್ಲಿನ ಕಾರ್ಯಗಳೆಲ್ಲವನ್ನು ಮಾಡುತ್ತಾ ಜೀವಿಗೆ ಅನುಭವಗಳನ್ನು ಒದಗಿಸುತ್ತಿರುತ್ತದೆ. ಜೀವಾತ್ಮವನ್ನು ಆತ್ಮ ಜೀವಿಸುವಂತೆ ಮಾಡುತ್ತಿದೆ. ಸರ್ವಜೀವರಾಶಿಗಳಲ್ಲಿ ಜೀವಾತ್ಮ ಇರುವಕಡೆಯೆಲ್ಲ ಆತ್ಮ ಇರುತ್ತದೆ. ಆತ್ಮ ಇದ್ದರೇನೇ ಜೀವಾತ್ಮ ಜೀವಿಸುತ್ತದೆ. ಆತ್ಮ ಇಲ್ಲದ ಜೀವಾತ್ಮವಾಗಲಿ, ಜೀವಾತ್ಮ ಇಲ್ಲದ ಆತ್ಮವಾಗಲಿ ಯಾವ ಶರೀರದಲ್ಲಿ ಇಲ್ಲ.

ದೇವರು ಧರಿಸಿದ ಶರೀರದಲ್ಲಿ ಜೀವಾತ್ಮ, ಆತ್ಮ ಇಲ್ಲ. ಶರೀರದಲ್ಲಿರುವ ದೇವರೇ ಜೀವಾತ್ಮವಾಗಿ, ಆತ್ಮವಾಗಿ ನಟಿಸುತ್ತಾ ಶರೀರದಲ್ಲಿ ಕಾರ್ಯಗಳು ನಡೆಯುವಂತೆ ಮಾಡುವುದರಿಂದ ಆ ಶರೀರದಲ್ಲಿ ಜೀವಿಯು ಇದ್ದಾನೆಂದು ಅಂದುಕೊಳ್ಳುತ್ತೇವೆ. ದೇವರು ಇದ್ದಾನೆಂದು ಯಾರಿಗೂ ಅನುಮಾನ ಬರುವುದಿಲ್ಲ. **ಜೀವಿಯು ಇಲ್ಲದ ಏಕೈಕ ಶರೀರ ದೇವರು ಧರಿಸಿರುವುದೇ.** ಆದರೇ ಇಲ್ಲಿ ಪ್ರತಿಮನುಷ್ಯ ಜಾಗ್ರತೆಯಾಗಿ ತಿಳಿಯಬೇಕಾಗಿರುವುದು ಬಹಳ ಇದೆ. ದೇವರು ಶರೀರದಲ್ಲಿ ಜೀವಾತ್ಮನಂತೆ ಮತ್ತು ಆತ್ಮನಂತೆ ನಟಿಸುತ್ತಿರುತ್ತಾನೆ. ತನ್ನನ್ನು ಆತ್ಮವಾಗಿಯೇ ತಿಳಿಯುತ್ತದೆ. ಶರೀರ ಇಲ್ಲದವನು ಪರಮಾತ್ಮನಾಗಿರುವುದರಿಂದ ಶರೀರದಲ್ಲಿರುವ ಪರಮಾತ್ಮ ಶರೀರದಲ್ಲಿರುವಷ್ಟು ಕಾಲ ತನ್ನನ್ನು ಆತ್ಮವಾಗಿ ಹೇಳಿಕೊಳ್ಳುತ್ತಾನೆ. ಕೆಲವು ಸಮಯಗಳಲ್ಲಿ ಜೀವಾತ್ಮವಾಗಿ ಹೇಳಿಕೊಳ್ಳುತ್ತಾನೆ. ತಾನು ಪರಮಾತ್ಮನಾಗಿದ್ದು ಪರಮಾತ್ಮನನ್ನು ತಂದೆಯೆಂದು ಹೇಳುತ್ತಾನೆ. ಜ್ಞಾನದ ಪ್ರಕಾರ ಜೀವಾತ್ಮ, ಆತ್ಮವನ್ನು ತಂದೆಯೆಂದು ಹೇಳಬಹುದು. ಆದ್ದರಿಂದ ತಾನು ಜೀವಾತ್ಮ ಆದಂತೆ ಆತ್ಮವನ್ನು ತಂದೆಯೆಂದು ಹೇಳಿದಂತೆ ನಟಿಸುತ್ತಾನೆ.

ಕೆಲವು ಸಮಯಗಳಲ್ಲಿ ತಾನು ಆತ್ಮವಾದಂತೆ ಪರಮಾತ್ಮನನ್ನು ತಂದೆಯೆಂದು ಹೇಳುತ್ತಾನೆ. ಹಾಗೆ ಒಂದೊಂದು ಸಮಯದಲ್ಲಿ ಒಂದೊಂದು ವಿಧವಾಗಿ ಮಾತನಾಡುವುದರಿಂದ ಶರೀರದಲ್ಲಿರುವ ದೇವರನ್ನು ಯಾರೂ ಗುರುತಿಸುವುದಕ್ಕೆ ಅವಕಾಶವಿಲ್ಲ.

ಇಂಜೀಲು ಗ್ರಂಥದಲ್ಲಿ ಯೇಸು ತನ್ನನ್ನು ಜೀವಾತ್ಮವಾಗಿ ಹೋಲಿಸಿ ಕೊಂಡ ಮಾತುಗಳು ಇವೆ. ಆತ್ಮನಾಗಿ ಹೋಲಿಸಿಕೊಂಡು ಪರಮಾತ್ಮನನ್ನು ತಂದೆಯಾಗಿ ಹೇಳಿದ ಮಾತುಗಳು ಇವೆ. ಹಾಗೆ ಜೀವಾತ್ಮನಾಗಿ ಆತ್ಮವನ್ನು ತಂದೆಯಾಗಿ ಹೋಲಿಸಿ ಹೇಳಿದ ಮಾತುಗಳು ಇವೆ. ಕೃಷ್ಣನಾಗಿರುವಾಗ ಜೀವನವೆಲ್ಲ ಜೀವಿಯಾಗಿಯೇ ನಟಿಸಿದ್ದಾನೆ. ಆದರೇ ಭಗವದ್ಗೀತೆಯನ್ನು ಹೇಳಿದಾಗ ಮಾತ್ರ "**ಸ್ವತಃವಾಗಿ ನಾನು ಸೃಷ್ಠಿಕರ್ತನಾದ ದೇವರೆಂದು, ಪರಮಾತ್ಮಯೆಂದು**" ಹೇಳಿದ್ದಾನೆ. ನಂಬುವುದಿಲ್ಲವೇನೊ ಎಂದು ತನ್ನ ವಿಶ್ವರೂಪವನ್ನು ತೋರಿಸಿದ್ದಾನೆ. ಈ ವಿಧವಾಗಿ ಚೆನ್ನಾಗಿ ಗಮನಿಸಿದರೆ ದೇವರು ಧರಿಸಿದ ಶರೀರವನ್ನು ಗುರುತಿಸುವುದಕ್ಕೆ, ಈತನು ದೇವರೇಯೆಂದು ಹೇಳುವುದಕ್ಕೆ ಇಂತಹುಗಳು ಎಷ್ಟೋ ಆಧಾರಗಳು ಇವೆ. ಕಣ್ಣು ಇರುವವನಿಗೇ ದೃಷ್ಠಿ ಎನ್ನುವಂತೆ ದೇವರು ಸಾಧಾರಣ ಶರೀರದಲ್ಲಿ ಮೇಲ್ನೋಟಕ್ಕೆ ಕಾಣಿಸಿದರೂ ಆತನ ಬೋಧನೆಗಳನ್ನನುಸರಿಸಿ ಆತನ ಮಾತುಗಳನ್ನು ಅನುಸರಿಸಿ ಸೂಚನೆಯಾಗಿ ಆತನನ್ನು ಗುರುತಿಸುವುದಕ್ಕೆ ಅವಕಾಶವಿದೆ. ಆದರೂ ಆತನು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಈಗ ನಾನು ಮೇಲೆ ಹೇಳಿದಂತೆ ಕೆಲವು ಗುರುತುಗಳು ಕಾಣಿಸಿದರೂ ಆ ಗುರುತುಗಳಿಂದ ದೇವರನ್ನು ಗುರುತಿಸುವುದಕ್ಕೆ ಸಾಧ್ಯವಿದ್ದರೂ ಆತನು ದೇವರಲ್ಲ ಎನ್ನುವುದಕ್ಕೆ ಆತನ ಹತ್ತಿರವೇ ಎಷ್ಟೋ ವಿಷಯಗಳು ಕಾಣಿಸುತ್ತಿರುತ್ತವೆ. ದೇವರು ಎನ್ನುವುದಕ್ಕೆ ಒಂದು ಇಲ್ಲವೆ ಎರಡು ಆಧಾರಗಳು ಕಾಣಿಸಿದರೂ ದೇವರು ಅಲ್ಲವೆನ್ನುದಕ್ಕೆ ನೂರಾರು ಆಧಾರಗಳು ಕಾಣಿಸುತ್ತವೆ. ಆದ್ದರಿಂದ ಪ್ರತ್ಯಕ್ಷವಾಗಿ ವಿಶ್ವಕ್ಕೆ ಅಧಿಪತಿಯಾದ ಸರ್ವವನ್ನು ಸೃಷ್ಠಿಸಿದ ಸೃಷ್ಠಿಕರ್ತನಾದ ಪರಮಾತ್ಮ ಕೃಷ್ಣನ ರೂಪದಲ್ಲಿ ಭೂಮಿಮೇಲೆ ಮನುಷ್ಯರ

ಮಧ್ಯದೊಳಗೆ ಬಂದರೂ, ಯಾರೂ ಆತನು ದೇವಾಧಿದೇವನೆಂದು ಗುರುತಿಸಲಾರದೆ ಹೋಗಿದ್ದಾರೆ. ಹಾಗೆಯೇ ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಯೇಸುನಾಗಿ ಶರೀರ ಧರಿಸಿ ಬಂದರೂ ಆ ದಿನ ಕೂಡಾ ಯಾರೂ ಆತನನ್ನು ಗುರುತಿಸಲಾರದೆ ಹೋಗಿದ್ದಾರೆ. ಗುರುತಿಸಲಾರದೆ ಹೋಗುವುದಲ್ಲದೆ ಆತನು ಹೇಳಿದ ಜ್ಞಾನವನ್ನು ಹೇಳಿದ ಮಾತುಗಳನ್ನು ಕೇಳಿ ಅರ್ಥಮಾಡಿಕೊಳ್ಳದೆ ಆತನದ್ದೇ ತಪ್ಪು ಎನ್ನುವಂತೆ ಆತನಮೇಲೆ ಅಪವಾದ ಹಾಕಿದ್ದಾರೆ.

ಕೃಷ್ಣನಾಗಿ ಬಂದಾಗ ಆತನು ಧನಿಕನಾಗಿ ಇರುವುದರಿಂದ ಯಾರೂ ಆತನ ತಂಟೆಗೆ ಹೋಗಲಿಲ್ಲ. ಯೇಸುನಾಗಿ ಬಂದಾಗ ಬಡವನಾಗಿ ಬಂದಿರುವುದರಿಂದ ಎಲ್ಲರೂ ಆತನನ್ನು ಸಣ್ಣ ದೃಷ್ಟಿಯಿಂದ ನೋಡಿದ್ದಾರೆ. ಅಲ್ಲಿಗೆ ಸುಮ್ಮನಾಗದೆ ಆತನ ಮೇಲೆ ಅನಗತ್ಯವಾಗಿ, ಅಸೂಯೆಯಿಂದ ನಿಂದಾರೋಪಣೆ ಮಾಡಿದ್ದಾರೆ. ಕೊನೆಗೆ ನ್ಯಾಯಸ್ಥಾನಕ್ಕೆ ಕರೆದುಕೊಂಡುಹೋಗಿ ಶಿಕ್ಷೆ ಹಾಕಿಸಿದ್ದಾರೆ. ಮರಣ ಶಿಕ್ಷೆ ಹಾಕಿಸಿದ್ದೇವೆಂದು ಆನಂದಿಸಿದ್ದಾರೆ. ಆ ದಿನ ಆತನನ್ನು ದೇವರೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಯೇಸು ಆಗಿದ್ದಾಗ ಆತನು ಎಷ್ಟೋ ಜ್ಞಾನವನ್ನು ತಿಳಿಸಿದರೆ ಇದು ದೇವರು ಹೊರತು ಯಾರೂ ಹೇಳಲಾರರೆಂದು ತಿಳಿಯಲಾರದೆ ಆತನು ಹೇಳಿದ ಬೋಧನೆಗಳನ್ನು ಗ್ರಹಿಸಲಾರದೆ ಜ್ಞಾನವನ್ನು ಅಜ್ಞಾನವಾಗಿ ತಿಳಿದು ಆ ಸಮಯಕ್ಕೆ ಜ್ಞಾನಿಗಳಾದವರು ಆತನ ಮೇಲೆ ಅಸೂಯೆ ಬೆಳೆಸಿಕೊಂಡು, ಆತನನ್ನು ಮರಣ ಶಿಕ್ಷೆಗೆ ಗುರಿಮಾಡಿದ್ದಾರೆ. ಆತನನ್ನು ಸಾಯಿಸಿದ ನಂತರ ಸಮಾಧಿಯಲ್ಲಿ ಇಟ್ಟಾಗ ಆತನು "ನಾನು ಮರಣಿಸುವವನಲ್ಲ ನನಗೆ ಮರಣವಿಲ್ಲ" ಎನ್ನುವಂತೆ ಸಮಾಧಿಯಿಂದ ಎದ್ದು ಬಂದರೂ ಆತನನ್ನು ದೆವ್ವವೆಂದು ಕರೆದಿದ್ದಾರೆ ಹೊರತು ಆತನನ್ನು ದೇವರೆಂದು ಅನ್ನಲಾರದೆ ಹೋಗಿದ್ದಾರೆ. ಹೀಗೆ ಕೃಷ್ಣನಾಗಿ ಬಂದ ಸಮಯಗಳಲ್ಲಿಯೂ ಯೇಸು ಆಗಿ ಬಂದ ಕಾಲದಲ್ಲಾಗಲಿ ಆತನನ್ನು ಗುರುತಿಸಲಾರದೆ ಹೋಗಿದ್ದಾರೆ. ಪ್ರತ್ಯಕ್ಷವಾಗಿ ಹೇಳಿದ ಬೋಧನೆಗಳನ್ನು,

ಪ್ರತ್ಯಕ್ಷವಾಗಿ ಮಾಡಿದ ಕೆಲಸಗಳನ್ನು ನೋಡಿ ಸ್ವಲ್ಪವಾದರೂ ಆಲೋಚಿಸದೆ ಹೋಗಿದ್ದಾರೆ. ಕೆಲವು ಸಮಯಗಳಲ್ಲಿ ನಾನೇ ದೇವರು ಎಂದು ಹೇಳಿದ ವಾಕ್ಯಗಳಿವೆ. **(ಯೋಹಾನ್ 14–10,11) "ತಂದೆಯಲ್ಲಿ ನಾನೂ ನನ್ನಲ್ಲಿ ತಂದೆ ಇದ್ದೇವೆಂದು ನೀನು ನಂಬಲಿಲ್ಲವಾ?"** ಎಂದು ಕೇಳಿದ್ದಾನೆ. ಈ ಮಾತಿನಲ್ಲಿ ದೇವರು ನಾನೇ ಎಂದು ಹೇಳದೇ ಇದ್ದರೂ ಪ್ರಜೆಗಳು ಯಾವಮಾತ್ರ ಆತನನ್ನು ಗುರುತಿಸಲಾರದೆ ಹೋಗಿದ್ದಾರೆ. ಕೃಷ್ಣನು ಜೀವನವೆಲ್ಲ ತಾನು ಯಾರಾಗಿರುವುದು ತಿಳಿಯದೆ ಬಚ್ಚಿಟ್ಟುಕೊಂಡರೂ, ತನ್ನ ಬೋಧನೆ ಹೇಳಿದಾಗ "ನಾನೇ ದೇವರು ನನ್ನನ್ನೇ ಮುಗಿಯಿರಿ" ಎಂದು ಹೇಳಿದ್ದಾನೆ. ಹಾಗೆ ಹೇಳಿದರೂ ಅಲ್ಲಿಯೂ ನಂಬಲಿಲ್ಲ. ಯೇಸುವಾಗಿ ಬಂದಾಗಲೂ ಕೂಡಾ "ನಾನು ದೇವರು" ಎಂದು ಹೇಳಿದರೂ ಇಲ್ಲಿಯೂ ನಂಬಲಿಲ್ಲ ಹತ್ತಿರಕ್ಕೆ ಬಂದಿರುವ ದೇವರುನ್ನು ಕೂಡಾ ತಿಳಿಯದವರನ್ನು, "ನಾನೇ ದೇವರು" ಎಂದು ಹೇಳಿದರೂ ಗುರುತಿಸಲಾರದವರನ್ನು ಏನೆನ್ನಬೇಕೊ ನನಗೆ ಅರ್ಥವಾಗಲಿಲ್ಲ. ಅಷ್ಟು ಆಳವಾಗಿ ಹೇಳಿದರೂ, ಹತ್ತಿರವಾಗಿ ಕಾಣಿಸಿದರೂ ತಿಳಿಯದಿರುವಾಗ ನಂತರ ದೇವರು ಮನುಷ್ಯನಾಗಿ ಬಂದರೆ ಗುರುತಿಸುತ್ತಾರೆಂದು ನಂಬಿಕೆಯಿಲ್ಲ. ಆತನನ್ನು ಗುರುತಿಸುವುದು ಸಾಧ್ಯವಾಗುವ ಕೆಲಸವಲ್ಲ. ಆದ್ದರಿಂದ ಮೊದಲೇ ಯೇಸು ಆದರಣಕರ್ತನಾಗಿ ಬರುತ್ತಾನೆಂದು ಪ್ರಕಟಿಸಿದ್ದಾನೆ. ಆದರೂ ಆತನು ಹೇಗೆ ಬರುತ್ತಾನೊ, ಯಾವಾಗ ಬರುತ್ತಾನೊ, ಯಾರತ್ತಿರ ಬರುತ್ತಾನೊ ಯಾರಿಗೂ ತಿಳಿದಿಲ್ಲ.

**ಪ್ರಶ್ನೆ :– ಮನುಷ್ಯ ಬಂದರೂ ಶರೀರದೊಂದಿಗೇ, ದೇವರು ಬಂದರೂ ಶರೀರ ದಿಂದಲೇ ಎಂದು ಮನುಷ್ಯನ ಜನ್ಮಕ್ಕು ದೇವರ ಜನ್ಮಕ್ಕು ವ್ಯತ್ಯಾಸ ಇರುತ್ತದೆಂದು ಹೇಳಿದ್ದಾರೆ. ಆ ವ್ಯತ್ಯಾಸ ಯಾರೂ ಗುರುತಿಸಲಾರದ್ದೆಂದು ಕೂಡಾ ಹೇಳಿದ್ದಾರೆ. ಶರೀರದೊಂದಿಗೆ ಸಹ ಸಜೀವವಾಗಿ ಯಾರು ಹುಟ್ಟುತ್ತಾರೊ ಅವರೇ ದೇವರೆಂದು, ಆತನು ಧರಿಸಿರುವುದೇ ಧರ್ಮಚಕ್ರವೆಂದು ಹೇಳುತ್ತೇವೆ ಎಂದಿದ್ದಾರೆ. ದೇವರು ಎಂದರೆ ಪ್ರತ್ಯೇಕವಾದವನು ಆದ್ದರಿಂದ ನಮ್ಮಂತೆ ಇರುವವನನ್ನು ದೇವರು**

**ಎನ್ನಬಹುದು. ಶರೀರ ದೇವರು ಧರಿಸಿರುವುದು ಮನುಷ್ಯ ಧರಿಸಿರುವುದು ಎರಡು ಒಂದೇ ಆದಾಗ ಮನುಷ್ಯ ಧರಿಸಿರುವುದನ್ನು ಶರೀರವೆಂದು ದೇವರು ಧರಿಸಿರುವು ದನ್ನು ಧರ್ಮಚಕ್ರವೆಂದು ಏಕೆ ಅನ್ನಬೇಕಾಗಿ ಬಂದಿದೆಯೋ ಪೂರ್ತಿಯಾಗಿ ಸಮಾಧಾನವನ್ನು ನೀವು ಹೇಳಲಿಲ್ಲ. ನಮಗೆ ಅರ್ಥವಾಗುವಂತೆ ಪೂರ್ತಿ ವಿವರವಾಗಿ ಹೇಳಿರಿ? ಧರ್ಮಚಕ್ರವನ್ನು ಗುರುತಿಸುವುದಕ್ಕೆ ಏನಾದರೂ ಅವಕಾಶ ಇರುತ್ತದಾ?**

**ಉತ್ತರ :–** ಶರೀರದಲ್ಲಿ ಇಂಥಾದ್ದು ಧರ್ಮಚಕ್ರವೆಂದು ಗುರುತಿಸುವುದಕ್ಕೆ ಜನ್ಮದಲ್ಲಿ ಹೊರತು, ದೊಡ್ಡದಾದ ನಂತರ ಶರೀರದಲ್ಲಿ ಯಾವ ಗುರುತು ಕಾಣಿಸುವುದಿಲ್ಲ. ಜನ್ಮದಲ್ಲಿ ಕೂಡಾ ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ತಿಳಿದು ಕೊಂಡಿದ್ದೇವೆ. ಸಾಧಾರಣ ಮನುಷ್ಯನ ಶರೀರವು, ದೇವರು ಧರಿಸಿದ ಶರೀರವು ಮೇಲ್ನೋಟಕ್ಕೆ ಒಂದು ವಿಧವಾಗಿಯೇ ಇರುತ್ತದೆ. ಮೇಲೆ ಸ್ಥೂಲ ಶರೀರಕ್ಕೆ ಎಷ್ಟು ಭಾಗಗಳಿರುತ್ತವೊ ಅಷ್ಟು ಭಾಗಗಳೇ ಎರಡು ಶರೀರಗಳಲ್ಲಿಯೂ ಇರುತ್ತವೆ. ದೇವರು ಧರಿಸಿದ ಶರೀರ ಮನುಷ್ಯ ಧರಿಸಿದ ಸ್ಥೂಲ ಶರೀರವು ಹತ್ತು ಭಾಗಗಳಾಗಿಯೇ ಇರುತ್ತದೆ. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯ ಗಳಿರುವ ಶರೀರಗಳೇ ದೇವರಿಗೆ, ಮನುಷ್ಯನಿಗೆ ಇರುತ್ತವೆ. ದೇವರು ಧರಿಸಿದ ಶರೀರವು ಕೂಡಾ ಮನುಷ್ಯ ಧರಿಸಿದ ಶರೀರದಂತೆ ಇರುತ್ತದೆ. ದೇವರು ಧರಿಸಿದ ಶರೀರ ಕೂಡಾ ಮನುಷ್ಯ ಶರೀರದಂತೆ ಸ್ಥೂಲ, ಸೂಕ್ಷ್ಮ ಎನ್ನುವ ಎರಡು ಶರೀರಗಳಾಗಿ ಇರುತ್ತವೆ. ಮೇಲ್ನೋಟಕ್ಕೆ ಕಾಣಿಸುವುದೆ ಸ್ಥೂಲ ಶರೀರವಾಗಿದ್ದು, ಕಾಣಿಸುವ ಶರೀರದಲ್ಲಿ ಕಾಣಿಸದೆ ಒಳಗೆ ಅಡಗಿರುವುದು ಸೂಕ್ಷ್ಮ ಶರೀರವೆಂದು ಕರೆಯುತ್ತೇವೆ. ಮನುಷ್ಯ ಸ್ಥೂಲ, ಸೂಕ್ಷ್ಮ ಶರೀರಗಳನ್ನು ಎರಡು ಶರೀರಗಳಲ್ಲಿ ಜೀವಿಯು ಸಂಸಾರ ಮಾಡುತ್ತಿದ್ದಾನೆ. ಜೀವಿಯು ನಿವಾಸಿಸುವ ಶರೀರದಲ್ಲಿ 10 ಭಾಗಗಳು ಸ್ಥೂಲ ಶರೀರ, 14 ಭಾಗಗಳು ಸೂಕ್ಷ್ಮ ಶರೀರವು, 3 ಭಾಗಗಳು ಆತ್ಮ ಒಟ್ಟು 27 ಆಗಿದ್ದು, ಸರ್ವಸಾಧಾರಣವಾಗಿ ಇರುವವು 12 ಒಳ್ಳೆಯ ಕೆಟ್ಟ ಗುಣಗಳು, 12ಧರ್ಮ, ಅಧರ್ಮಗಳು ಇವೆ.

ಗುಣಗಳು, ಧರ್ಮಗಳು, ಒಳ್ಳೆಯ ಕೆಟ್ಟ ಎರಡು ವಿಧಗಳು ಛಾಯೆಯಾಗಿ ತಿಳಿದು ತಿಳಿಯದೆ (ಕಾಣಿಸಿ ಕಾಣಿಸದೆ) ಶರೀರದಲ್ಲಿ ಇರುತ್ತವೆ. ಅವು ಒಳ್ಳೆಯ ಕೆಟ್ಟ 12 ಗುಣಗಳು, ಧರ್ಮ ಅಧರ್ಮಗಳು 12 ಇದ್ದರೂ ಶರೀರದಲ್ಲಿ ಲೆಕ್ಕಿಸಲ್ಪಡುವುದಿಲ್ಲ. ಶರೀರ ಆತ್ಮಗಳೊಂದಿಗೆ ಅಲ್ಲದಿದ್ದರೇ 24 ಭಾಗಗಳು, ಮೂರು ಆತ್ಮಗಳೊಂದಿಗೆ ಆದರೇ 27 ಭಾಗಗಳು ಇದೆಯೆಂದು ಹೇಳಬಹುದು. ಮನುಷ್ಯನಿಗೆ ತನ್ನ ಶರೀರ ವಿಷಯವೇ ತನಗೆ ತಿಳಿದಿಲ್ಲ. ಭಗವದ್ಗೀತೆ ಪ್ರಕಾರ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ ಎನ್ನುವ ಅಧ್ಯಾಯದಲ್ಲಿ ಶರೀರವನ್ನು ಕ್ಷೇತ್ರ ಎಂದೂ, ಶರೀರವನ್ನು ತಿಳಿದವನು ಕ್ಷೇತ್ರಜ್ಞನೆಂದೂ ಹೇಳಿದ್ದಾರೆ. ಭಗವದ್ಗೀತೆ ಜ್ಞಾನದ ಪ್ರಕಾರ ಪ್ರತಿ ಮನುಷ್ಯ ಸ್ವಲ್ಪ ಜ್ಞಾನ ತಿಳಿದವನಾದರೂ ಶರೀರವನ್ನು ಕುರಿತು ತಿಳಿದಿರಬೇಕು. ಮನುಷ್ಯ ಆತ್ಮಜ್ಞಾನದಲ್ಲಿ ಪ್ರಾಥಮಿಕ ಪಾಠಗಳನ್ನು ಕಲಿಯುವಾಗಲೇ ಶರೀರವನ್ನು ಕುರಿತು ತಿಳಿಯಬೇಕಾಗಿದೆ. ಶರೀರವನ್ನು ಕುರಿತು ತಿಳಿಯದೆಹೋದರೆ ಶರೀರದಲ್ಲಿ ನಿವಾಸಿಸುವ ಆತ್ಮವನ್ನು, ಜೀವಾತ್ಮವನ್ನು ಕುರಿತು ಮನುಷ್ಯ ತಿಳಿಯಲಾರನು. ಆದ್ದರಿಂದ **ಜ್ಞಾನಿ** ಎನ್ನುವ ಪ್ರತಿಯೊಬ್ಬನು ಮೊದಲು ಶರೀರ ಜ್ಞಾನವನ್ನು ತಿಳಿದಿರಬೇಕು. ಹಾಗೆ ತಿಳಿದಾಗಲೇ ಶರೀರದ ಹೊರಗೆ ಸ್ಥೂಲ ದೇಹಕ್ಕಿಂತ, ಶರೀರದೊಳಗೆ ಸೂಕ್ಷ್ಮದೇಹ ಬಹಳ ಸಾರಾಂಶ ವಾದುದೆಂದು ತಿಳಿಯುತ್ತದೆ.

ಪ್ರಕೃತಿಯಿಂದ ತಯಾರಾದ ಶರೀರವನ್ನು ತಿಳಿಯದೆ ಹೋದರೆ ಪರಮಾತ್ಮದಿಂದ ತಯಾರಾದ ಆತ್ಮಜ್ಞಾನ ಏನು ತಿಳಿಯುವುದಿಲ್ಲವೆಂದು, ಯಾವ ಮನುಷ್ಯನಾದರೂ ಮೊದಲು ಪ್ರಕೃತಿಯಿಂದ ತಯಾರಾದ ಶರೀರವನ್ನು ತಿಳಿಯದೆಹೋದರೆ ಜ್ಞಾನಿ ಆಗಲಾರನೆಂದು, ಒಂದುವೇಳೆ ಇಂತಹವನು ತನ್ನನ್ನು ಜ್ಞಾನಿಯೆಂದು ಹೇಳಿಕೊಂಡರೆ ಇದು ಅಸತ್ಯವಾಗುತ್ತದೆಂದು ಹೇಳುತ್ತಾ ಹಿರಿಯರು ಒಂದು ಪದ್ಯವನ್ನು ಹೇಳಿದ್ದಾರೆ ನೋಡಿರಿ.

***ಪಂಚತತ್ತ್ವಗಳನ್ನು ಪಂಚೀಕರಿಂಚಕ***
***ಮಂಚಿ ಯತುಲಮನ್ನ ಮಾಟಲನ್ನ***
***ಕುಂಚಮಂದು ಗಜಮು ಗ್ರುಡ್ಡುಪೆಟ್ಟಿನ ಚಂದಂಬು***
***ಅಖಿಲ ಜೀವಸಂಗ ಆತ್ಮಲಿಂಗಾ!***

**ಭಾವಾರ್ಥ :–** ಪ್ರಕೃತಿಯಲ್ಲಿನ ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳನ್ನು ವಿಭಜಿಸಿ 26 ಭಾಗಗಳು ಮಾಡಿ ಅವುಗಳ ಸಮ್ಮೇಳನ ಮಾಡಿದಾಗ 24 ಭಾಗಗಳ ಶರೀರವು




**ಸಾಧಾರಣ ಮನುಷ್ಯನೊಂದರ ಧರ್ಮಚಕ್ರ.**

ತಯಾರಾಗಿದೆಯೆಂದು, ಅವುಗಳ ವಿವರವನ್ನು ತಿಳಿದವನನ್ನೇ ಜ್ಞಾನಿ ಎನ್ನಬಹು ದೆಂದು ಹಿರಿಯರು ಹೇಳಿದ್ದಾರೆ. ಹಾಗೆ ಶರೀರವು ಪ್ರಕೃತಿಯಿಂದ ತಯಾರಾದ ವಿಷಯವು ತಿಳಿಯದಂತೆ ನಾನು ಒಳ್ಳೆಯ ಜ್ಞಾನಿಯೆಂದು ಯಾರಾದರೂ ಹೇಳಿದ್ದಾರೆಂದರೇ ಅದು ಆನೆ ಪುಟ್ಟಿ ಕೆಳಗೆ ಮೊಟ್ಟೆ ಇಡುತ್ತದೆಂದು ಹೇಳಿ ದಂತಿರುತ್ತದೆ. ಆನೆಯು ಪುಟ್ಟಿಕೆಳಗೆ ಮೊಟ್ಟೆ ಇಡುವುದು ಎಷ್ಟು ಅಸತ್ಯವೊ, ಶರೀರ ವಿವರವನ್ನು ತಿಳಿಯದವನು ನಾನು ಜ್ಞಾನಿಯೆಂದು ಹೇಳುವುದು ಅಷ್ಟೇ ಅಸತ್ಯವಾಗುತ್ತದೆ.

ಮೇಲಿನ ಪದ್ಯದಲ್ಲಿ ಹಿರಿಯರು ಹೇಳಿದ ವಿಧಾನವನ್ನು ನೋಡಿದರೆ ಜ್ಞಾನ ಬೇಕೆಂದುಕೊಳ್ಳುವ ಮನುಷ್ಯ ಮೊದಲು ಶರೀರ ಹೇಗೆ ಹುಟ್ಟಿದೆಯೋ, ಹೇಗೆ ತಯಾರಾಗಿದೆಯೋ ಜ್ಞಾನ ವಿಧಾನದಿಂದ ತಿಳಿದರೆ, ಅವನು ನಂತರ ಆತ್ಮಜ್ಞಾನಿ ಆಗುವುದಕ್ಕೆ ಅವಕಾಶವಿರುತ್ತದೆ. ಜ್ಞಾನ ತಿಳಿದ ನಂತರ ಪ್ರಕೃತಿ ಜ್ಞಾನವನ್ನು ಆತ್ಮಜ್ಞಾನವನ್ನು ಸೇರಿಸಿ ನೋಡಿದರೆ ಶರೀರತಃ ಎಷ್ಟು ಭಾಗಗಳಾಗಿ ಇದೆಯೋ ಹಿಂದಿನ ಪುಟಗಳಲ್ಲಿ ಶರೀರವನ್ನು ಚಕ್ರದಂತೆ ಗೀಚಿದ ಚಿತ್ರಪಟವನ್ನು ನೋಡಿದ್ದೇವೆ. ಧರ್ಮಚಕ್ರವನ್ನು ತಿಳಿಯುವುದಕ್ಕೆ ಮೊದಲು ಧರ್ಮಚಕ್ರದಂತಿರುವ ಶರೀರ ನಿರ್ಮಾಣವನ್ನು ಮತ್ತೊಂದುಸಲ ಗಮನಿಸೋಣ.

ಈ ನಿರ್ಮಾಣದಲ್ಲಿ ಸ್ಥೂಲ ಶರೀರ ಭಾಗಗಳು 10 ಇರುವಾಗ, ಸೂಕ್ಷ್ಮ ಶರೀರ ಭಾಗಗಳು 14 ಇರುವಾಗ. ಆತ್ಮ ಭಾಗಗಳು ಮೂರು ಇರುವಾಗ ಒಟ್ಟು ಶರೀರವು 27 ಭಾಗಗಳಾಗಿದೆ. ಅದರಲ್ಲಿ ಛಾಯೆಯಾಗಿ ಪೂರ್ತಿ ಕಾಣಿಸದ ಒಳ್ಳೆಯ ಕೆಟ್ಟಗುಣಗಳು 12, ಧರ್ಮ ಅಧರ್ಮಗಳು 12 ಒಟ್ಟು 24 ಇವೆ. ಹೀಗೆ ಸ್ಥೂಲ, ಸೂಕ್ಷ್ಮ, ಛಾಯೆ ಶರೀರಗಳನ್ನು ಮೂರನ್ನು ಬೆರೆಸಿ ನೋಡಿದರೆ ನಮ್ಮ ಮುಂದಿರುವ ಚಕ್ರದಂತೆ ಶರೀರವು ಕಾಣಿಸುತ್ತಿದೆ. ಇದು ಅರ್ಥವಾಗುವುದಕ್ಕೆ ಲೆಕ್ಕಚಾರವಾಗಿ ಬರೆಯಲ್ಪಟ್ಟಿದೆ. ಇದರಲ್ಲಿ ಅಧರ್ಮಗಳು ಆರನ್ನು, ಕೆಟ್ಟ ಗುಣಗಳು ಆರನ್ನು, ಕಡಿಮೆಮಾಡಿಕೊಂಡ ಜ್ಞಾನಿಗಳು ಕೂಡಾ ಕೆಲವರು ಇದ್ದಾರೆ. ಆಗ ಅವರ ಶರೀರವನ್ನು 39 ಭಾಗಗಳಾಗಿಯೇ

ಹೇಳಬಹುದು. ಎಲ್ಲವನ್ನು ಸೇರಿಸಿ ಹೇಳಿದರೆ ಒಟ್ಟು 51 ದಾಗಿ ಇರುವಂತೆ ಹೇಳಬಹುದು. ಮನುಷ್ಯ ಶರೀರದಲ್ಲಿನ ವಿಧಾನವನ್ನು ಜ್ಞಾನದ ಪ್ರಕಾರ ಹೇಳಿಕೊಂಡರೆ ಹೀಗೆ ಇದೆ.

ಧರ್ಮಸಂಸ್ಥಾಪನೆ ನಿಮಿತ್ತ ಸೃಷ್ಠಿ ಆದಿಯಲ್ಲಿ ದೇವರು ಮನುಷ್ಯನಾಗಿ ಸೃಷ್ಠಿಸಲ್ಪಡುತ್ತಿದ್ದಾನೆ. ಬಂದವನು ಪರಮಾತ್ಮನೇ ಆದರೂ ಪರಮಾತ್ಮ ಸ್ಥಾನದಲ್ಲಿ ಹಾಜರಾಗಿದ್ದು ತನ್ನ ಪ್ರತಿನಿಧಿ ಎಂದು ಹೇಳಿಕೊಳ್ಳುತ್ತಾ ಭೂಮಿಮೇಲೆ ತಾನೇ ಉದ್ಭವಿಸುತ್ತಿದ್ದಾನೆ. ಹಾಗೆ ಹುಟ್ಟಿದವನು ತಾನು ಮೊದಲೇ ಒಂದು ಪ್ರತ್ಯೇಕವಾದ ಶರೀರವನ್ನು ತನ್ನ ನಿವಾಸಕ್ಕಾಗಿ ತಯಾರು ಮಾಡಿಕೊಳ್ಳುತ್ತಿದ್ದಾನೆ. ಈ ವಿಷಯಕ್ಕೆ ಸಾಕ್ಷ್ಯವು ಅಂತಿಮ ದೈವಗ್ರಂಥದಲ್ಲಿ ಸೂರಾ 15ರಲ್ಲಿ, ಆಯತ್ 28, 29ರಲ್ಲಿ ಬರೆಯಲ್ಪಟ್ಟಿರುವುದನ್ನು ನೋಡಿದರೆ ನನ್ನ ಮಾತು ನಿಜವೆಂದು ತಿಳಿಯುತ್ತದೆ.

**(15– 28,29) "ಚೆನ್ನಾಗಿ ಒಣಗಿದ ಕಪ್ಪನೆಯ ಮಣ್ಣಿನಿಂದ ನಾನು ಒಬ್ಬ ಮನುಷ್ಯನನ್ನು (ಶರೀರವನ್ನು) ತಯಾರು ಮಾಡುತ್ತಿದ್ದೇನೆ ಎಂದು ನಿನ್ನ ಪ್ರಭುವು ದೂತರೊಂದಿಗೆ ಹೇಳಿದ್ದಾನೆ. ನಾನು ಆತನ ಶರೀರವನ್ನು ಪೂರ್ತಿ ತಯಾರು ಮಾಡಿ ಆತನಲ್ಲಿ ನನ್ನ ಆತ್ಮವನ್ನು ಊದಿದಾಗ ನೀವೆಲ್ಲರೂ ಆತನ ಮುಂದೆ ಸಾಷ್ಟಾಂಗ ಬೀಳಿರಿ."**

ದೇವರು ಪ್ರತ್ಯೇಕವಾದ ಶರೀರವನ್ನು ತಯಾರು ಮಾಡುತ್ತಿದ್ದೇನೆಂದು ಮೊದಲೇ ಹೇಳಿದ್ದಾನೆ. ಹಾಗೆ ಮಾಡಿದ ಅದರೊಳಗೆ ತನ್ನ ಆತ್ಮವನ್ನು ಊದುತ್ತಾನೆ ಎಂದು ಇದೆ. ದೇವರು ಧರಿಸುವ ಶರೀರ ಸಾಧಾರಣ ಮನುಷ್ಯನ ಶರೀರವಾದರೆ ಅದನ್ನು ಪ್ರತ್ಯೇಕವಾಗಿ ದೇವರು ತಯಾರುಮಾಡಬೇಕಾದ ಕೆಲಸವಿಲ್ಲ. ದೇವರು ಧರಿಸುವ ಶರೀರ ಸಾಧಾರಣ ಮನುಷ್ಯನಂತಿರುವ ಶರೀರವೇ ಆದರೂ ಅದು ಪ್ರತ್ಯೇಕವಾಗಿ ತಯಾರು ಮಾಡಲ್ಪಟ್ಟಿದೆ ಎಂದು ತಿಳಿದುಹೋಗಿದೆ. ಅದು ಎಲ್ಲಾರ ಶರೀರಗಳಂತೆ ಇರುವುದಿಲ್ಲ. ಅದರಲ್ಲಿ ಯಾವುದೋ ಪ್ರತ್ಯೇಕತೆ ಇರುತ್ತದೆ. ಆ ಪ್ರತ್ಯೇಕತೆ ಏನು? ಎಂದರೆ ದೇವರು ಧರಿಸಿದ ಶರೀರದಲ್ಲಿ

ಜೀವಿಯು ಅಸಲು ಇಲ್ಲ. ಹಾಗೆ ಆತ್ಮವೂ ಇಲ್ಲ. ಮೂರು ಆತ್ಮಗಳಲ್ಲಿ ಶರೀರದಲ್ಲಿ ಇರುವವನು ಪರಮಾತ್ಮ ಒಬ್ಬನೇಯೆಂದು ತಿಳಿದುಹೋಗುತ್ತಿದೆ. ಉಳಿದ ಸ್ಥೂಲ ಶರೀರ 10 ಭಾಗಗಳಿರುತ್ತದೆ. ಹಾಗೇ ಸೂಕ್ಷ್ಮ ಶರೀರ 14 ಭಾಗಗಳಿರುತ್ತದೆ. ಮನುಷ್ಯನ ಶರೀರದಲ್ಲಿ ಆರು ಅಧರ್ಮಗಳು, ಆರು ಧರ್ಮಗಳು ಒಟ್ಟು 12 ಇರುವಾಗ ಭಗವಂತನ ಶರೀರದಲ್ಲಿ ಆರು ಧರ್ಮಗಳು ಮಾತ್ರವೇ ಇರುತ್ತವೆ. ಗುಣಗಳ ವಿಷಯಕ್ಕೆ ಬಂದರೆ ಸಾಧಾರಣ ಮನುಷ್ಯನಿಗಿರುವಂತೇ 12 ಗುಣಗಳಿರುತ್ತವೆ.

| | **ಮನುಷ್ಯನಲ್ಲಿ** | **ಭಗವಂತನಲ್ಲಿ** |
|---|---|---|
| ಸ್ಥೂಲ ಶರೀರ | 10 ಭಾಗಗಳು | 10 ಭಾಗಗಳು |
| ಸೂಕ್ಷ್ಮ ಶರೀರ | 14 ಭಾಗಗಳು | 14 ಭಾಗಗಳು |
| ಆತ್ಮಗಳು | 3 | 1 |
| ಗುಣಗಳು | 12 | 12 |
| ಧರ್ಮಾಧರ್ಮಗಳು | 12 | 6 |
| ಜೀವಿಯ ಸ್ಥಾನ | ಭರ್ತೀ | ಖಾಲಿ |
| ಆತ್ಮ ಸ್ಥಾನ | ಭರ್ತೀ | ಖಾಲಿ |
| ಧರ್ಮಗಳ ಸ್ಥಾನ | ಭರ್ತೀ | ಅರ್ಧಖಾಲಿ |

ಹೊರಗಿನ ಭಾಗದಲ್ಲಿನ ಜೀವಿಯ ಚಕ್ರ ಖಾಲಿಯಾಗಿದೆ. ಹೊರಗಿನಿಂದ ನಾಲ್ಕನೆ ಭಾಗದಲ್ಲಿ ಧರ್ಮಗಳು ಆರು ಇವೆ. ಅಧರ್ಮಗಳು ಆರು ಖಾಲಿಯಾಗಿವೆ. ಪೂರ್ತಿ ಮಧ್ಯ ಭಾಗದಲ್ಲಿ ಆರನೇ ಭಾಗದಲ್ಲಿನ ಆತ್ಮಸ್ಥಾನ ಖಾಲಿಯಾಗಿ ಕಾಣಿಸುತ್ತಿದೆ. ದೇವರು ಧರಿಸಿದ ಶರೀರ ಮೊದಲೇ ಕೆಲವು ಖಾಲಿಮಾಡಿ ದೇವರು ತಯಾರು ಮಾಡಿದ್ದಾನೆ. ಸಾಧಾರಣ ಮನುಷ್ಯ ಧರಿಸಿರುವುದು ಆರು ಭಾಗಗಳ ಧರ್ಮಚಕ್ರವಾಗಿದ್ದು, ದೇವರು ಧರಿಸಿರುವುದು ನಾಲ್ಕು ಭಾಗಗಳ ಧರ್ಮಚಕ್ರ.




# ಭಗವಂತನು ಧರಿಸಿದ ಧರ್ಮಚಕ್ರ

ದೇವರು ತಯಾರು ಮಾಡಿದ ಪ್ರತ್ಯೇಕವಾದ ಶರೀರ ನಾಲ್ಕು ದುಂಡನೆ ಭಾಗಗಳಾಗಿ ಇದೆ. ಮನುಷ್ಯ ಧರಿಸಿದ ಶರೀರಕ್ಕು, ದೇವರು ಧರಿಸಿದ ಶರೀರಕ್ಕು ಎರಡು ಭಾಗಗಳು ವ್ಯತ್ಯಾಸ ಇವೆ. ಮನುಷ್ಯನದ್ದು ಆರು ಭಾಗಗಳಾಗಿ ಇರುವಾಗ, ದೇವರದ್ದು ನಾಲ್ಕು ಭಾಗಗಳಾಗಿದೆ. ದೇವರು ಧರಿಸಿದ ಧರ್ಮಚಕ್ರ ಒಂದರ ಚಿತ್ರ ನಂತರ ಪುಟದ ಚಿತ್ರದಲ್ಲಿ ನೋಡಿರಿ.

ಮೇಲ್ನೋಟಕ್ಕೆ ಕಾಣಿಸುವ ಸ್ಥೂಲ ದೇಹಹೊಂದಿ ಒಳಗೆ ಸೂಕ್ಷ್ಮ ದೇಹ ಹೊಂದಿ, ಹೊರಗೆ ತಿಳಿಯುವ ಗುಣಗಳು ಹೊಂದಿ ಹಾಗೇ ಧರ್ಮಗಳಿರುವ ಶರೀರವನ್ನು




## ದೇವರು ಧರಿಸಿದ ಧರ್ಮಚಕ್ರ

ದೇವರು ಧರಿಸಿ ಬರುತ್ತಿದ್ದಾನೆ. ದೇವರು ಮಣ್ಣಿನಿಂದ ಮನುಷ್ಯನನ್ನು ತಯಾರು ಮಾಡುತ್ತಿದ್ದೇನೆಂದು ಹೇಳಿ ಪ್ರತ್ಯೇಕವಾಗಿ ನಾಲ್ಕು ಭಾಗಗಳ ಧರ್ಮಚಕ್ರವನ್ನು ತಯಾರಿ ಮಾಡಿದ್ದಾನೆ. ಇದರಲ್ಲಿ ಜೀವಾತ್ಮ, ಆತ್ಮಸ್ಥಾನಗಳು ಎರಡೂ ಇಲ್ಲ. ಮನುಷ್ಯ ಧರಿಸಿದ ಶರೀರಕ್ಕು, ದೇವರು ಧರಿಸಿದ ಶರೀರಕ್ಕು ಎರಡು ಭಾಗಗಳ ವ್ಯತ್ಯಾಸ ಇರುವುದಲ್ಲದೆ ದೇವರ ಶರೀರದಲ್ಲಿ ಅಧರ್ಮಗಳು ಇಲ್ಲ. ಧರ್ಮಗಳು ಮಾತ್ರ ಇರುವಂತೆ ತಿಳಿಯುತ್ತಿದೆ.

ದೇವರು ಮನುಷ್ಯನ ಶರೀರವನ್ನು ಧರಿಸಿ ನಮಗೆ ತಿಳಿದು ಕೃಷ್ಣನಾಗಿ ಒಂದುಸಲ, ಯೇಸುಆಗಿ ಒಂದುಸಲ ಎರಡುಸಲ ಬಂದಂತೆ ತಿಳಿಯುತ್ತದೆ.

ಎರಡುಸಲ ಬಂದರೂ ಅವರು ಬೋಧನೆಗಳು ಹೇಳುವಾಗ **"ನಾನು ದೇವರು"** ಎಂದು ಹೇಳಿದ್ದರೂ ಅದನ್ನು ಸರ್ವಸಾಧಾರಣವಾಗಿ ಲೆಕ್ಕಿಸಿ ಅವರ ಮಾತಿನಲ್ಲಿನ ಸತ್ಯವನ್ನು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಎರಡನೆಸಲ ಬಂದಿರುವ ಯೇಸು 'ದೇವರು ಮನುಷ್ಯನ ಆಕಾರದಲ್ಲಿ ಬರುತ್ತಾನೆಂದು' ಹೇಳುವುದಾಗಿದೆ. ಆದರಣಕರ್ತನಾಗಿ ಬರುತ್ತಾನೆಂದು ಹೇಳಿದ್ದಾನೆ. ಆದರಣಕರ್ತ ಎನ್ನುವುದು ಹೆಸರಲ್ಲ. ಮನುಷ್ಯರನ್ನು ಆದರಿಸಿ ಕರ್ಮಗಳಿಂದ ಹೊರಹಾಕು ವವನಾಗಿರು ವುದರಿಂದ ಆತನನ್ನು **ಆದರಣಕರ್ತ** ಎಂದು ಹೇಳಿದ್ದಾರೆ ಹೊರತು ಆದರಣಕರ್ತ ಎನ್ನುವುದು ಹೆಸರಲ್ಲ. ಆದರಣಕರ್ತ ಎನ್ನುವ ಭಗವಂತನು ಬಂದರೆ ಆತನು ಧರ್ಮಗಳನ್ನು ಬೋಧಿಸುತ್ತಾನೆಂದು ನಮಗೆ ತಿಳಿದಿದೆ. ಆತನು ಶರೀರದಲ್ಲಿ ನಿವಾಸಿಸುವಾಗ ಆತನ ಪ್ರವರ್ತನೆ ಹೊರಗೆ ಹೇಗಿದ್ದರೂ ಆತನ ಶರೀರದಲ್ಲಿ ಹೇಗಿರುವುದು, ಹೊರಗು ಕೂಡಾ ಜೀವಾತ್ಮ ಇಲ್ಲದೇ ಆತ್ಮ ನಡೆಸದೆ, ಜೀವಾತ್ಮ, ಆತ್ಮ ಇಲ್ಲದಂತಿರುವ ಶರೀರದಲ್ಲಿ ಪರಮಾತ್ಮ ಒಬ್ಬನು ಹೇಗೆ ಕೆಲಸವನ್ನು ಮಾಡುತ್ತಿದ್ದಾನೊ ನಾವು ತಿಳಿಯಬೇಕಾದ ಅಗತ್ಯವಿದೆ. ದೇವರು ಭೂಮಿಮೇಲೆ ಶರೀರದೊಂದಿಗೆ ಇರುವಾಗ ಆತನು ಮಾಡುವ ಕೆಲಸಗಳನ್ನು ಗ್ರಹಿಸಿದರೆ ಆತನ ಜನ್ಮವನ್ನು ಆತನು ಮಾಡುವ ಕಾರ್ಯಗಳ ಮೂಲಕ ಹೇಳುವ ಬೋಧನೆ ಮೂಲಕ ತಿಳಿಯಬಹುದು. ಹಾಗೆ ದೇವರ ಜನ್ಮವನ್ನು ತಿಳಿದರೆ, ಗುರುತಿಸಿದರೆ ಅನುಮಾನ ಇಲ್ಲದಂತೆ ಅರ್ಥ ಮಾಡಿಕೊಂಡರೆ ಅಂತಹವನಿಗೆ ಸುಲಭವಾಗಿ ಜನ್ಮರಾಹಿತ್ಯವಾದ ಮೋಕ್ಷ ಲಭಿಸುತ್ತದೆ. ಈ ವಿಷಯವನ್ನು ತಿಳಿಸುವ ಶ್ಲೋಕವನ್ನು ಭಗವದ್ಗೀತೆಯಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 9ನೇ ಶ್ಲೋಕವನ್ನು ನೋಡಿದರೆ ಅರ್ಥವಾಗುತ್ತದೆ.

**ಶ್ಲೋ॥ ಜನ್ಮ ಕರ್ಮಚಮೇ ದಿವ್ಯ ಮೇವಂ ಯೋವೇತ್ತಿ ತತ್ತ್ವತಃ ।**

**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ! ॥**

**ಭಾವಾರ್ಥ :– "ಸ್ವಲ್ಪವಾದರೂ ನನ್ನ ದಿವ್ಯವಾದ ಕರ್ಮಗಳನ್ನು, ಜನ್ಮಗಳನ್ನು ಗ್ರಹಿಸುವವನು ಮರಣಿಸಿದ ನಂತರ ಬೇರೆ ಜನ್ಮಕ್ಕೆ ಹೋಗದೇ ನೇರವಾಗಿ ಮುಕ್ತಿಯನ್ನು ಹೊಂದುತ್ತಾನೆ. ನನ್ನೊಳಗೆ ಸೇರಿಹೋಗುತ್ತಾನೆ.** ಎಂದು ಹೇಳಿದ್ದಾರೆ.

ದೇವರು ಅವತರಿಸಿದಾಗ ತಾನು ಶರೀರವನ್ನು ಧರಿಸಿ ಮೇಲ್ನೋಟಕ್ಕೆ ಜೀವಿಯಂತೆ ಕಾಣಿಸುವವನು, ಜೀವಿಯಂತೆ ಎಲ್ಲರೊಂದಿಗೆ ಸಾಧಾರಣವಾಗಿ ಮಾತನಾಡುವವನು, ಎಲ್ಲಾ ವಿಧಗಳ ಕೆಲಸಗಳು ಮಾಡುತ್ತಾ ಕಾಣಿಸುವವನು ಸ್ವತಃವಾಗಿ ಪರಮಾತ್ಮನೇ ಎಂದು ನಾವು ಅರ್ಥಮಾಡಿಕೊಳ್ಳಬೇಕಾಗಿರುತ್ತದೆ. ವಿಶ್ವಕ್ಕೆಲ್ಲಾ ದೊಡ್ಡವನಾದ, ಪ್ರಪಂಚಕ್ಕೆಲ್ಲಾ ದೇವರಾದವನು ಶರೀರದೊಂದಿಗೆ ಮನುಷ್ಯ ಮಾತನಾಡಿದಂತೆ ಮಾತನಾಡುವುದು ಆಶ್ಚರ್ಯವಾಗಿ ಇರುತ್ತದೆ. ಅಷ್ಟೇ ಅಲ್ಲದೆ ಇದು ನಿಜವಾ? ಎಂದು ನಂಬಲಾರದ ವಿಷಯವಾಗಿರುತ್ತದೆ. ನಂಬಿದರೂ, ನಂಬದಿದ್ದರೂ ದೇವರೇ ಶರೀರದಲ್ಲಿದ್ದು ಮಾತನಾಡುತ್ತಿದ್ದಾನೆ. ಅಂತಹ ದೊಡ್ಡ ದೇವರೊಂದಿಗೆ ಸ್ವತಃವಾಗಿ ಮಾತನಾಡುವ ಅವಕಾಶ, ಆತನು ನಮಗೆ ಉಂಟುಮಾಡಿದ ಅದೃಷ್ಟ. ಆದರೇ ಆತನೊಂದಿಗೆ ಭಯವಿಲ್ಲದೆ ವ್ಯಂಗ್ಯವಾಗಿ ಮಾತನಾಡುವವರು ಕೂಡಾ ಇದ್ದಾರೆ. ಎದುರಿಗಿರುವ ಮನುಷ್ಯ ಯಾರು? ಎಂದು ಗುರುತಿಸದವರು ಆತನು ದೇವರೆಂದು ತಿಳಿಯದೆ ಹೋದರೂ ಪರವಾಗಿಲ್ಲ ಆದರೆ ಆತನನ್ನು ಅಗೌರವವಾಗಿ ಮಾತನಾಡಿ ಪಾಪವನ್ನು ಮೂಟೆಕಟ್ಟುಕೊಳ್ಳುವವರು ಕೂಡಾ ಇದ್ದಾರೆ.

**ಪ್ರಶ್ನೆ :– ನೀವು ಎರಡು ವಿಧಗಳ ಧರ್ಮಚಕ್ರಗಳನ್ನು ಹೇಳಿದ್ದೀರ. ಮನುಷ್ಯ ಧರಿಸುವುದು ಒಂದು ವಿಧ. ದೇವರು ಧರಿಸುವುದು ಒಂದು ವಿಧ ಎಂದು ತೋರಿಸಿದ್ದೀರ. ಚಿತ್ರದೊಂದಿಗೆ ಸಹ ಧರ್ಮಚಕ್ರದಲ್ಲಿರುವ ವ್ಯತ್ಯಾಸಗಳನ್ನು ವಿವರಿಸಿದ್ದೀರ. ದೇವರು ಹೀಗೇ ಬರುತ್ತಾನೆ, ಹೀಗೇ ಮಾತನಾಡುತ್ತಾನೆ, ಆತನ ಧರ್ಮಗಳು ಇವು ಎಂದು ನೀವು ತಿಳಿಸುತ್ತಾ ಹೋಗುತ್ತಿದ್ದೀರ. ನೀವು ಹೇಳುವುದನ್ನನುಸರಿಸಿ ನೋಡಿದರೆ ಇವು ಯಾರಿಗೂ ತಿಳಿಯದ ವಿಷಯಗಳು. ನೀವು ಸುಲಭವಾಗಿ ಲೆಕ್ಕಗಳು ಹೇಳಿದಂತೆ ಹೇಳುತ್ತೀದ್ದೀರ. ನಿಮ್ಮ ಮಾತುಗಳನ್ನು ನಾವು ಹೇಗೆ ನಂಬಬೇಕು? ನೀವೂ ಹೇಳುವುದೆಲ್ಲಾ ಸತ್ಯವೇಯೆಂದು ನಾವು ಏಕೆ ಅಂದುಕೊಳ್ಳಬೇಕು? ನಮಗೆ ಸಮಾಧಾನ ಹೇಳಿರಿ.?**

**ಉತ್ತರ :–** ನೀವು ಕೇಳುವ ಪ್ರಶ್ನೆ ಸಮಂಜಸವಾದುದೇ! ನೀವು ಕೇಳಬಹುದು.

ಮೊದಲಿನಿಂದ ಇಂತಹ ಅನುಮಾನಗಳು ಇರುವುದರಿಂದ ದೇವರು ನಮ್ಮ ಹತ್ತಿರಕ್ಕೆ ಬಂದರೂ ಗುರುತಿಸಲಾರದೆ ಹೋಗಿದ್ದೇವೆಯೆಂದು ಇಲ್ಲಿಯವರೆಗು ಹೇಳಿದ್ದೇನೆ. ಈಗ ನಿನಗಿರುವ ಅಭ್ಯಾಸದ ಪ್ರಕಾರ ನೀನು ಕೇಳುವುದರಲ್ಲಿ ತಪ್ಪಿಲ್ಲ ಆದರೆ, ನೀವು ಇನ್ನೊಂದು ಕೋನದಲ್ಲಿ ಕೂಡಾ ಆಲೋಚಿಸಬಹುದು ಅಲ್ಲವೆ! ಈ ವಿಷಯಗಳೆಲ್ಲವೂ ನಿಮಗೆ ಹೇಳುವುದರಿಂದ ಕೇಳುವವರಿಗೂ ನಿಮಗೂ ಜ್ಞಾನ ಉಂಟಾಗುತ್ತದೆ ಆದರೆ ನನಗೆ ಎಂತಹ ಲಾಭವೂ ಇಲ್ಲವಲ್ಲ! ನೀವು ನಂಬಿದರೆ ಲಾಭ, ನಂಬದೆಹೋದರೆ ನಷ್ಟ ನನಗೆ ಉಂಟಾಗುವಂತಾದರೆ ನಾನು ನನ್ನ ವ್ಯಾಪಾರಕ್ಕೆ ತೊಂದರೆಯಾಗುತ್ತದೇನೊ ಎಂದು ನಿಮಗೋಸ್ಕರ ಹೊದ್ದಾಡಿ ಹೇಳಬೇಕಾಗಿರುತ್ತದೆ. ನೀವು ಕೇಳುವಂತೆ ನೋಡಿಕೊಳ್ಳಬೇಕಾಗಿರುತ್ತದೆ. ನಾನು ದೇವರ ಸೇವೆ ಮಾಡಿಕೊಳ್ಳುವ ನಿಮಿತ್ತ ಅದರಲ್ಲಿನ ಭಾಗವಾಗಿ ಹೇಳುತ್ತಿದ್ದೇವೆ. ನಿಮಗೆ ಈ ವಿಷಯಗಳು ತಿಳಿಯಲ್ಪಡುವುದು ಅದೃಷ್ಟವಾಗಿ ಭಾವಿಸಬೇಕೇ ಹೊರತು, ಪ್ರಶ್ನೆ ಹಾಕುವ ವಿಷಯಗಳಲ್ಲ. ಈಗ ನಾನು ಹೇಳದೆಹೋದರೆ ಭವಿಷ್ಯತ್ತಿನಲ್ಲಿ ನಿಮಗೆ ತಿಳಿಯುವ ಅವಕಾಶವೇ ಇಲ್ಲ. ಇಲ್ಲಿ ಅಲ್ಲದಿದ್ದರೆ ಮೆತ್ತೆಲ್ಲಾದರೂ ತಿಳಿಯುತ್ತದೆ ಎನ್ನುವುದಕ್ಕೆ ಇವು ಸಾಮಾನ್ಯವಾದ ವಿಷಯಗಳು ಅಲ್ಲ. ನೀನು ಒಂದುಸಲ ಆಲೋಚಿಸಿ ನೋಡು ಇವು ಪ್ರಪಂಚ ಸಂಬಂಧವಾದಂತಹ ವಿಷಯಗಳಾ? ಪ್ರಯತ್ನ ಮಾಡಿದರೆ ತಿಳಿಯುವ ವಿಷಯಗಳಾ? ಯಾರಾದರೂ ಹೇಳಳು ಸಾಹಸ ಮಾಡುವ ವಿಷಯಗಳಾ? ನಿಮಗೆ ಅಗತ್ಯವಿಲ್ಲ ಎಂದರೇ ನಾನು ಹೇಳುವುದು ನಿಲ್ಲಿಸುತ್ತೇನೆ.

**ಪ್ರಶ್ನೆ :– ಕ್ಷಮಿಸಿರಿ! ನೀವು ಅಂದಹಾಗೆ ನೀವು ಹೇಳದಿದ್ದರೂ ನಿಮಗೆ ನಷ್ಟವೇನು ಇಲ್ಲ. ನಾವು ಪ್ರಶ್ನೆ ಕೇಳುವುದೇ ತಪ್ಪೆಂದು ನಮಗೇ ಕಾಣಿಸುತ್ತಾ ಇದೆ. ನಮ್ಮ ಪ್ರಶ್ನೆಯಿಂದ ನಿಮಗೆ ತಿಳಿಯುವುದು ತಿಳಿಯದೆಹೋಗುತ್ತದೆ. ನಮಗೆ ತಿಳಿಯದೇ ನಮ್ಮಲ್ಲಿ ಉಂಟಾದ ಪ್ರಶ್ನೆಯನ್ನು ಬಚ್ಚಿಟ್ಟುಕೊಳ್ಳುವುದು ಒಳ್ಳೆಯದಲ್ಲ ಅಲ್ಲವೆ! ಎಂದು ಕೇಳಿದ್ದೇನೆ.**

**ಉತ್ತರ :–** ಮೊದಲಿಗೇ ಪ್ರಶ್ನೆ ಬಾರದಂತೆ ಇರಬೇಕು. ಒಬ್ಬ ವ್ಯಕ್ತಿ ಮೇಲೆ

ನಂಬಿಕೆ ಇರುವಾಗ ಪ್ರಶ್ನೆ ಬರುವುದಿಲ್ಲ. ನಂಬಿಕೆ ಇಲ್ಲದಿರುವಾಗ ಪ್ರಶ್ನೆ ಬರುವುದು ಸಹಜ. ಪ್ರಶ್ನೆ ಬಂದ ನಂತರ ಅದನ್ನು ಬಚ್ಚಿಟ್ಟಿಕೊಳ್ಳಬಾರದು. ಬಚ್ಚಿಟ್ಟುಕೊಂಡರೆ ಅದು ಉತ್ತರ ಇಲ್ಲದಿರುವುದೇ ಎಂದಿಗೂ ಅನುಮಾನವನ್ನೇ ಇರಿಸುತ್ತದೆ. ಆದ್ದರಿಂದ ಬಂದಿರುವ ಪ್ರಶ್ನೆಯನ್ನು ಕೇಳಿದರೆ ಅದಕ್ಕೆ ನಾವು ಸಹನೆಯಿಂದ ಉತ್ತರ ಹೇಳಿ ಅನುಮಾನ ಇಲ್ಲದಂತೆ ಮಾಡುತ್ತೇವೆ. ನಿನಗೆ ಒಂದು ಪ್ರಶ್ನೆ ಬಂದಿದೆ ಎಂದರೇ ಅದನ್ನು ಅನುಸರಿಸಿ ಇನ್ನೊಂದು ಪ್ರಶ್ನೆ ಕೂಡಾ ಬರುತ್ತಿರುತ್ತದೆ. ಅದನ್ನು ನೀನು ಹೇಳಲಾರದೆ ಹೋದರೂ ನಾನೇ ಹೇಳುತ್ತಿದ್ದೇನೆ. ಅದೇನೆಂದರೆ! ದೇವರಿಗಾದರೆ ತನ್ನ ವಿಷಯ ತನಗೆ ತಿಳಿಯುತ್ತದೆ. ಈತನು ದೇವರು ಅಲ್ಲವಲ್ಲ! ದೇವರ ಜನ್ಮ ರಹಸ್ಯಗಳು ಈತನಿಗೆ ಹೇಗೆ ತಿಳಿಯುತ್ತವೆ? ಈತನು ಹೇಳುವವೆಲ್ಲ ಕಟ್ಟುಕಥೆಗಳೇ! ಎನ್ನುವ ಪ್ರಶ್ನೆ ಕೂಡಾ ಬರುತ್ತಿರುತ್ತದೆ. ಹೌದಾ, ಅಲ್ಲವಾ ಇರುವ ಸತ್ಯ ಹೇಳು?

**ಪ್ರಶ್ನೆ :– ಹೌದು! ಅಂತಹ ಪ್ರಶ್ನೆಯೇ ಬಂದಿದೆ. ಬಂದಿರುವುದು ಆ ಪ್ರಶ್ನೆಯೇ! ಆದರೇ ನಾನು ಕೇಳುವುದು ಸ್ವಲ್ಪ ಬೇರೆ ವಿಧವಾಗಿ ಕೇಳಿದ್ದೇನೆ. ನಮಗೆ ಏಕೆ ಅಂತಹ ಪ್ರಶ್ನೆಗಳು ಬಂದಿವೆ?**

**ಉತ್ತರ :–** ಮನುಷ್ಯನ ಒಳಗೆ ಗುಣಗಳ ಮಧ್ಯದಲ್ಲಿ ಜೀವಿಯು ಸಿಲುಕಿ ಕೊಂಡಿರುತ್ತಾನೆ. ಶರೀರ ಯಂತ್ರಾಂಗದ ಪ್ರಕಾರ ಗುಣಪ್ರೇರಣೆಗೆ ಬುದ್ಧಿ ಪ್ರಶ್ನೆಗಳನ್ನು ಹುಟ್ಟಿಸುತ್ತಿರುತ್ತದೆ. ಅದರಿಂದ ಅವನ ಗುಣಗಳು ಕೆಲಸ ಮಾಡಲು ಶುರು ಮಾಡುತ್ತವೆ. ಗುಣಗಳ ಪ್ರಭಾವವನ್ನು ಮಾಯೆ ಎನ್ನಬಹುದು. ಮಾಯೆ ಮನುಷ್ಯನನ್ನು ದೇವರಿಗೆ ದೂರವಾಗಿಯಾದರೂ ಮಾಡುತ್ತದೆ ಇಲ್ಲದಿದ್ದರೆ ಮನುಷ್ಯನನ್ನು ದೇವರಿಗೆ ಹತ್ತಿರವಾಗಿಯಾದರೂ ಮಾಡುತ್ತದೆ. ಮನುಷ್ಯನ ಶ್ರದ್ಧೆಯನ್ನನುಸರಿಸಿ, ಮನುಷ್ಯ ದೇವರನ್ನು ವಿಶ್ವಾಸಿಸುವ ವಿಧಾನವನ್ನನುಸರಿಸಿ, ಮನುಷ್ಯನಿಗಿರುವ ಜ್ಞಾನವನ್ನನುಸರಿಸಿ ಮಾಯೆ ದೇವರಿಗೆ ಹತ್ತಿರವಾಗಿಯಾದರೂ ಅಥವಾ ದೂರವಾಗಿಯಾದರೂ ಕಳಿಸುತ್ತದೆ. ಈ ವಿಷಯವನ್ನು ಕುರಿತು ಭಗವದ್ಗೀತೆ ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ ॥ ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।**

**ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ ॥**

**ಭಾವಾರ್ಥ :– "ದೇವರಿಂದ ಸೃಷ್ಠಿಸಲ್ಪಟ್ಟ ನನ್ನ ಮಾಯೆಯನ್ನು ದಾಟುವುದಕ್ಕೆ ಬಹಳ ದುಸ್ಸಾಧ್ಯವಾದ ಕೆಲಸ. ಅದನ್ನು ಯಾರೂ ದಾಟಲಾರರು. ಯಾರಾದರೆ ನನ್ನನ್ನು ಆರಾಧಿಸುತ್ತಿದ್ದಾನೊ ಅವನು ಮಾತ್ರ ನನ್ನ ಮಾಯೆಯನ್ನು ದಾಟಿಹೋಗುತ್ತಾನೆ."**

ಶರೀರದಲ್ಲಿನ ಮಾಯೆ ಪ್ರಶ್ನಿಸುವುದು ಸಹಜವೇ. ಆ ಪ್ರಶ್ನೆಗಳನ್ನು ಸವಿನಯವಾಗಿ ಕೇಳಿ ಉತ್ತರವನ್ನು ತಿಳಿಯುವುದು ಒಳ್ಳೆಯದು. ಈತನಿಗೆ ದೇವರ ವಿಷಯಗಳು ಹೇಗೆ ತಿಳಿಯುತ್ತವೆ? ಈತನು ದೇವರು ಅಲ್ಲವಲ್ಲ? ಎನ್ನುವ ಪ್ರಶ್ನೆ ಬಂದಿದೆ ಅಲ್ಲವೆ! ಅದಕ್ಕೆ ಉತ್ತರವಾಗಿ "ಈತನು ದೇವರು ಏಕೆ ಆಗಬಾರದು?" ದೇವರೇಯೆಂದು ಸಮಾಧಾನ ಹೇಳು, ಆಗ ಇತರೆ ಪ್ರಶ್ನೆಗಳು ಬರುವುದಿಲ್ಲ. ಪ್ರಶ್ನೆಗಳು ಬಾರದಿರುವಾಗ ಹೇಳುವುದೆಲ್ಲಾ ಜಾಗ್ರತೆಯಾಗಿ ಕೇಳಬಹುದು. ನಾನು ದೇವರನ್ನು ಕುರಿತು ತಿಳಿದಿದ್ದೇನೆ ಆದ್ದರಿಂದ ಹೇಳಿದ್ದೇನೆ. ನಿಮಗೆ ದೇವರನ್ನು ಕುರಿತು ತಿಳಿಯದಷ್ಟು ಮಾತ್ರಕ್ಕೆ ಉಳಿದವರ್ಯಾರಿಗೂ ತಿಳಿದಿಲ್ಲ ಎಂದುಕೊಳ್ಳುವುದು ತಪ್ಪು. ದ್ವಿತೀಯ ದೈವ ಗ್ರಂಥದಲ್ಲಿ ಯೇಸು ಹತ್ತಿರ ಕೂಡಾ ಇಂತಹ ಪ್ರಶ್ನೆ ಅಲ್ಲಿನವರಿಗೆ ಬಂದಿದೆ. ಆಗ ಯೇಸು ಹೇಳಿದ ಸಮಾಧಾನ ಹೀಗೆ ಇದೆ. ಈ ವಿಷಯ ಯೋಹಾನ್ ಸುವಾರ್ತೆ 8ನೇ ಅಧ್ಯಾಯದಲ್ಲಿ 53, 54, 55 ನೋಡಿರಿ.

**(ಯೋಹಾನ್–8–53,54,55) "ನಿನ್ನನ್ನು ನೀನು ಯಾರೆಂದು ಹೇಳಿ ಕೊಳ್ಳುತ್ತಿದ್ದೀಯಾಯೆಂದು ಆತನನ್ನು ಕೇಳಿದರು. ಅದಕ್ಕೆ ಯೇಸು ನನ್ನನ್ನು ನಾನೇ ಮಹಿಮೆ ಪಡಿಸಿಕೊಂಡ ಪಕ್ಷದಲ್ಲಿ ನನ್ನ ಮಹಿಮೆ ಬರಿದಾದದ್ದು. ನಮ್ಮ ದೇವರೆಂದು ನೀವು ಯಾರನ್ನು ಕುರಿತು ಹೇಳುತ್ತಿದ್ದೀರೋ ಆ ನನ್ನ ತಂದೆಯೇ ನನ್ನನ್ನು ಮಹಿಮೆ ಪಡಿಸುತ್ತಿದ್ದಾನೆ. ನೀವು ಆತನನ್ನು**

**ತಿಳಿಯುವುದಿಲ್ಲ. ನಾನು ಆತನನ್ನು ತಿಳಿದಿದ್ದೇನೆ. ಆತನನ್ನು ತಿಳಿದಿಲ್ಲ ವೆಂದು ನಾನು ಹೇಳಿದ ಪಕ್ಷದಲ್ಲಿ ನಿಮ್ಮಂತೆ ನಾನೂ ಸುಳ್ಳುಗಾರ ನಾಗುವೆನು, ಆದರೆ ನಾನು ಆತನನ್ನು ತಿಳಿದಿದ್ದೇನೆ. ಆತನ ಮಾತುಗಳನ್ನು ಅರ್ಥಮಾಡಿಕೊಂಡಿದ್ದೇನೆ."**

ಈ ವಾಕ್ಯವನ್ನು ನೋಡಿದ ನಂತರ ಯೇಸು ಯಾರಾಗಿರುವುದು ಸ್ವಲ್ಪ ತಿಳಿಯಬಹುದು. "ನನ್ನನ್ನು ನಾನು ಮಹಿಮೆ ಪಡಿಸಿಕೊಳ್ಳುವುದಿಲ್ಲ" ಎಂದು ಹೇಳಿದ್ದಾನೆ. "ನನ್ನನ್ನು ನಾನು ಇಂತಹವನೆಂದು ದೊಡ್ಡದಾಗಿ ಹೇಳಿಕೊಳ್ಳುವುದಿಲ್ಲ. ನನ್ನನ್ನು ನನ್ನ ತಂದೆಯಾದ ದೇವರೇ ಮಹಿಮೆ ಪಡಿಸುತ್ತಿದ್ದಾನೆ." ಎಂದು ಹೇಳಿದ್ದಾನೆ. ಇದನ್ನನುಸರಿಸಿ ಯೇಸು ತನ್ನನ್ನು ಕುರಿತು ತಾನು ಹೇಳಿಕೊಳ್ಳುವುದು ಒಳ್ಳೆಯದಲ್ಲವೆಂದು ತನ್ನನ್ನು ಕುರಿತು ದೇವರೇ ಇತರರಿಗೆ ಅರ್ಥವಾಗುವಂತೆ ಮಾಡುತ್ತಾನೆಂದು ಹೇಳಿದ್ದಾನೆ. ಆದ್ದರಿಂದ ಯೇಸು ಸ್ವತಃವಾಗಿ ದೇವರಾಗಿದ್ದೂ ತಾನು ಹೊರಬೀಳದಂತೆ ಮಾತನಾಡಿದ್ದಾನೆ. ಇದೆಲ್ಲವೂ ನೋಡಿದರೆ ಮನುಷ್ಯನಾದವನು ದೇವರ ಆಗಮನವನ್ನು ತಿಳಿಯಲಾರನೆಂದು, ಬಂದವನು **'ನಾನೇ ದೇವರು'** ಎಂದು ಹೇಳಿದರೂ ನಂಬುವ ಸ್ಥಿತಿಯಲ್ಲಿ ಇರುವುದಿಲ್ಲವೆಂದು ತಿಳಿಯುತ್ತಿದೆ. ದೇವರು ಮನುಷ್ಯನಾಗಿ ಬಂದಾಗ ಎಲ್ಲಿಯೂ ಹೊರಬೀಳುವುದಿಲ್ಲ. ಅಂಥಹದರಲ್ಲಿ ನೀನು ದೇವರಾ? ಎಂದು ಕೇಳಿದರೆ **"ನಾನು ದೇವರೇ"** ಎಂದು ಏಕೆ ಹೇಳುತ್ತಾನೆ?

**ಪ್ರಶ್ನೆ :– ನೀವು ಜೀವಾತ್ಮಗೆ ಆತ್ಮ ತಂದೆಯಾಗುತ್ತಾನೆಂದು, ಆತ್ಮಗೆ ಪರಮಾತ್ಮ ತಂದೆಯಾಗುತ್ತಾನೆಂದು ಇದಕ್ಕು ಮೊದಲೇ ಹೇಳಿದ್ದೀರ. ಆದರೇ ಯೇಸು ದೇವರ ಅವತಾರವೇಯೆಂದು ನೀವು ಗಟ್ಟಿಯಾಗಿ ಹೇಳುತ್ತಿದ್ದೀರಲ್ಲ! ಯೇಸು ದೇವರ ಅವತಾರವೇ ಆದಾಗ ಆತನೇ ದೇವರನ್ನು ತಂದೆಯೆಂದು ಹೇಳುತ್ತಿದ್ದಾನೆ ಅಲ್ಲವೇ! ಮೇಲಿನ ವಾಕ್ಯಗಳಲ್ಲಿ ನನ್ನ ತಂದೆಯಾದ ದೇವರು ನನ್ನನ್ನು ಮಹಿಮೆಪಡಿಸುತ್ತಾನೆ. ನನ್ನನ್ನು ನಾನು ಮಹಿಮೆಪಡಿಸಿಕೊಂಡ ಪಕ್ಷದಲ್ಲಿ ನನ್ನ ಮಹಿಮೆ ಬರಿದಾಗುತ್ತದೆ ಎಂದಿದ್ದಾನೆ. ಇಲ್ಲಿ ಯಾವುದು ಸ್ಪಷ್ಟವಾಗಿ ಅರ್ಥವಾಗಲಿಲ್ಲ. ನನ್ನ ತಂದೆಯಾದ**

**ದೇವರು ಎಂದಾಗ ಈತನು ದೇವರು ಅಲ್ಲವಲ್ಲ! ದೇವರಾದರೆ ಹಾಗೆ ಹೇಳುವುದಿಲ್ಲ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ದೇವರು ಭೂಮಿಮೇಲೆ ಅವತರಿಸಿದರೆ ಮನುಷ್ಯರಿಗೆ ಬೋಧನೆಗಳು ಹೇಳುವುದಕ್ಕೆ ಧರ್ಮಗಳನ್ನು ತಿಳಿಸುವುದಕ್ಕೆ ಬರುತ್ತಾನೆ. ಮನುಷ್ಯರೊಂದಿಗೆ ಸಂಬಂಧ ಇಟ್ಟುಕೊಳ್ಳಬೇಕೆಂದರೆ ತಾನು ಕೂಡಾ ಮನುಷ್ಯನಾದಾಗಲೇ ಅದು ಸಾಧ್ಯವಾಗುತ್ತದೆ. ದೇವರು ಮನುಷ್ಯನಂತೆ ಬಂದು, ಮನುಷ್ಯ ಮಾತನಾಡುವ ಭಾಷೆಯಲ್ಲಿಯೇ ಮಾತನಾಡಿ ತನ್ನ ಜ್ಞಾನವನ್ನು ತಿಳಿಸುತ್ತಾನೆ. ದೇವರ ಜ್ಞಾನ ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿದಿಲ್ಲ. ಆದ್ದರಿಂದ ದೇವರು ತನ್ನ ವಿಷಯವನ್ನು ಹೇಳುವುದಕ್ಕೆ ತಾನೇ ಬರಬೇಕಾಗಿದೆ. ಹಾಗೆ ಬಂದಾಗ ತಾನು ಇಂತಹವನೆಂದು ತಿಳಿಸುವುದಿಲ್ಲ. ಆದ್ದರಿಂದ ಪ್ರಜೆಗಳಿಗೆ ಸುಲಭವಾಗಿ ಅರ್ಥವಾಗದಿರುವುದಕ್ಕೆ ತಾನೇ ತನ್ನನ್ನು ತಂದೆಯೆಂದು ಉಚ್ಚರಿಸುವುದರಿಂದ ಆತನು ಬೇರೆ ಈತನು ಬೇರೆಯೆಂದು ಯಾರಾದರೂ ಅಂದುಕೊಳ್ಳಬೇಕಾಗಿದ್ದೆ. ಪ್ರಯತ್ನ ಮಾಡುವವರಿಗೆ ದೇವರು ತಿಳಿಯುತ್ತಾನೆ. ಪ್ರಯತ್ನ ಇಲ್ಲದವರಿಗೆ ತಿಳಿಯುವುದಿಲ್ಲ. ಆದ್ದರಿಂದ ಸುಲಭವಾಗಿ ಅರ್ಥವಾಗದಂತೆ ದೇವರಿಗೆ ಪ್ರತಿನಿಧಿಯಾಗಿ ಬಂದವನು ಸ್ವತಃವಾಗಿ ದೇವರಾಗಿದ್ದು, ಕಾಣಿಸದ ದೇವರನ್ನು ತಂದೆಯೆಂದು ಹೇಳುವುದು ನಡೆಯುತ್ತಿದೆ. ಶರೀರದಲ್ಲಿ ಆತ್ಮನಂತೆ ಪರಮಾತ್ಮ ನಟಿಸುತ್ತಾನೆಂದು ಮೊದಲೇ ಹೇಳಿದ್ದೇವೆ. ಭಗವಂತನು ಭೂಮಿಮೇಲಕ್ಕೆ ಬಂದಾಗ ಆತನ ಶರೀರದಲ್ಲಿ ಜೀವಾತ್ಮ ಆತ್ಮ ಇರುವುದಿಲ್ಲ. ಆದರೂ ಪರಮಾತ್ಮನೇ ಸ್ವತಃವಾಗಿ ಶರೀರದಲ್ಲಿದ್ದು ಆತ್ಮನಾಗಿ ಒಂದುಸಲ, ಜೀವಾತ್ಮನಾಗಿ ಒಂದುಸಲ ಮಾತನಾಡುತ್ತಿರುತ್ತಾನೆ. ಅವಶ್ಯಕತೆಯನ್ನು ಅನುಸರಿಸಿ ಶರೀರದಲ್ಲಿನ ಪರಮಾತ್ಮ ಆತ್ಮನಂತೆ ಪರಮಾತ್ಮನನ್ನು ತಂದೆಯೆಂದು ಉಚ್ಚರಿಸುತ್ತಿದೆ. ಹಾಗೆ ಶರೀರ ಧರಿಸಿ ಬಂದ ದೇವರನ್ನು ಕುರಿತು ದೇವರೇ ಮಾತನಾಡುವಾಗ ಪರಮಾತ್ಮನಾಗಿ ಮಾತನಾಡುತ್ತಾ ಭಗವಂತನು ತನ್ನ ಕುಮಾರನೆಂದು ಹೇಳುತ್ತಿದೆ.

ಹೇಗೆ ಹೇಳಿದರೂ ಪರಮಾತ್ಮ ತನ್ನ ಅವತಾರವನ್ನು ಕುಮಾರನು ಎಂದು ಹೇಳಿದರೂ, ಅವತರಿಸಿದವನು ತಾನು ದೇವರಾಗಿದ್ದು ತಾನು ಕುಮಾರನೆಂದು ದೇವರು (ಪರಮಾತ್ಮನೇ) ತಂದೆಯೆಂದು ಹೇಳುತ್ತಿದ್ದಾನೆ. ಶರೀರದೊಂದಿಗೆ ಹುಟ್ಟಿದ ದೇವರು ಕಾಣಿಸದೆ ಇರುವ ತನ್ನನ್ನೇ ತಂದೆಯೆಂದು ಹೇಳುತ್ತಿದ್ದಾನೆ. ಕಾಣಿಸದೆ ಇರುವ ದೇವರು ಕಾಣಿಸುವ ಶರೀರದಲ್ಲಿರುವ ದೇವರನ್ನು ತನ್ನ ಕುಮಾರನನ್ನಾಗಿ ಹೇಳುತ್ತಿದ್ದಾನೆ. ಇಬ್ಬರು ಒಂದೇ ಆದರೂ ಮನೆಯಲ್ಲಿನವನು, ಹೊರಗಿನವನಾಗಿ ಒಬ್ಬನೇ ಇದ್ದು ಅದು ಯಾರಿಗೂ ಗುರುತು ಬಾರದಂತೆ, ಜ್ಞಾನ ಸ್ಥಾಯಿ ಹೆಚ್ಚಾಗಿರುವವರಿಗೇ ತಿಳಿಯುವಂತೆ ಅರ್ಥವಾಗದಂತೆ ಹೇಳುವುದಾಗಿದೆ. ಮನುಷ್ಯನಿಗೆ (ಜೀವಾತ್ಮಗೆ) ಶರೀರದಲ್ಲಿನ ಆತ್ಮ ತಂದೆಯಾದರೆ, ಆತ್ಮಗೆ ಪರಮಾತ್ಮ ತಂದೆಯೆಂದು ಹೇಳುವುದು ವರಸೆಕ್ರಮ ಮತ್ತು ಆತ್ಮಗಳ ಕ್ರಮ ಹಾಗೆಯೇ ಇದೆ. ಇದೆಲ್ಲಾ ಶರೀರದಲ್ಲಿ ಇರುವ ವಿಧಾನ. ಶರೀರ ಧರಿಸಿದ ಪರಮಾತ್ಮ ಶರೀರದ ಹೊರಗೆ ಇರುವ ಪರಮಾತ್ಮ ಇಬ್ಬರು ಒಬ್ಬರೇ. ಆದರೇ ಶರೀರದಲ್ಲಿರುವ ದೇವರು ಶರೀರದ ಹೊರಗೆ ಇರುವ ದೇವರನ್ನು ತಂದೆಯೆಂದಾಗ, ಶರೀರದ ಹೊರಗೆ ಇರುವ ದೇವರು ಶರೀರ ಧರಿಸಿ ಇರುವ ದೇವರನ್ನು ಕುಮಾರನು ಎಂದು ಹೇಳುತ್ತಿದ್ದಾನೆ. ಇಬ್ಬರು ಒಂದೇ ಆಗಿದ್ದು ತಂದೆ ಮಗನ ವರಸೆ ಏಕೆ ಹೇಳುತ್ತಿದ್ದಾರೊ ಯಾರಿಗೂ ತಿಳಿದಿಲ್ಲ. ಹಾಗೆ ಹೇಳುವುದರಿಂದ ಎಲ್ಲರೂ ಅವರಿಬ್ಬರು ಬೇರೆಬೇರೆ ಅವರು ಒಬ್ಬರು ತಂದೆ, ಒಬ್ಬರು ಮಗ ಹೇಳುತ್ತಿದ್ದಾರೆ. ತಂದೆ ಮಗ ಒಬ್ಬರೂ ಒಬ್ಬನೇ ಯೆಂದು ನಾನು ಹೊರತು ಗ್ರಂಥಗಳು ಓದಿದವರು ಕೂಡಾ ಹೇಳುತ್ತಿಲ್ಲ. ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ.

ಒಬ್ಬನು ಪ್ರತಿದಿನ ನಾಟಕ ನೋಡುತ್ತಾ ಇದ್ದನು. ಮತ್ತೊಬ್ಬನು ಆ ನಾಟಕದಲ್ಲಿ ಒಂದು ಪಾತ್ರದಲ್ಲಿ ನಟಿಸುತ್ತಿದ್ದನು. ನಾಟಕವನ್ನು ನೋಡುವವನಿಗೆ ನಾಟಕದಲ್ಲಿ ನಟಿಸುವವನು ಸ್ನೇಹಿತನು. ಆದರೇ ನಾಟಕ ನೋಡುವವನಿಗೆ ಅವನ ಸ್ನೇಹಿತನು ನಾಟಕದಲ್ಲಿ ಪಾತ್ರಧಾರನಾಗಿ ಇರುತ್ತಾನೆಂದು ತಿಳಿದಿಲ್ಲ.

ಆತನು ನಾಟಕದಲ್ಲಿ ಪಾತ್ರವನ್ನು ಪೋಷಿಸುತ್ತಿದ್ದೇನೆಂದು ಯಾವಾಗಲೂ ತನ್ನ ಸ್ನೇಹಿತನಿಗೆ ಹೇಳಲಿಲ್ಲ. ಎರಡು ಮೂರುಸಲ ನಾಟಕವನ್ನು ನೋಡಿದ ನಂತರ ನೋಡುವವನು ಪಾತ್ರಧಾರನನ್ನು ನೋಡಿ, ಅಪ್ಪಟ ತನ್ನ ಸ್ನೇಹಿತನಂತೆ ಇದ್ದಾನೆಂದು ಅಂದುಕೊಂಡಿದ್ದಾನೆ. ಮತ್ತೆ ಕೆಲವು ಬೇರೆಬೇರೆ ನಾಟಕಗಳನ್ನು ನೋಡಿ ಬೇರೆಬೇರೆ ಪಾತ್ರಗಳಲ್ಲಿ ನಟಿಸಿದವನು ತನ್ನ ಸ್ನೇಹಿತನಿಗೆ ಹತ್ತಿರ ಹೋಲಿಕೆಗಳಿವೆಯೆಂದು ಅಂದುಕೊಂಡಿದ್ದಾನೆ. ಆದರೇ ಹೊರಗೆ ಇರುವ ಸ್ನೇಹಿತನು, ನಾಟಕದಲ್ಲಿ ಇರುವ ಪಾತ್ರಧಾರನು ಒಬ್ಬನೇಯೆನ್ನುವ ವಿಷಯ ಆತನಿಗೆ ತಿಳಿದಿಲ್ಲ. ಒಂದುದಿನ ಸ್ನೇಹಿತನೊಂದಿಗೆ ಕೂಡಿ "ನಾನು ನಾಟಕಗಳನ್ನು ನೋಡುತ್ತಿದ್ದೇನೆ. ಅದರಲ್ಲಿ ಒಬ್ಬ ಮನುಷ್ಯ ಯಾವ ಪಾತ್ರಧಾರಿಯಾಗಿ ವೇಷ ಹಾಕಿದರೂ, ಅಚ್ಚು ಗುದ್ದಿದಂತೆ ನಿನ್ನಹಾಗೇ ಇದ್ದಾನೆ" ಎಂದು ತನ್ನ ಸ್ನೇಹಿತನೊಂದಿಗೆ ಹೇಳಿದಾಗ, ಆತನು ಅದಕ್ಕೆ ಸಮಾಧಾನವಾಗಿ ಹೀಗೆ ಹೇಳಿದ್ದಾನೆ. "ನಾಟಕದಲ್ಲಿನ ಪಾತ್ರಧಾರನು ನನ್ನ ಕುಮಾರನೇ. ಆದ್ದರಿಂದ ನನ್ನ ಹೋಲಿಕೆಗಳು ಕಾಣಿಸುತ್ತಿರುತ್ತವೆ. 15 ವರ್ಷಗಳ ಕೆಳಗೇ ಆತನು ಮನೆಬಿಟ್ಟುಹೋಗಿ ನಾಟಕಗಳ ಕಂಪನಿಯಲ್ಲಿ ಸೇರಿಹೋಗಿದ್ದಾನೆ. ಅಂದಿನಿಂದ ನಾಟಕದಲ್ಲಿಯೇ ಇದ್ದುಹೋಗಿದ್ದಾನೆ" ಎಂದು ಹೇಳಿದ್ದಾನೆ. ತಾನು ಪ್ರತಿ ನಾಟಕದಲ್ಲಿ ಅದರಲ್ಲಿನ ಪಾತ್ರದಲ್ಲಿಯೂ ನಟಿಸುತ್ತಿದ್ದೇನೆಂದು ಹೇಳಲಿಲ್ಲ. ಆತನ ಸ್ನೇಹಿತನು ತನ್ನ ಸ್ನೇಹಿತನ ಕುಮಾರನೇ ನಾಟಕಗಳಲ್ಲಿ ನಟಿಸುತ್ತಿದ್ದಾನೆಂದು ಪೂರ್ತಿಯಾಗಿ ಆತನ ಮಾತುಗಳನ್ನು ನಂಬಿದ್ದಾನೆ.

ಒಂದು ದಿನ ನಾಟಕ ನೋಡಲು ಹೋದ ಆತನು ನಾಟಕವೊಂದರ ರಂಗಸ್ಥಳದ ಹಿಂದಕ್ಕೆ ಹೋಗಿ ವೇಷದಲ್ಲಿರುವ ತನ್ನ ಸ್ನೇಹಿತನನ್ನು ಮಾತನಾಡಿಸಿ ನಿಮ್ಮ ತಂದೆ ನಾನು ಸ್ನೇಹಿತರೆಂದು ಹೇಳಿಕೊಂಡು "ನಿನ್ನೆಯೇ ನಾನು ನಿಮ್ಮ ತಂದೆಯನ್ನು ಬೇಟಿಯಾಗಿ ಮಾತನಾಡಿದಾಗ, ನನ್ನ ಕುಮಾರನು ನಾಟಕದಲ್ಲಿ ಕೆಲಸ ಮಾಡುತ್ತಿದ್ದಾನೆಂದು ಹೇಳಿದ್ದಾನೆ. ಆದ್ದರಿಂದ ಮಾತನಾಡಿಸುವುದಕ್ಕೆ ಬಂದಿದ್ದೇನೆ" ಎಂದು ಹೇಳಿದ್ದಾನೆ. ಆಗ ವೇಷದಲ್ಲಿರುವ ಆತನ ಸ್ನೇಹಿತನು

ಹೇಳಿರುವುದು ಕೇಳಿ "ತಂದೆಯವರು ಕೂಡಾ ನಿನ್ನನ್ನು ಕುರಿತು ಹೇಳಿದ್ದಾರೆ. ನೀವು ತಂದೆಯವರಿಗೆ ಒಳ್ಳೆಯ ಸ್ನೇಹಿತನಂತೆ" ಎಂದು ಹೇಳಿದ್ದಾನೆ. ಆಗ ಮಾತನಾಡುವವನು ತನ್ನ ಸ್ನೇಹಿತನ ಕುಮಾರನೆಂದು ನಾಟಕಗಳು ನೋಡುವವನು ಅಂದುಕೊಂಡಿದ್ದಾನೆ. ಆದರೇ ಹೊರಗಿರುವ ಸ್ನೇಹಿತನೇ ನಾಟಕದಲ್ಲಿ ವೇಷದ ಮೇಲೆ ಇದ್ದಾನೆಂದು, ಇಬ್ಬರು ಒಬ್ಬನೇಯೆಂದು ತಿಳಿಯಲಾರದೆ ಹೋಗಿದ್ದಾನೆ. ನಾಟಕದಲ್ಲಿ ಇರುವವನು ನಾನೇ ಹೊರಗೆ ಇದ್ದೇನೆಂದು ಹೇಳಲಿಲ್ಲ. ಹಾಗೇ ಹೊರಗೆ ಇರುವವನು ನಾನೇ ನಾಟಕದಲ್ಲಿ ಇರುವವನೆಂದು ಹೇಳಲಿಲ್ಲ. ನಾಟಕ ನೋಡುವವನು ಮಾತ್ರ ನಾಟಕದಲ್ಲಿ ತನ್ನ ಸ್ನೇಹಿತನ ಕುಮಾರನಿದ್ದಾನೆಂದು, ನಾಟಕದಲ್ಲಿ ಇರುವವನ ತಂದೆಯೇ ಹೊರಗೆ ತನ್ನ ಸ್ನೇಹಿತನೆಂದು ಅಂದುಕೊಂಡಿದ್ದಾನೆ. ಈ ರಹಸ್ಯ ನಾಟಕ ನೋಡುವವನಿಗೆ ತಿಳಿದಿಲ್ಲ. ನಾಟಕ ಹಾಕುವವನು ಹೊರಗಾಗಲಿ, ನಾಟಕದಲ್ಲಿ ಇರುವಾಗಾಗಲಿ ತನ್ನ ರಹಸ್ಯವನ್ನು ಹೇಳುವುದಿಲ್ಲ. ಹೀಗೆ ಎಷ್ಟುಕಾಲ ಕಳೆದರೂ ಆತನು ತಂದೆಯೇ, ಈತನು ಮಗನೇ. ನೋಡುವವನು ಇಬ್ಬರಿಗೂ ಪರಿಚಯಸ್ತನೇ ಆದರೆ ಇಬ್ಬರೂ ಒಬ್ಬರೇ ಎಂದು ಅವನಿಗೆ ತಿಳಿದಿಲ್ಲ.

ಈ ನಾಟಕದಲ್ಲಿನ ಪಾತ್ರದಂತೆ ಭಗವಂತನಿದ್ದಾನೆ. ಹಾಗೆ ಸ್ನೇಹಿತನಂತೆ ದೇವರಿದ್ದಾನೆ. ನಾಟಕ ನೋಡುವವರಂತೆ ಪ್ರಜೆಗಳಿದ್ದಾರೆ. ಶರೀರಧಾರಿಯಾದ ಭಗವಂತನು (ದೇವರು) ಶರೀರ ಧರಿಸದಂತೆ ಇರುವ ದೇವರು ಇಬ್ಬರೂ ಒಬ್ಬರೇಯೆನ್ನುವ ವಿಷಯ ಶರೀರ ಧಾರಿಯಾದ ಭಗವಂತನನ್ನು ಎದುರುಗಡೆ ನೋಡಿದರೂ ಗುರುತಿಸಲಾರದೆ ಹೋಗಿದ್ದಾರೆ. ಇದು ಅದೇ ಕೆಲಸವಾಗಿ ದೇವರು ಆಡುವ ನಾಟಕ. ನೋಡುವ ಜೀವಿಗೆ ನಾಟಕ ಏನೊ? ಆಡುವವರು ಏನೊ? ಕಾಣಿಸದೆ ಆಡಿಸುವವರು ಏನೊ? ಅರ್ಥವಾಗದೆ ಹುಚ್ಚು ಹಿಡಿದು ಅವರನ್ನು ಕುರಿತು ಒಬ್ಬೊಬ್ಬನು ಒಂದೊಂದು ವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ. ಇರುವುದು ಕಾಣಿಸುವ ದೇವರು ಒಬ್ಬನು, ಕಾಣಿಸದ ದೇವರು ಒಬ್ಬನು ಇಬ್ಬರಿರುವಂತೆ ಇದ್ದರೂ ಇರುವುದು ಮಾತ್ರ ಒಬ್ಬ ದೇವರೇ. ಅದೇ ವಿಷಯವೇ ದೈವ ಗ್ರಂಥಗಳಲ್ಲಿ ಕೂಡಾ ಹೇಳಲ್ಪಟ್ಟಿದೆ.

**ಪ್ರಶ್ನೆ :- ದೇವರ ಮನುಷ್ಯರಿಗೆ ಸುಳ್ಳನ್ನು ಹೇಳಿ ಅದೇ ಕೆಲಸವಾಗ ಮೋಸ ಮಾಡಿದಂತೆ ಅಲ್ಲವೆ! ಹೀಗೆ ಕೇಳುತ್ತಿದ್ದೇನೆಂದು ಏನು ಅಂದುಕೊಳ್ಳಬೇಡಿ. ನ್ಯಾಯಬದ್ಧವಾಗಿ ಹೇಳಿದರೆ ದೇವರದ್ದು ಅನ್ಯಾಯವೇ ಆಗುತ್ತದೆ ಅಲ್ಲವೆ! ಆತನನ್ನು ಕಂಡುಕೊಳ್ಳುವುದಕ್ಕೆ ಯಾವ ಆಧಾರ ಇಲ್ಲದಂತೆ ಮಾಡಿದ್ದಾನೆ ಅಲ್ಲವೆ! ಹಾಗೆ ನಾಟಕವಾಡಿ, ಮೋಸ ಮಾಡಿ ಕೊನೆಯಲ್ಲಿ ಒಗ್ಗರಣೆ ಇಟ್ಟಂತೆ ನನ್ನನ್ನು ಕಂಡುಕೊಂಡವನಿಗೆ, ನನ್ನ ಕೆಲಸಗಳು ತಿಳಿದವನಿಗೆ ಮೋಕ್ಷ ಲಭಿಸುತ್ತದೆಂದು ಹೇಳಿದ್ದಾನೆ. ಕಂಡುಕೊಳ್ಳುವುದಕ್ಕೆ ಆಧಾರವೇ ಇಲ್ಲದಿರುವಾಗ ಹೇಗೆ ತಿಳಿಯಲಾ ಗುತ್ತದೆ? ಇದು ಅನ್ಯಾಯ ಅಲ್ಲವೆ?**

**ಉತ್ತರ :-** ದೇವರು ಎಂದೂ ಮೋಸ ಮಾಡಲಿಲ್ಲ. ಹಾಗೆ ಯಾರಿಗೂ ಅನ್ಯಾಯವನ್ನು ಮಾಡಲಿಲ್ಲ. ದೇವರು ಯಾವಾಗಲೋ ಲಕ್ಷಗಳ ವರ್ಷ ಗಳಿಗೊಂದು ಸಲ ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ. ಹಾಗೆ ಬಂದಾಗ ಮಾತ್ರವೇ ತನ್ನನ್ನು ಗುರುತಿಸದಂತೆ ತಂದೆಯೆಂದು ಮತ್ತೊಬ್ಬ ದೇವರನ್ನು ಹೇಳಿದಂತೆ ಹೇಳುತ್ತಿದ್ದಾನೆ. ದೇವರು ಕೂಡಾ ಬಂದವನು ಬೇರೆ ಎನ್ನುವಂತೆ ಭಗವಂತನಾಗಿ ಕಾಣಿಸುವವನನ್ನು ಕುಮಾರನೆಂದು ಹೇಳಿದ್ದಾನೆ. ಭಗವಂತನು ಬಾರದಮುನ್ನ ದೈವಗ್ರಂಥಗಳಲ್ಲಿ ದೇವರನ್ನು ಕುರಿತಾದ ಜ್ಞಾನವನ್ನು ಸಂಪೂರ್ಣವಾಗಿ ಹೇಳಿದ್ದಾರೆ. ಅಲ್ಲಿಯವರೆಗು ಸಂಪೂರ್ಣವಾಗಿ ಹೇಳಿರುವ ಜ್ಞಾನ ಭಗವಂತನು ಬಂದಾಗ ಏಕೆ ಅರ್ಥವಾಗಲಿಲ್ಲ? ಏಕೆ ಜ್ಞಾಪಕ ಬರಲಿಲ್ಲ? ದೇವರು ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ಮನುಷ್ಯನಾಗಿ ಬರುತ್ತೇನೆಂದು ಭಗವದ್ಗೀತೆಯಲ್ಲಿಯೇ ಹೇಳಿರುವಾಗ ಆಗ ಹೇಳಿರುವವನೇ ಈಗ ಬಂದಿದ್ದಾನೆಂದು ಏಕೆ ಅಂದುಕೊಳ್ಳಲಿಲ್ಲ? ಇದೆಲ್ಲವೂ ನಮ್ಮ ಅಜ್ಞಾನವೇ ಅಲ್ಲವೆ!

ನಾಟಕ ವೇಷ ವಿಷಯಕ್ಕೆ ಬಂದರೆ ಸ್ನೇಹಿತನೇ ಪಾತ್ರಧಾರನೆಂದು, ಪಾತ್ರಧಾರನೇ ಸ್ನೇಹಿತನೆಂದು ತಿಳಿಯುವಂತೆ ಆಧಾರಗಳು ಇವೆ. ಆದರೇ ನಾಟಕವನ್ನು ನೋಡುವವನು ಆ ಆಧಾರವನ್ನು ಉಪಯೋಗಿಸಿಕೊಂಡು

ನೋಡಲಿಲ್ಲ. ಒಂದು ದಿನ ನಾಟಕವನ್ನು ನೋಡುವವನು ಊರಿನಲ್ಲಿನ ತನ್ನ ಸ್ನೇಹಿತನ ಮನೆಗೆ ಹೋದಾಗ ಅಲ್ಲಿಯೇ ಭೋಜನ ಮಾಡುವುದು ನಡೆದಿದೆ. ಇಬ್ಬರೂ ಒಂದೇ ಪಂಕ್ತಿಯಲ್ಲಿ, ಒಂದೇಸಲ ಊಟ ಮಾಡಿದ್ದಾರೆ. ಆಗ ನೋಡುವವನ ಸ್ನೇಹಿತನು ನೀರು ಕುಡಿಯುತ್ತಿರುವಾಗ ಬಿಕ್ಕಳಿಕೆ ಬಂದಿವೆ. ಆಗ ಆತನು ನೀರು ಕುಡಿಯುವುದಕ್ಕೆ ಸ್ವಲ್ಪ ಕಷ್ಟಪಟ್ಟಿದ್ದಾನೆ. ಆಗ "ನಾನು ಯಾವಾಗ ನೀರು ಕುಡಿದರೂ ಬಿಕ್ಕಳಿಕೆ ಬರುತ್ತವೆ. ದೇಶದಲ್ಲಿ ಯಾರಿಗೂ ಈ ರೋಗವಿಲ್ಲ. ನನಗೊಬ್ಬನಿಗೆ ಈ ರೋಗವಿದೆಯೆಂದು" ನಾಟಕವನ್ನು ನೋಡುವ ಸ್ನೇಹಿತನೊಂದಿಗೆ ಹೇಳಿದ್ದಾನೆ. ಆಗ ಆತನ ಸ್ನೇಹಿತನು ಕೂಡಾ ತನಗೆ ಹಾಗಿರುವುದಕ್ಕೆ ಸಹಾನುಭೂತಿಯನ್ನು ತೋರಿಸಿಹೋಗಿದ್ದಾನೆ. ತಿಂಗಳ ನಂತರ ಸತ್ಯಹರಿಶ್ಚಂದ್ರ ನಾಟಕದಲ್ಲಿ ವೀರಬಾಹುನ ಪಾತ್ರವನ್ನು ಧರಿಸಬೇಕಾಗಿಬಂದಿದೆ. ಆಗ ನಾಟಕ ನೋಡುವವನು ಕೂಡಾ ನಾಟಕಕ್ಕೆ ಹೋಗಿದ್ದಾನೆ. ನಾಟಕ ನಡೆಯುತ್ತಿರುವಾಗ ನಾಟಕದಲ್ಲಿ ವೀರಬಾಹು ಬಂದು ಹೆಂಡ ಕುಡಿಯುತ್ತಾ ಕೆಲವು ಮಾತುಗಳು ಹೇಳಬೇಕಾಗಿದೆ. ಆಗ ವೀರಬಾಹು ವೇಷದಲ್ಲಿ ಬಂದಿರು ವುದು ತನ್ನ ಸ್ನೇಹಿತನೇ ಎಂದು ನೋಡುವವನಿಗೆ ಹೇಗೂ ತಿಳಿದಿಲ್ಲ. ಆಗ ವೀರಬಾಹು ಮಜ್ಜಿಗೆಯನ್ನು ಹೆಂಡದಂತೆ ಕಾಣಿಸುವ ಹಾಗೆ ಮಾಡಿ ಕುಡಿಯುತ್ತಿರುವಾಗ ನೀರು ಕುಡಿಯುವಾಗ ಬಿಕ್ಕಳಿಕೆ ಬಂದಂತೆ ವೇಷದಲ್ಲಿ ಇರುವವನಿಗೆ ಬಿಕ್ಕಳಿಕೆ ಬಂದಿವೆ. ಆಗ ಅದನ್ನು ನೋಡಿದವನು ತನ್ನ ಸ್ನೇಹಿತನಿಗಿರುವ ರೋಗವೇ ಆತನ ಮಗನಿಗೆ ಕೂಡಾ ಇದೆಯೆಂದು ಅಂದು ಕೊಂಡಿದ್ದಾನೆ ಆದರೆ, ಆತನೇ ತನ್ನ ಸ್ನೇಹಿತನೆಂದು ಆಗಲೂ ಕೂಡಾ ಕಂಡು ಕೊಳ್ಳಲಿಲ್ಲ. ಬೆಳಗ್ಗೆ ತನ್ನ ಸ್ನೇಹಿತನು ನೀರನ್ನು ಕುಡಿಯುವಾಗ ಬಿಕ್ಕಳಿಕೆ ಬಂದರೆ ಬಾಧೆಪಡುತ್ತಾ ಈ ರೋಗ ನನಗೆ ಹೊರತು ಭೂಮಿಮೇಲೆ ಯಾರಿಗೂ ಇಲ್ಲ ಎಂಬಮಾತನ್ನು ಸ್ವತಃವಾಗಿ ಕೇಳಿ ಕೂಡಾ ಈ ರೋಗ ನನ್ನ ಸ್ನೇಹಿತನಿಗೆ ಒಬ್ಬನಿಗೆ ಇದೆ ಅಲ್ಲವೆ! ಎಂದು ವೇಷಧಾರಣೆಯಲ್ಲಿ ಇರುವವನೇ ನನ್ನ ಸ್ನೇಹಿತನೆಂದು ಅಂದುಕೊಳ್ಳದೆ ಆತನ ಕುಮಾರನಿಗು ಕೂಡಾ ಅದೇ ರೋಗ ಇದೆಯೇ! ಎಂದು ಅಂದುಕೊಂಡಿದ್ದಾನೆ. ಆತನ ಕುಮಾರನಿಗೆ ಇದ್ದರೆ ನನಗೆ

ಹೊರತು ಭೂಮಿಮೇಲೆ ಯಾರಿಗೂ ಇಲ್ಲವೆಂದು ಏಕೆ ಹೇಳಿದ್ದಾನೆಂದು ಸ್ವಲ್ಪವಾದರೂ ಅಂದುಕೊಳ್ಳಲಿಲ್ಲ, ತನ್ನನ್ನು ಗುರುತಿಸುವುದಕ್ಕೆ ಬಿಕ್ಕಳಿಕೆಗಳನ್ನು ಎರಡುಕಡೆ ಕಾಣಿಸುವಂತೆ ಮಾಡಿದರೂ, ಗುರುತು ಹಿಡಿಯದೇ ಹೋಗುವುದು ನೋಡುವವನಿಗೆ ತಿಳುವಳಿಕೆ ಇಲ್ಲವೆನ್ನಬೇಕಾ? ನಾಟಕ ಹಾಕುವವನ ಮೋಸ ಎನ್ನುತ್ತೀಯಾ?

ಒಗಟು ಕಥೆಗಳಲ್ಲಿ ವಿಷಯವನ್ನು ಬಚ್ಚಿಟ್ಟು ಹೇಳಿದರೂ ಅದಕ್ಕೆ ಸಂಬಂಧಿಸಿದ ಎಲ್ಲಾ ಆಧಾರಗಳನ್ನು ಹೇಳುತ್ತಾರೆ. ಆಗ ಹೇಳಿದ ಆಧಾರಗಳನ್ನು ಗಮನಿಸಿ ಒಗಟುಕಥೆಯಲ್ಲಿ ಬಚ್ಚಿಟ್ಟು ಹೇಳಿರುವುದನ್ನು ಕಂಡುಕೊಳ್ಳಬಹುದು. ಯಾವ ಆಧಾರಗಳನ್ನು ಹೇಳದಂತೆ ವಿಷಯವನ್ನು ಬಚ್ಚಿಟ್ಟು ಕೇಳಿದರೆ ಅದು ಮೋಸ, ಅನ್ಯಾಯ ಆಗುತ್ತದೆ. ಹಾಗಲ್ಲದೆ ಗುರುತುಗಳೆಲ್ಲ ಹೇಳಿದರೂ ಕಂಡುಕೊಳ್ಳಲಾರದೆ ಹೋದರೆ ಅದನ್ನು ಕೇಳುವವನ ತಿಳುವಳಿಕೆ ಇಲ್ಲದ ಕೆಲಸವೆಂದು ಹೇಳಬಹುದು. ತಾಯಿ ಪೀಚು ಪೀಚು, ತಂದೆ ಮುತ್ತು" ಎಂದು ಮುಸುಕಿನಜೋಳದ ತೆನೆಯ ಹೆಸರು ಹೇಳದಂತೆ ಅದರ ಹೆಸರು ಬಚ್ಚಿಟ್ಟು ಹೇಳಿದರೆ ಅದಕ್ಕೆ ಸಂಬಂಧಿಸಿದ ಆಧಾರಗಳು ತಾಯಿ ಪೀಚು ಪೀಚು ತಂದೆ ಮುತ್ತುಗಳು ಎಂದು ಹೇಳಿರುವುದರಿಂದ ತಿಳುವಳಿಕೆಯುಳ್ಳವನು ತಕ್ಷಣ ಮುಸುಕಿನಜೋಳದ ತೆನೆಯೆಂದು ಗುರುತಿಸುತ್ತಾನೆ. ತಿಳುವಳಿಕೆ ಇಲ್ಲದವನು ಗುರುತಿಸಲಾರನು. ಹಾಗೆಯೇ ದೇವರ ವಿಷಯಗಳು ದೈವ ಗ್ರಂಥಗಳಲ್ಲಿ ಹೇಳಿದ್ದರೂ, ನಾಟಕದಲ್ಲಿ ಬಿಕ್ಕಳಿಕೆ ನೋಡಿದರೂ ಯಾವ ಪ್ರಯೋಜನೆ ಇಲ್ಲದಂತೆ ಹೋಗಿದೆ. ಗ್ರಂಥಗಳ ಜ್ಞಾನವನ್ನು ಅನುಸರಿಸಿ ಭಗವಂತನನ್ನು ತಿಳಿಯಲಾರದೆ ಹೋಗಿದ್ದಾರೆ. ಹಾಗೇ ಬಿಕ್ಕಳಿಕೆಗಳನ್ನು ನೋಡಿ ವೇಷಧಾರಿಯನ್ನು ಕಂಡುಕೊಳ್ಳದಹಾಗೆ ಇತ್ತ ಶರೀರಧಾರಿಯಾದ ದೇವರನ್ನಾಗಲಿ, ಅತ್ತ ಶರೀರಧಾರಿ ಅಲ್ಲದಂತಹ ದೇವರನ್ನಾಗಲಿ ಮನುಷ್ಯರಾದವರು ತಿಳಿಯಲಾರದೆ ಹೋಗುವುದು ಮನುಷ್ಯರ ಅಜ್ಞಾನವೇ ಹೊರತು ದೇವರ ಮೋಸ ಅಲ್ಲ. ದೇವರು ಅನ್ಯಾಯ ಮಾಡಲಿಲ್ಲ.

ದೈವಗ್ರಂಥದಲ್ಲಿ "ನಾನು ನನ್ನ ತಂದೆ ಬೆರೆತಿದ್ದೇವೆ" ಎಂದು ಹೇಳಿದಾಗ ಇಬ್ಬರು ಒಂದೇಯೆಂದು ಅರ್ಥ ಅಲ್ಲವೆ! ಈ ವಿಷಯವನ್ನು ಇಂಜೀಲು ಗ್ರಂಥದಲ್ಲಿ...

**(ಯೋಹಾನ್ 8–28) "ಯೇಸು ನೀವು ಮನುಷ್ಯ ಕುಮಾರನನ್ನು ಮೇಲಕ್ಕೆ ಎತ್ತಿದಾಗ ನಾನೇ ಆತನೆಂದು ನನ್ನಷ್ಟಕ್ಕೆ ನಾನೇ ಏನೂ ಮಾಡದೆ ತಂದೆ ನನಗೆ ಕಲಿಸಿದಂತೆ ಈ ಸಂಗತಿಗಳನ್ನು ಮಾತನಾಡುತ್ತಿದ್ದೇನೆಂದು ನೀವು ಗ್ರಹಿಸುತ್ತೀರ."**

**(ಯೋಹಾನ್–10–30) "ನಾನೂ ತಂದೆಯೂ ಏಕವಾಗಿದ್ದೇವೆಂದು ಅವರೊಂದಿಗೆ ಹೇಳಿದನು."**

**(ಯೋಹಾನ್–14–10,11) "ತಂದೆಯಲ್ಲಿ ನಾನು ನನ್ನಲ್ಲಿ ತಂದೆಯು ಇದ್ದೇವೆಂದು ನೀನು ನಂಬುತ್ತಿಲ್ಲವಾ? ನಾನು ನಿಮ್ಮೊಂದಿಗೆ ಹೇಳುತ್ತಿರುವ ಮಾತುಗಳು ನನ್ನಷ್ಟಕ್ಕೆ ನಾನೇ ಹೇಳುತ್ತಿಲ್ಲ. ತಂದೆ ನನ್ನಲ್ಲಿ ನಿವಾಸಿಸುತ್ತಾ ತನ್ನ ಕ್ರಿಯೆಗಳು ಮಾಡುತ್ತಿದ್ದಾನೆ. ತಂದೆಯಲ್ಲಿ ನಾನೂ ನನ್ನಲ್ಲಿ ತಂದೆಯು ಇದ್ದೇವೆಂದು ನಂಬಿರಿ ಇಲ್ಲವೆ ಈ ಕ್ರಿಯೆಗಳ ನಿಮಿತ್ತವಾದರೂ ನನ್ನನ್ನು ನಂಬಿರಿ."**

ಈ ಮೂರು ವಾಕ್ಯಗಳಲ್ಲಿ "ಪರಮಾತ್ಮನಾದ ತಂದೆ ತನ್ನಲ್ಲಿ ಇದ್ದಾನೆಂದು" ಶರೀರಧಾರಿಯಾದ ದೇವರು ಹೇಳಿದ್ದಾನೆ. ಶರೀರಧಾರಿಯಾದ ದೇವರು ಬೇರೆ, ಪರಮಾತ್ಮ (ಪರಿಶುದ್ಧಾತ್ಮ) ಎನ್ನುವ ದೇವರು ಬೇರೆ ಎಂದು ಅಂದುಕೊಳ್ಳದೆ ಇಬ್ಬರು ಒಂದೇಯೆಂದು ನಡೆಯುವ ಕೆಲಸಗಳೆಲ್ಲ ಆತನ ಆಜ್ಞೆಯಿಂದ ಮಾಡುವವೇಯೆಂದು ಶರೀರವನ್ನು ಧರಿಸಿದ ಭಗವಂತನು ಹೇಳಿದ್ದಾನೆ. ಹೀಗೆ ಎಷ್ಟೋ ಕಾಲದಿಂದ ಹೇಳುತ್ತಿದ್ದರೂ ಈ ಮಾತುಗಳನ್ನು ಲೆಕ್ಕಮಾಡದೆಹೋದರೆ ದೇವರು ಯಾವಾಗಾದರೂ ಶರೀರಧಾರಿಯಾಗಿ ಬಂದಾಗ ಆತನನ್ನು

ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಕೆಲವು ಸಾವಿರ ವರ್ಷಗಳಿಗೊ, ಕೆಲವು ಲಕ್ಷಗಳ ವರ್ಷಗಳಿಗೊ ಯಾವುದೋ ಒಂದು ಯುಗದಲ್ಲಿ ದೇವರು ಶರೀರ ಧಾರಿಯಾಗಿ ಬರುತ್ತಾನೆ. ಆಗ ದೇವರು ಹೇಳಿದ ಜ್ಞಾನವನ್ನು ತಿಳಿಯದ ಮನುಷ್ಯರು ದೇವರನ್ನು ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ.

**ಪ್ರಶ್ನೆ :– ನೀವು ಹೇಳಿದಂತೆ ಯೇಸು ದೇವರ ಅವತಾರವೇ ಆದರೆ, ಮತ್ತು ಕೃಷ್ಣನು ದೇವರ ಅವತಾರವೇ ಆದರೇ ಕೃಷ್ಣನು ಬಂದ ನಂತರ ಮೂರುಸಾವಿರ ವರ್ಷಗಳಿಗೆ ಯೇಸು ಬಂದಿದ್ದಾನೆ. ಯೇಸು ಹೋಗುತ್ತಾ ಆದರಣಕರ್ತ ಬರುತ್ತಾನೆಂದು ಹೇಳಿಹೋಗಿದ್ದಾನೆ. ಆತನು ಇಲ್ಲಿಯವರೆಗು ಬಂದಿದ್ದಾನೊ ಇಲ್ಲವೊ ತಿಳಿದಿಲ್ಲ. ನಿಮ್ಮ ಮಾತಿನ ಮೇಲೆ ನಮಗೆ ನಂಬಿಕೆ ಇಲ್ಲ. ಆದರಣಕರ್ತ ಬಂದಿದ್ದಾನಾ, ಬರಲಿಲ್ಲವಾ, ಬಂದು ಹೋಗಿದ್ದಾನಾ? ಈ ಪ್ರಶ್ನೆಗಳಿಗೆ ಉತ್ತರ ಹೇಳಿರಿ. ಇದು ಕಷ್ಟಕರವಾದ ಪ್ರಶ್ನೆ ಆದರೂ ನೀವು ದೊಡ್ಡ ಜ್ಞಾನಿಗಳು ನಿಮ್ಮ ಮಾತನ್ನು ನಾವು ವಿಶ್ವಾಸಿಸುತ್ತೇವೆ. ನೀವು ನಮ್ಮ ಮೇಲೆ ದಯೆತೋರಿಸಿ ಉತ್ತರ ಹೇಳಿರಿ.**

**ಉತ್ತರ :–** ನನ್ನನ್ನು ಇಕ್ಕಟ್ಟಿನಲ್ಲಿಡುವ ಪ್ರಶ್ನೆ ಕೇಳಿ ನಿಮ್ಮ ಮೇಲೆ ವಿಶ್ವಾಸವಿದೆ ಹೇಳಿರಿ ಎಂದರೇ ನಾನು ಹೇಗೆ ಹೇಳುತ್ತೇನೆ! ನೀವು ಕೇಳಿದ ಪ್ರಶ್ನೆಗೆ ಉತ್ತರ ಹೇಳುವ ಸಾಮರ್ಥ್ಯ ನನ್ನ ಬಳಿ ಇದೆಯೆಂದು ನನಗೆ ನಂಬಿಕೆಯಿಲ್ಲ. ನೀವು ಕೇಳಿದ್ದೀರ ಆದ್ದರಿಂದ ನಾನು ಹೇಳುತ್ತೇನೆ. ನಿಮ್ಮ ನಂಬಿಕೆಯನ್ನು ಹುಸಿಯಾಗ ದಂತೆ ಹೇಳುತ್ತೇನೆ ಆದರೆ ನಾನು ಹೇಳುವುದು ಸತ್ಯವಾಗಬಹುದು, ಅಸತ್ಯ ವಾಗಬಹುದು. ಆದರಣಕರ್ತ ಇದಕ್ಕುಮುಂಚೆ ಬರಲಿಲ್ಲ. ನಂತರ ಕೂಡಾ ಬರುವುದಿಲ್ಲ. ನನಗೆ ತಿಳಿದಿರುವುದು ಇದು. ಯೇಸು ಏನೋ ಬರುತ್ತಾನೆಂದು ಹೇಳಿದ್ದಾನೆ. ನಾನು ಹೇಳುವುದು ಇದಕ್ಕು ಮುಂಚೆ ಬರಲಿಲ್ಲ ನಂತರ ಕಾಲದಲ್ಲಿ ಕೂಡಾ ಬರುವುದಿಲ್ಲ. ಇದರ ಪ್ರಕಾರ ಯೇಸು ಹೇಳಿದ ಮಾತಿಗು ನನ್ನ ಮಾತಿಗು ಎಷ್ಟೋ ವ್ಯತ್ಯಾಸ ಇದೆ. ಯೇಸು ದೇವರು ಆದ್ದರಿಂದ ಆತನ ಮಾತನ್ನೇ ನಂಬಿರಿ. ನನ್ನ ಮಾತನ್ನು ನಂಬಬೇಡಿರಿ.

**ಪ್ರಶ್ನೆ :–ನೀವು ಸತ್ಯವಾಗಿ ಯಾವುದನ್ನು ಹೇಳುತ್ತೀರಾ?**

**ಉತ್ತರ :–** ನಾನು ಹೇಳುವವೆಲ್ಲ ಸತ್ಯಗಳೇಯೆಂದು ಹೇಳುತ್ತೇನೆ. ಯಾರಿಗವರು ತಾವು ಹೇಳುವುದು ಸತ್ಯವೆಂದೇ ಹೇಳುತ್ತಿರುತ್ತಾರೆ.

**ಪ್ರಶ್ನೆ:– ದೇವರ ವಿಷಯದಲ್ಲಿ ಸತ್ಯವನ್ನು ಹೇಳುತ್ತಾರಾ?**

**ಉತ್ತರ :–** ಮೇಲಿನ ಪ್ರಶ್ನೆಗಳಿಗೆ ನಾನು ಹೇಳಿರುವವೆಲ್ಲ ಸತ್ಯವೇಯೆಂದು ಹೇಳಿದ್ದೇನೆ ಅಲ್ಲವೆ!

**ಪ್ರಶ್ನೆ:– ನಾವು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇವೆ. ನೀವು ಖಚಿತವಾದ ಉತ್ತರ ಹೇಳಿರಿ. ನೀವು ದೊಡ್ಡ ಜ್ಞಾನಿಯೆಂದು ನಾವು ಅಂದುಕೊಳ್ಳುತ್ತಿದ್ದೇವೆ. ವಾಸ್ತವವಾಗಿ ನಿಮ್ಮನ್ನು ಮೀರಿದ ಜ್ಞಾನಿ ಇದ್ದಾನಾ?**

**ಉತ್ತರ :–** ನೀವು ನನ್ನನ್ನು ಜ್ಞಾನಿ ಎಂದರೂ, ದೊಡ್ಡ ಜ್ಞಾನಿ ಎಂದರೂ ನೀವು ಹೇಳುವುದನ್ನು ನಾನು ಒಪ್ಪಿಕೊಳ್ಳುವುದಿಲ್ಲ. ಒಂದುವೇಳೆ ನಾನು ಜ್ಞಾನಿಯೆಂದು ಹೇಳಿದರೂ ಇತರರು ಒಪ್ಪಿಕೊಳ್ಳುವುದಿಲ್ಲ. ವಾಸ್ತವವಾಗಿ ಹೇಳಬೇಕೆಂದರೆ ನಾನು ಯೋಗಿ, ಯೋಗೀಶ್ವರನೆಂದು ಹೆಸರು ಇಟ್ಟು ಕೊಂಡಿದ್ದೇನೆ. ಈ ದಿನ ನೀವು ನನ್ನನ್ನು ಜ್ಞಾನಿ ಎಂದರೇ ಹೇಗೆ ಒಪ್ಪಿಕೊಳ್ಳಬೇಕು. ನಾನು ಯೋಗಿ ಎಂದು ಮಾತ್ರ ಒಪ್ಪಿಕೊಳ್ಳುತ್ತೇನೆ.

**ಪ್ರಶ್ನೆ :–ನೀವು ದೇವರನ್ನು ನಂಬುತ್ತೀರಾ?**

**ಉತ್ತರ :–** ನಾನು ದೇವರನ್ನು ನಂಬುವುದಿಲ್ಲ. ದೇವರ ಜ್ಞಾನವನ್ನು ನಂಬುತ್ತೇನೆ.

**ಪ್ರಶ್ನೆ :– ನೀವು ಯಾರನ್ನು ನಂಬುತ್ತೀರಾ?**

**ಉತ್ತರ :–** ಯಾರನ್ನು ನಂಬುವುದಿಲ್ಲ. ನಂಬಬೇಕಾದ ಅವಶ್ಯಕತೆ ನಿಮಗೇ ಹೊರತು ನನಗೆ ಇಲ್ಲ.

**ಪ್ರಶ್ನೆ :– ನೀವು ದೇವರನ್ನು ನಂಬುವುದಿಲ್ಲವೆಂದು ಹೇಳುತ್ತಿದ್ದೀರ. ಒಳ್ಳೆಯದೇ ಆದರೆ ದೇವರನ್ನು ಕುರಿತು, ದೇವರ ಜ್ಞಾನವನ್ನು ಕುರಿತು ನೀವು ಗ್ರಂಥಗಳನ್ನು ಬರೆದಿದ್ದೀರ. ಇಲ್ಲಿಗೆ ಸುಮಾರು 85 ಗ್ರಂಥಗಳನ್ನು ಮುದ್ರಣೆ ಮಾಡಿಸಿದ್ದೀರ. ದೇವರನ್ನು ನಂಬದಿರುವಾಗ ನೀವು ಗ್ರಂಥಗಳನ್ನು ಏಕೆ ಬರೆಯುತ್ತಿದ್ದೀರ?**

**ಉತ್ತರ :–** ನಿಮಗೆ ದೇವರ ಜ್ಞಾನವನ್ನು ಕುರಿತು, ದೇವರನ್ನು ಕುರಿತು ತಿಳಿಯಬೇಕೆಂದು ಬರೆಯುತ್ತಿದ್ದೇವೆ.

**ಪ್ರಶ್ನೆ :– ನೀವು ದೇವರನ್ನು ನಂಬುವುದಿಲ್ಲ ಅಲ್ಲವೆ! ಹಾಗಿರುವಾಗ ದೇವರ ಜ್ಞಾನ ಹೇಗೆ ಬರೆಯುತ್ತೀರಾ?**

**ಉತ್ತರ :–** ನಾನು ದೇವರನ್ನು ನಂಬದಿರುವ ಮಾತು ವಾಸ್ತವವೇ! ಆದರೇ ನನಗೆ ಜ್ಞಾನ ತಿಳಿದಿಲ್ಲವೆಂದು ಹೇಳಿದ್ದೇನಾ? ಇಲ್ಲವಲ್ಲ! ನನಗೆ ದೇವರ ಜ್ಞಾನ ತಿಳಿದಿದೆ. ಆದ್ದರಿಂದ ನೀವು ಕೂಡಾ ತಿಳಿಯುವುದಕ್ಕೆ ಗ್ರಂಥಗಳನ್ನು ಬರೆದಿದ್ದೇನೆ. ಅದರಲ್ಲಿ ತಪ್ಪು ಇಲ್ಲವಲ್ಲ!

**ಪ್ರಶ್ನೆ :– ನೀವು ನಮಗೆ ಅರ್ಥವಾಗದಂತೆ ಮಾತನಾಡುತ್ತಿದ್ದೀರ. ನಿಮ್ಮನ್ನು ನಾವು ಏನೆಂದುಕೊಳ್ಳಬೇಕು? ಜ್ಞಾನಿ ಎಂದು ಅಂದುಕೊಳ್ಳಬೇಕಾ? ಅಜ್ಞಾನಿ ಎಂದು ಅಂದುಕೊಳ್ಳಬೇಕಾ? ನೀವೆ ಹೇಳಿರಿ.**

**ಉತ್ತರ :–** ನಾನು ಮೊದಲೇ ಹೇಳಿದ್ದೇನೆ. ನಾನು ಜ್ಞಾನಿಯೂ ಅಲ್ಲ, ಅಜ್ಞಾನಿಯೂ ಅಲ್ಲ. ನಾನು ಯೋಗಿ ಮಾತ್ರವೇ.

**ಪ್ರಶ್ನೆ :– ಇಷ್ಟಕ್ಕು ನೀವು ನಮಗೆ ಏನು ಹೇಳಬೇಕೆಂದುಕೊಂಡಿದ್ದೀರ?**

**ಉತ್ತರ :–** ಮೂರು ದೈವ ಗ್ರಂಥಗಳನ್ನು ನೀವು ಹತ್ತಿರ ಇಟ್ಟುಕೊಂಡು ಮೂರನ್ನು ಗೌರವ ಭಾವನೆಯಿಂದ ಓದಿರೆಂದು ಹೇಳುತ್ತಿದ್ದೇನೆ. ಮೂರು ದೈವಗ್ರಂಥಗಳು ಸೇರಿದರೆ ಸಿಂಹದ ಅವಯವಗಳೆಲ್ಲವೂ ಒಂದು ಕಡೆ ಸೇರಿ ಸಜೀವವಾದ ಸಿಂಹವಾಗುತ್ತದೆ. ಗ್ರಂಥರೂಪದಲ್ಲಿರುವ ಸಿಂಹ ಮಾಯೆಯನ್ನು, ಅಧರ್ಮಗಳನ್ನು

ಇಲ್ಲದಂತೆ ಮಾಡಬಲ್ಲದು. ಯಾವ ಮತಸ್ಥನಾದರೂ ಮೂರು ದೈವಗ್ರಂಥಗಳನ್ನು ಗೌರವ ಭಾವನೆಯಿಂದ ಓದಿದಾಗ ಮೂರು ಗ್ರಂಥಗಳ ಜ್ಞಾನ ಅರ್ಥವಾಗುತ್ತದೆ. ಆಗ ನೀನು ನಿನ್ನ ಮತದಲ್ಲಿ ಇರುವಂತೆ ಲೆಕ್ಕಿಸಲ್ಪಡುತ್ತದೆ. ಮೂರು ಗ್ರಂಥಗಳ ಸಾರವಾದ ಜ್ಞಾನ ತಿಳಿಯದೆ ಹೋದರೆ ಅವನು ಯಾವ ಧರ್ಮದಲ್ಲಿ ಇಲ್ಲದಂತಾಗುತ್ತದೆ. ಈ ವಿಷಯ ಅಂತಿಮ ದೈವಗ್ರಂಥ ಖುರ್‌ಆನ್ ಸೂರಾ 5, ಆಯತ್ 68 ರಲ್ಲಿ ಹೇಳಲ್ಪಟ್ಟಿದೆ ನೋಡಿರಿ.

**(5–68) "ಓ ಗ್ರಂಥವಾಹಕರೇ! ನೀವು ತೌರಾತನ್ನು (ಭಗವದ್ಗೀತೆಯನ್ನು) ಇಂಜೀಲನ್ನು (ಬೈಬಲ್ ಗ್ರಂಥವನ್ನು), ನೀಮ್ಮ ದೇವರ ಕಡೆಯಿಂದ ನಿಮ್ಮ ಹತ್ತಿರಕ್ಕೆ ಬಂದಿರುವ ಖುರ್‌ಆನ್ ಗ್ರಂಥವನ್ನು ನಿಮ್ಮ ಜೀವನದಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೆ ಇಲ್ಲದಂತೆ."**

ಈ ವಾಕ್ಯವನ್ನು ಇದಕ್ಕು ಮೊದಲು ಕೂಡಾ ಹೇಳಿದ್ದೇವೆ. ಒಂದೇ ದೇವರ ಜ್ಞಾನ ಮೂರು ಭಾಗಗಳಾಗಿ ಬದಲಾಗಿ, ಮೂರು ಗ್ರಂಥಗಳಾಗಿ ಕಾಣಿಸುತ್ತಿದೆ. ಮೂರು ಗ್ರಂಥಗಳನ್ನು ಅಸೂಯೆ ಇಲ್ಲದಂತೆ ಗೌರವ ಭಾವನೆಯಿಂದ ಓದಿದರೆ ಆಗ ಮನುಷ್ಯನ ಜೀವನಕ್ಕೆ ಸಾರ್ಥಕತೆ ಏರ್ಪಡುತ್ತದೆ. ಆಗ ಅವನಿಗೆ ಧರ್ಮಗಳು ಅರ್ಥವಾಗುತ್ತವೆ. ಧರ್ಮಗಳಲ್ಲಿ ಅವನು ಇದ್ದಂತಾಗುತ್ತದೆ.

**ಪ್ರಶ್ನೆ :– ನೀವು ಇದಕ್ಕು ಮೊದಲ ಗ್ರಂಥದಲ್ಲಿ ಆದರಣಕರ್ತ ಬಂದು ಮೂರು ಮತಗಳನ್ನು ಏಕ ಮಾಡುತ್ತಾನೆ ಎಂದು ಹೇಳಿದ್ದೀರ. ನಂತರ ಆದರಣಕರ್ತ ಇಲ್ಲಿಯವರೆಗು ಬರಲಿಲ್ಲ, ನಂತರ ಕಾಲದಲ್ಲಿ ಕೂಡಾ ಬರುವುದಿಲ್ಲ ಎಂದು ಹೇಳಿದ್ದೀರಲ್ಲವೇ! ನೀವು ಅಲ್ಲಿ ಬರುತ್ತಾನೆಂದು ಹೇಳಿದ್ದೀರ, ಇಲ್ಲಿ ಬರುವುದಿಲ್ಲವೆಂದು ಎರಡು ವಿಧಗಳು ಹೇಳಿದ್ದೀರ. ನಿಮ್ಮ ಮಾತಿನಲ್ಲಿ ಯಾವುದು ನಿಜ?**

**ಉತ್ತರ :–** ನಿಮಗೆ ಅರ್ಥವಾಗದೆ ನನ್ನನ್ನು ಎರಡು ವಿಧಗಳಲ್ಲಿ ಮಾತನಾಡುತ್ತಿದ್ದಾನೆಂದು ಹೇಳುತ್ತಿದ್ದೀರ. ನೀವು ಕೇಳಿದ ಪ್ರಶ್ನೆಗೆ ಆದರಣಕರ್ತ ಇದಕ್ಕುಮುನ್ನ

ಬರಲಿಲ್ಲವೆಂದು, ನಂತರ ಬರುವುದಿಲ್ಲವೆಂದು ಹೇಳಿದ್ದೇನೆ. ಭೂತಕಾಲದಲ್ಲಿ ಬರಲಿಲ್ಲ, ಭವಿಷ್ಯತ್ತಿನಲ್ಲಿ ಬರುವುದಿಲ್ಲ. ವರ್ತಮಾನದಲ್ಲಿ ಬಂದಿರಬಹುದು ಎಂದು ಅರ್ಥ ಅಲ್ಲವೇ! ಪ್ರಸ್ತುತ ಕಾಲದಲ್ಲಿ ಆದರಣಕರ್ತ ಇಲ್ಲವೆಂದು ನಾನು ಹೇಳಲಿಲ್ಲ ಅಲ್ಲವೇ! ಈಗ ಬಂದಿದ್ದಾನೆ ಆದ್ದರಿಂದ ಭವಿಷ್ಯತ್ತಿನಲ್ಲಿ ಇನ್ನು ಬರುವುದಿಲ್ಲ. ನಡೆದುಹೋದ ಕಾಲದಲ್ಲಿ ಬರಲಿಲ್ಲವೆಂದು ಹೇಳಿದ್ದೇನೆ. ನಿಮಗೆ ಗ್ರಹಿಸಿಕೊಳ್ಳುವ ಶಕ್ತಿ ಇಲ್ಲದೆ ನಾನು ಸರಿಯಾಗಿಲ್ಲ ಎಂದರೆ ಹೇಗೆ? ಆದರಣಕರ್ತ ಹೇಳಿದರೂ ನಾನು ಹೇಳುವುದೇ ಹೇಳುತ್ತಾನೆ. ಮೂರು ಮತ ಗ್ರಂಥಗಳನ್ನು, ಮೂರು ದೈವಗ್ರಂಥಗಳೆನ್ನುವ ಹೆಸರಿನಿಂದ ಹೇಳಿರಿ. ಅವುಗಳನ್ನು ಎಂದಿಗಾದರೂ ಮತಗ್ರಂಥಗಳೆನ್ನುವ ಹೆಸರಿನಿಂದ ಕರೆಯಬೇಡಿರಿ. ಹಾಗೆ ಮೂರು ಗ್ರಂಥಗಳನ್ನು ಗೌರವಿಸಿದಾಗ ನೀನು ದೇವರ ದೃಷ್ಠಿಯಲ್ಲಿ ಬೀಳುತ್ತೀಯಾ. ಅಲ್ಲಿಯವರೆಗು ನೀನು ಎಷ್ಟು ಪ್ರಾರ್ಥನೆಗಳು ಮಾಡಿದರೂ ಎಷ್ಟು ವಿಶ್ವಾಸಿಯಾಗಿ ಹೇಳಿಕೊಂಡರೂ ನೀನು ದೇವರ ದೃಷ್ಠಿಯಲ್ಲಿ ಇರುವುದಿಲ್ಲ.

**ಪ್ರಶ್ನೆ :– ನೀವು ಯಾವ ಮತದಲ್ಲಿ ಹುಟ್ಟಿದ್ದೀರಾ?**

**ಉತ್ತರ :–** ಹಿಂದೂಮತದಲ್ಲಿ (ಇಂದೂ ಮತದಲ್ಲಿ).

**ಪ್ರಶ್ನೆ :– ಹಿಂದೂ ಮತದಲ್ಲಿ ಹುಟ್ಟಿದ್ದೀಯಾ ಆದ್ದರಿಂದ ನಿನ್ನನ್ನು ಹಿಂದೂ ಎಂದು ಕರೆಯುತ್ತಾರೆ. ಆಗ ನಿನಗೆ ಒಂದು ಮತವಿದ್ದಂತೆ ಅಲ್ಲವೆ!**

**ಉತ್ತರ :–** ನನ್ನನ್ನು ಹಿಂದೂ ಎಂದು ಕರೆಯುತ್ತಾರೆ. ನಾನು ಹಿಂದೂವೆಂದು ಹೇಳಲಿಲ್ಲ. ನಾನು ಹಿಂದೂ ಎಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಆಗ ನಾನು ಹಿಂದೂವೆಂದು ಹೇಗೆ ಹೇಳಬೇಕು? ಮನುಷ್ಯರಿಗೆ ಮತ ಇರುತ್ತದೆ ಆದರೆ ಯೋಗಿ ಆದವನಿಗೆ ಮತ ಇರುವುದಿಲ್ಲ. ನಾನು ಯೋಗಿಯು ನನಗೆ ಮತ ಇರುವುದಿಲ್ಲ.

**ಪ್ರಶ್ನೆ :– ನೀವು ಯಾವ ಕುಲದಲ್ಲಿ ಹುಟ್ಟಿದ್ದೀರಾ?**

**ಉತ್ತರ :–** ಕಮ್ಮ (ಚೌದರಿ) ಕುಲದಲ್ಲಿ ಹುಟ್ಟಿದ್ದೇವೆ. ಆದರೇ ನಾನು ಯೋಗೀಶ್ವರನು ಆದ್ದರಿಂದ ನನಗೆ ಕುಲಮತಗಳು ಇರುವುದಿಲ್ಲ.

**ಪ್ರಶ್ನೆ :– ನೀನು ದೇವರನ್ನು ನೋಡಿದ್ದೀಯಾ?**

**ಉತ್ತರ :–** ನೋಡಲಿಲ್ಲ. ನೋಡಬೇಕಾದ ಅವಶ್ಯಕತೆ ನನಗಿಲ್ಲ.

**ಪ್ರಶ್ನೆ :– ನೀನು ಕಷ್ಟಸುಖಗಳನ್ನು ಅನುಭವಿಸುತ್ತಿದ್ದೀಯಾ ಅಲ್ಲವೆ! ಅನುಭವಿಸುವಾಗ ಏನನಿಸುತ್ತದೆ?**

**ಉತ್ತರ :–** ಇನ್ನೊಂದುಸಲ ಹುಟ್ಟಬಾರದು ಎಂದು ಅಂದುಕೊಳ್ಳುತ್ತೇನೆ.

**ಪ್ರಶ್ನೆ :– ಮೂರು ದೈವಗ್ರಂಥಗಳನ್ನು ನೋಡಿದರೆ ನಿಮಗೆ ಏನನಿಸುತ್ತದೆ?**

**ಉತ್ತರ :–** ಹೆಂಗಸರ ಕೂದಲನ್ನು ತಲೆ ಹಿಂದಿನಭಾಗದಲ್ಲಿ ಮೂರು ಭಾಗಗಳಾಗಿ ಮಾಡಿ ಒಂದರಮೇಲೊಂದು ಇಟ್ಟು ಹೆಣೆದರೆ ಜಡೆಯಾಗುತ್ತದೆ. ಹಾಗೆ ನಾರನ್ನು ಕೆಲವನ್ನು ಒಂದು ಭಾಗವಾಗಿ ಹುರಿ ಇಟ್ಟು ಮೂರು ಹುರಿಗಳನ್ನು ಬೆರೆಸಿ ವಸೆಯುತ್ತಾ ಬಂದರೆ ಹಗ್ಗವಾಗುತ್ತದೆ. ಮೂರು ಭಾಗಗಳ ಕೂದಲನ್ನು ಹೆಣೆದರೆ ಜಡೆ, ಮೂರು ಭಾಗಗಳಾಗಿರುವ ನಾರನ್ನು ಸೇರಿಸಿ ವಸೆದರೆ ಬಲವಾದ ಹಗ್ಗ ತಯಾರಾಗುತ್ತದೆ. ಹಾಗೆ ಮೂರು ದೈವಗ್ರಂಥಗಳ ಜ್ಞಾನವನ್ನು ಬೆರೆಸಿದರೆ ಕರ್ಮಗಳ ಪಾಲಿಗೆ ಸಿಂಹವಾಗುತ್ತದೆ. ಮೂರು ಗ್ರಂಥಗಳ ಜ್ಞಾನ ಸಿಂಹದಂತೆ ಇರುವಾಗ, ಅಜ್ಞಾನ, ಅಧರ್ಮಗಳು ಜಿಂಕೆಯಂತೆ ಆಗುತ್ತವೆ. ಈಗ ಮೂರು ಗ್ರಂಥಗಳಾಗಿ ಬೇರೆಬೇರೆಯಾಗಿ ಇರುವುದರಿಂದ ಭಾಗಗಳಾದ ಸಿಂಹದಂತೆ ಇರುತ್ತದೆ. ಮೂರು ಗ್ರಂಥಗಳ ಜ್ಞಾನ ಸೇರಿದರೆ **ಜ್ಞಾನಸಿಂಹ** ಹೊರಡುತ್ತದೆ. ಮೂರು ಗ್ರಂಥಗಳ ಜ್ಞಾನವನ್ನು ಹುರಿ ಇಟ್ಟರೆ ಸಿಂಹದಂತೆ ಬದಲಾಗಿಹೋಗುತ್ತದೆ. ಕರ್ಮಗಳೆನ್ನುವ ಜಿಂಕೆಗಳನ್ನು ಬೇಟೆಯಾಡುತ್ತದೆ.

**ಪ್ರಶ್ನೆ :– ನಿಮಗೆ ಅತ್ಯಂತ ಇಷ್ಟವಾದುದು ಯಾವುದು?**

**ಉತ್ತರ :–** ದೈವಜ್ಞಾನ. ಬೋಧಿಸುವ ವಿಧಾನ.

**ಪ್ರಶ್ನೆ :– ಭಗವದ್ಗೀತೆಯಲ್ಲಿ ನಿಮಗೆ ಅತ್ಯಂತ ಇಷ್ಟವಾದ ಶ್ಲೋಕ ಯಾವುದು?**

**ಉತ್ತರ :–** ಮೋಕ್ಷ ಸನ್ಯಾಸ ಯೋಗ ಎನ್ನುವ ಅಧ್ಯಾಯದಲ್ಲಿ 66ನೇ ಶ್ಲೋಕ. **"ಸರ್ವಧರ್ಮಾನ್ ಪರಿತ್ಯಜ್ಯ"** ಎನ್ನುವ ಶ್ಲೋಕ ಇಷ್ಟವಾದುದು.

**ಪ್ರಶ್ನೆ :– ಬೈಬಲ್ ಗ್ರಂಥದಲ್ಲಿ ನಿಮಗೆ ಇಷ್ಟವಾದ ವಾಕ್ಯ ಯಾವುದು?**

**ಉತ್ತರ :– (ಯೋಹಾನ್ 10–30) "ನಾನೂ ತಂದೆಯೂ ಏಕವಾಗಿದ್ದೇವೆಂದು ಅವರೊಂದಿಗೆ ಹೇಳಿದನು."** ಎನ್ನುವ ವಾಕ್ಯ ಅತ್ಯಂತ ಇಷ್ಟವಾದುದು ಎಂದು ಹೇಳುತ್ತಿದ್ದೇನೆ.

**ಪ್ರಶ್ನೆ :– ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ನಿಮಗೆ ಅತ್ಯಂತ ಇಷ್ಟವಾದ ಆಯತ್ ಯಾವುದು?**

**ಉತ್ತರ :–** 112ನೇ ಸೂರಾ ಅಲ್ ಇಖ್ಲಾಸ್‌ನಲ್ಲಿ ಒಟ್ಟು ನಾಲ್ಕು ಆಯತ್‌ಗಳು ಇವೆ. ಆ ನಾಲ್ಕು ಆಯತ್‌ಗಳು ನನಗೆ ಇಷ್ಟವಾದವು.

**ಪ್ರಶ್ನೆ :– ವೇಮನ ಯೋಗಿ ಪದ್ಯಗಳಲ್ಲಿ ಯಾವ ಪದ್ಯ ನಿಮಗೆ ಇಷ್ಟವಾದುದು?**

**ಉತ್ತರ :– "ಪತಿಯೊಪ್ಪಿದರೆ ಸತಿಯೊಪ್ಪುವಳು"** ಎನ್ನುವ ಪದ್ಯ ನನಗೆ ಬಹಳ ಇಷ್ಟವಾದುದು.

**ಪ್ರಶ್ನೆ :– ನೀವು ಗ್ರಂಥಗಳನ್ನು ಬರೆಯುತ್ತಿದ್ದೀರ. ಒಂದು ವರ್ಷದೊಳಗೆ ನೂರು (100) ಗ್ರಂಥಗಳು ಪೂರ್ತಿ ಆಗುತ್ತದೆಂದು ಹೇಳಿದ್ದೀರ. ಇಲ್ಲಿಗೆ ಮುದ್ರಣೆ ಆಗಿರುವವು 85 ಇವೆ. ನಿಮ್ಮ ಗ್ರಂಥಗಳಲ್ಲಿ ಒಂದು ಪ್ರತ್ಯೇಕತೆ ಇದೆಯೆಂದು ಕೆಲವರು ಪ್ರತ್ಯಕ್ಷ ಸಾಕ್ಷಿಗಳು ಹೇಳುತ್ತಿದ್ದಾರೆ. ಪ್ರಪಂಚದಲ್ಲಿ ಇಲ್ಲಿಯವರೆಗು ನಡೆಯದ ದೊಡ್ಡ ಚರ್ಯ ನಿಮ್ಮ ಗ್ರಂಥಗಳ ಹತ್ತಿರ ನಡೆಯುತ್ತಿದೆಯೆಂದು ಕೇಳಿದ್ದೇವೆ. ಅದು ಹೇಗೆ ಸಾಧ್ಯವಾಗುತ್ತಿದೆ. ನಿಮ್ಮ ಗ್ರಂಥಗಳಿಗೆ ಕರ್ಮವನ್ನು ಹರಿಸುವ ಶಕ್ತಿ ಹೇಗೆ ಬಂದಿದೆ.?**

**ಉತ್ತರ :–** ಕೆಲವು ಹೇಳುವ ವಿಷಯಗಳಿರುತ್ತವೆ, ಕೆಲವು ಹೇಳದ ವಿಷಯಗಳಿರುತ್ತವೆ. ಯಾರವು ಅವರು ದೊಡ್ಡದಾಗಿ ಹೇಳಿಕೊಳ್ಳಬಾರದು. ಹಾಗೆ ಹೇಳಿಕೊಂಡರೆ ಅವೆಲ್ಲವೂ ಬರೀದಾಗುತ್ತವೆ. ಒಂದು ಮಾತ್ರ ಸತ್ಯ. ನನ್ನ ಗ್ರಂಥಗಳು ಯಾವಾದರೂ ಅದರಲ್ಲಿ ಸ್ವಲ್ಪ ಶಕ್ತಿ ಇರುತ್ತದೆ. ಯಾವ ಗ್ರಂಥವಾದರೂ ನಿನ್ನ ಶರೀರ ಬಲಕ್ಕಿಂತ ಹೆಚ್ಚಿನ ಬಲ ಹೊಂದಿರುತ್ತದೆಂದು ನೀವೇ ತಿಳಿಯುತ್ತೀರ. ಪ್ರತಿ ಗ್ರಂಥದಲ್ಲಿಯೂ ಒಬ್ಬ ದೇವರ ಪಾಲಕನು

ಸೇರಿರುತ್ತಾನೆ. ಆತನು ನನ್ನ ಗ್ರಂಥಗಳನ್ನು ವಿಶ್ವಾಸಿಸಿದವರ ಕರ್ಮಗಳನ್ನು ಸ್ವಲ್ಪಸ್ವಲ್ಪವಾಗಿ ದಹಿಸಿ ಹಾಕುತ್ತಿರುತ್ತಾನೆ. ಒಂದೇಸಲಕ್ಕೆ ಕರ್ಮ ಹೋಗುವುದಿಲ್ಲ ಆದರೆ, ಅಂಟಿಕೊಂಡಿರುವುದು ಏನಾದರೂ ಸ್ವಲ್ಪಸ್ವಲ್ಪವಾಗಿ ಸುಡುತ್ತಾ ಬಂದಂತೆ ಕರ್ಮಗಳು ಸುಟ್ಟುಹೋಗುತ್ತಿರುತ್ತವೆ. ನನ್ನ ಗ್ರಂಥಗಳಲ್ಲಿ ಗ್ರಹಗಳು ಮತ್ತು ಭೂತಗಳು ಯಾವುದೊ ಒಂದು ಸೇರಿರುತ್ತದೆಂದು ಹೇಳುತ್ತಿದ್ದೇವೆ. ನನ್ನ ಆಜ್ಞೆ ಪ್ರಕಾರ ಯಾವುದು ಅಲ್ಲ ಆದರೆ, ದೇವರ ಆಜ್ಞೆ ಪ್ರಕಾರ ಎಲ್ಲಾ ನಡೆಯುತ್ತಿರುತ್ತವೆ. ನಾನು ಬರೆದ ಗ್ರಂಥಗಳೆಲ್ಲ ನಾನು ಬರೆದಿರುವವು ಅಲ್ಲ. ನಾನು ಮೊದಲಿನಿಂದ ಅದೇ ವಿಷಯವನ್ನೇ ಹೇಳುತ್ತಿದ್ದೇನೆ. ನಾನು ಸಾಮಾನ್ಯ ಮನುಷ್ಯನೇ ಆದರೆ ಸರ್ವಕ್ಕೆ ಅಧಿಕಾರಿ, ದೇವರು ಆದವನೇ ನಿಜವಾದ ಗ್ರಂಥಕರ್ತ. ಮೇಲ್ನೋಟಕ್ಕೆ ನಾನು ಬರೆದಂತೆ ಕಾಣಿಸಿದರೂ ಬರೆದವನು ಕಾಣಿಸದ ದೇವರೇ. ನಾನು ಮೇಲ್ನೋಟಕ್ಕೆ ಕಾಣಿಸುವ ಗೊಂಬೆಯಂತವನು ಮಾತ್ರವೇ. ವಾಸ್ತವವಾಗಿ ಹೇಳಿದರೆ ಪ್ರಪಂಚದಲ್ಲಿ ಯಾರೂ ಬರೆಯಲಾರದ, ಯಾರಿಗೂ ತಿಳಿಯದ ರಹಸ್ಯಗಳು ಗ್ರಂಥಗಳಲ್ಲಿ ಇವೆ. ಹಾಗೆ ಬರೆಯುವುದು ಮನುಷ್ಯರಾದ ನಮಗೆ ಸಲ್ಲುವುದಿಲ್ಲ. ಸ್ವತಃವಾಗಿ ದೇವರು ಬರೆದ ಗ್ರಂಥಗಳಾಗಿ ನಾನು ತಿಳಿಯುತ್ತಿದ್ದೇನೆ ಆತನೇ ಪ್ರಜೆಗಳಿಗೆ ಜ್ಞಾನ ತಿಳಿಸುವ ಸಲುವಾಗಿ ನನ್ನ ಮೂಲಕ ಬರೆದಿದ್ದಾನೆಂದು ಹೇಳುತ್ತಿದ್ದೇನೆ. ಪ್ರಪಂಚಕ್ಕೆ ಅಧಿಕಾರಿಯಾದ ದೇವರು ಬರೆದ ಗ್ರಂಥಗಳನ್ನು ಮಹಿಮೆಪಡಿಸುವುದಕ್ಕಾಗಿ ಆ ಗ್ರಂಥಗಳಲ್ಲಿ ಗ್ರಹಗಳು, ಭೂತಗಳು ಸೇರಿದ್ದು ದೇವರನ್ನು ನಂಬಿದವರ ಶರೀರಗಳಿಗೆ ಅಂಟಿಕೊಂಡು ಅವರಲ್ಲಿರುವ ಕರ್ಮಗಳನ್ನು ಸುಡುತ್ತಿದ್ದಾರೆ. ಗ್ರಂಥಗಳು ಕೆಲವರ ಶರೀರಗಳಿಗೆ ಅಂಟಿಕೊಂಡಿರುವ ದೃಶ್ಯಗಳನ್ನು ನಂತರ ಪುಟದಲ್ಲಿ ನೋಡಬಹುದು. ನನ್ನ ಮೂಲಕ ಬರೆಯಲ್ಪಟ್ಟ ಗ್ರಂಥಗಳಿಗೆ ಅಷ್ಟುಶಕ್ತಿ ಬರುವುದು ಗ್ರಹಗಳು, ಭೂತಗಳು ಗ್ರಂಥಗಳಲ್ಲಿ ಸೇರಿರುವುದರಿಂದ ನನ್ನನ್ನು ಕೂಡಾ ಕೆಲವರು ಗೌರವ ಭಾವನೆ ಯಿಂದ ನೋಡುತ್ತಿದ್ದಾರೆ. ಗ್ರಂಥಗಳನ್ನು ಓದಲಾರದವರು, ಓದು ಬರದವರು, ಜ್ಞಾನವನ್ನು ತಿಳಿಯುವ ಗ್ರಾಹಿತಶಕ್ತಿ ಇಲ್ಲದವರು ತಮ್ಮ ವಿಶ್ವಾಸವನ್ನು ಗ್ರಂಥಗಳ ಮೇಲೆ ಇಟ್ಟುಕೊಂಡಾಗ, ಅವು ಅವರ ಕರ್ಮಗಳನ್ನು ಕಡಿಮೆಮಾಡುವುದಕ್ಕೆ

ಪ್ರಯತ್ನಿಸುತ್ತಿವೆ. ಇದು ಪ್ರಪಂಚದಲ್ಲಿ ಇಲ್ಲಿಯವರೆಗು ನಡೆಯದ ಪ್ರಕ್ರಿಯೆಯೆಂದು ಸಗೌರವವಾಗಿ ಹೇಳುತ್ತಿದ್ದೇವೆ. ಗ್ರಂಥಗಳನ್ನು ಓದಿ ಅದರಲ್ಲಿನ ಜ್ಞಾನವನ್ನು ತಿಳಿದುಕೊಂಡರೆ ಅವರ ಕರ್ಮಗಳು ಇನ್ನೂ ವೇಗವಾಗಿ ಹೋಗುತ್ತವೆಂದು ತಿಳಿಸುತ್ತಿದ್ದೇನೆ.

ಈ ಗ್ರಂಥಗಳನ್ನು ಪ್ರಚಾರ ಮಾಡಿ ಇತರರು ಜ್ಞಾನ ತಿಳಿಯುವುದಕ್ಕೆ ಅವಕಾಶ ಕಲ್ಪಿಸಿದವರಿಗೆ, ಭಗವದ್ಗೀತೆ ಭಕ್ತಿಯೋಗ ಎನ್ನುವ ಅಧ್ಯಾಯದಲ್ಲಿ 10ನೇ ಶ್ಲೋಕದಲ್ಲಿ ಹೇಳಿದ ಫಲಿತ ಲಭಿಸುತ್ತದೆ. ಅವರು ನಿಜವಾಗಲು ದೇವರ ಸೇವೆ ಮಾಡಿದವರಾಗುತ್ತಾರೆ.

**ಸಮಾಪ್ತಿ**



**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯವಲ್ಲ.**
**ಅಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**

1. **ತಿಳಿಯದ ಆಕಾಶ ಒಂದಾಗಿದ್ದು**
   **ತಿಳಿಯುವ ಸೂರ್ಯ, ಚಂದ್ರ,**
   **ನಕ್ಷತ್ರಗಳು ಮೂರು (ತ್ರೈತ) ಇವೆ.**
2. **ತಿಳಿಯದ ಕಾಲ ಒಂದಾಗಿದ್ದು**
   **ತಿಳಿಯುವ ದಿನ, ಮಾಸ, ಸಂವತ್ಸರ**
   **ಮೂರು (ತ್ರೈತ) ಇವೆ.**
3. **ತಿಳಿಯದ ಪರಮಾತ್ಮ ಒಂದಾಗಿದ್ದು**
   **ತಿಳಿಯುವ ಅಂಡಜ, ಪಿಂಡಜ,**
   **ಉದ್ಭಿಜ ಮೂರು (ತ್ರೈತ) ಇವೆ.**

ಪ್ರಮುಖರ ಲೇಖ

Sakshi News pepar, 21-01-2014



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೆ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಧರ್ಮಚಕ್ರ

ದೇವರು ಧರಿಸಿದ ಧರ್ಮಚಕ್ರ




Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**



www.thraithashakam.org